ಶ್ರೀ

# ಫಲಾಹಾರಶಿವಯೋಗೀಶ್ವರ ಪುರಾಣವು




ಬಳ್ಳಾರಿ.

ಸರ್ವದರ್ಶನತೀರ್ಥ, ಮೈಸೂರು ಆಸ್ಥಾನ ಪಂಡಿತ, ಕಲಾಪ್ರಪೂರ್ಣ,

ಶಿವಕವಿವರ್ಯ, ಶಿ. ಪಂ. ವೈ. ನಾಗೇಶಕವಿ

ವಿರಚಿತವಾದುದು.



ಶಾ. ಶಕ ೧೮೭೫ ಸನ್ ೧೯೫೩.

ಬೆಲೆ: ೫—೦—೦.

ಕರ್ನಾಟಕ ಸಾಹಿತ್ಯ ಮಂದಿರ,

ಧಾರವಾಡ.




ಶ್ರೀ ಅವರಾದಿ ಫಲಾಹಾರೇಶ್ವರ ಮಠಾಧ್ಯಕ್ಷ ಆದ್ಯ ಮಹಾತಪಸ್ವಿ
ಶ್ರೀ. ನಿ. ಪ್ರ. ಫಲಾಹಾರ ಮಹಾಶಿವಯೋಗಿಗಳು.



ಶ್ರೀ ಅರಬಾವಿ ದುರದುಂಡೀಶ್ವರ ಮಠಾಧ್ಯಕ್ಷ ಮಹಾತಪಸ್ವಿ
ಶ್ರೀ. ನಿ. ಪ್ರ. ಮಹಾಂತ ಶಿವಯೋಗಿಗಳು.

# ಅರ್ಪಣ ಪತ್ರಿಕೆ.



ಭಕ್ತಿ, ಜ್ಞಾನ, ವೈರಾಗ್ಯಾದಿ ಸಕಲನಿಜಜಂಗಮಲಕ್ಷಣ ಗಳಿಂದೊಪ್ಪುವ ಚರಾಚಾರ್ಯ ವೃದ್ಧಮಹಾತಪಸ್ವಿ ಅರಬಾವಿ ದುರದುಂಡೀಶ್ವರಮಠಾಧ್ಯಕ್ಷ ಶ್ರೀ. ನಿ. ಪ್ರ. ಮಹಾಂತ ಶಿವ ಯೋಗಿಗಳವರ ಸತ್ಕೃಪಾಶೀರ್ವಾದಬಲದಿಂದ ಭೂಮಿಯಲ್ಲಿ ಆಚಂದ್ರಾರ್ಕವಾಗಿ ಸಫಲವಾಗಿ ಮೆರೆಯಲೆಂಬ ಸದುದ್ದೇಶದಿಂದ ಆ ಮಹಾತ್ಮರ ಪೂಜ್ಯಪಾದಪದ್ಮಯುಗ್ಮಕ್ಕೆ ಈ ಪವಿತ್ರಗ್ರಂಥ ಪುಷ್ಪವು ಭಕ್ತಿಕಾಣಿಕೆಯಾಗಿ ಅ-ದೀ-ಸಾ-ನ- ಪೂರ್ವಕವಾಗಿ ಅರ್ಪಿಸಲ್ಪಟ್ಟಿದೆ.

**ಶಿವಮೂರ್ತಿಸ್ವಾಮಿ ಫಲಾಹಾರೇಶ್ವರಮಠ,**
**ಅವರಾದಿ.**



### ಶ್ರೀ ನಾಗೇಶಕವಿಕೃತ

# ಶ್ರೀ ಫಲಾಹಾರಶಿವಯೋಗೀಶ್ವರಾಷ್ಟಕವು.

---

ಗುರುವೇ ಭಕ್ತಸಮೂಹಕಲ್ಪತರುವೇ ನಿನ್ನಂಘ್ರಿಪಂಕೇಜದೋಳ್ ।
ನಿರುತಂ ಧ್ಯಾನಮಧುಪ್ರಮತ್ತಮೆನಿಸುತ್ತಂ ಸ್ತೋತ್ರಝುಂಕಾರಮಂ ॥
ನೆರೆ ಗೈಯುತ್ತಿರುವಾ ದ್ವಿರೇಫಪದಮಂ ಮನ್ಮಾನಸಕ್ಕಿತ್ತು ನೀಂ ।
ಪೊರೆಯೈ ಶ್ರೀಶಿವಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೧॥

ಶಿವನೆಂಬೊಳ್ಪೆಸರಿಂದಸೂಟಿಮಠದೊಳ್ ವೈವೆತ್ತು ನೀನಾಂತ ಶೈ ।
ಶವದೊಳ್ ಕೂರ್ಮೆಯೊಳ್ಪೈದೆ ಕಾಯ್ದು ತುರುಗಳ್ ನಿನ್ನಲ್ಲದಾವಳ್ತಿಯಂ ॥
ತವೆ ತಾಳ್ದಿರ್ದವೊ ಸಂತತಂ ನನಗವಾ ಸತ್ಪ್ರೇಮಮಂ ಕೊಟ್ಟು ನಿ ।
ನ್ನವನಂ ಮಾಡು ಸುಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೨॥

ಚರವೇಷಾಸ್ಪಿತನಾಗಿ ಬಂದ ಗಿರಿಯಾ ಮಲ್ಲಯ್ಯನಂ ಕಂಡು ನಿ ।
ರ್ಭರಮೋದಾಬ್ಧಿಯೊಳೀಸಿ ತಚ್ಚರಣಪೂಜಾಲೋಲನಾದಂದು ನೀಂ ॥
ನೆರೆ ತಾಳ್ದಾ ಗುರುಭಕ್ತಿಯಂ ಕಲಿವ ಶಿಷ್ಯತ್ವಂ ಮದೀಯಾತ್ಮದ ।
ಲ್ಲಿರುವಂತಾಗಿಸು ಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೩॥

ವರಕೊಣ್ಣೂರ ಶಿವಾರ್ಯನಾ ಮಠದೊಳತ್ಯಾಮೋದದಿಂದುರ್ ಭ ।
ಕ್ತರ ವೃಂದಕ್ಕೆ ಸುವೀರಶೈವಮತತತ್ವಾರ್ಥಂಗಳಂ ನಾಡೆ ಬಿ ॥
ತ್ತರಿಸಿರ್ದಾ ಭವದೀಯ ಬೋಧವಚದಂತಾಂ ಬಾಳ್ವ ಸದ್ವೃತ್ತಿಯಂ ।
ನೆರೆ ನೀಡೈ ಶಿವಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೪॥

ನಲವಿಂದಂದು ಮಲಾಪಹಾರನದಿಯೋಳ್ ಪೂರ್ಣಪ್ರವಾಹಸ್ಥಕಂ ।
ಬಳ ಭವ್ಯಾಸನದಲ್ಲಿ ಮಂಡಿಸುತದಂ ನೀಂ ದಾಂಟದಂತೆನ್ನುಮಂ ॥
ಮಲದುಃಖಂಗಳ ಮೂರನಾಂತ ಮಮಕಾರಾಂಭೋಧಿಯಂ ದಾಂಟಿಸೈ ।
ಮಲವಿಧ್ವಂಸಕ ಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೫॥

ನರಗುಂದಕ್ಷಿತಿನಾಥನಾವವಿಧದಿಂ ದೂರಾಗದಿರ್ಪೊಂದು ಭೀ ।
ಕರರೋಗಕ್ಕೊಳಗಾಗಿ ಬಂದು ಮೊರೆವೊಕ್ಕಂದಾ ರುಜಾಬಾಧೆಯಂ ॥
ವರಮಂತ್ರೋದಕದಿಂ ನಿವಾರಿಸಿದ ನಿನ್ನಾ ಭಕ್ತವಾತ್ಸಲ್ಯದಿಂ ।
ಪೊರೆಯೆನ್ನಂ ಶಿವಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೬॥

ಶಿವಲಿಂಗಾರ್ಚನ ಸೌಖ್ಯದೊಳ್ ಬೆರೆದು ನೀನಿರ್ಪಂದು ನಿನ್ನಂಘ್ರಿಯಂ ।
ತವೆ ಪೊರ್ದಲ್ಬರುವಾಗಳಲ್ಲಿ ಹೊಳೆಯೊಳ್ ತಾಂ ಬಿದ್ದು ತೇಲಾಡುತಿ ॥
ರ್ಪವನಂ ಬಾಲಕನಂ ತ್ವದೀಯ ಕರದಿಂದೆತ್ತುತ್ತೆ ಕಾಪಾಡಿದಂ ।
ತಿವನಂ ರಕ್ಷಿಸು ಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೭॥

ಅವರಾದಿಸ್ಥಿತ ಲೋಕಮಾನ್ಯ ಮಠದೊಳ್ ನೀನಾವಗಂ ಭವ್ಯತೇ ।
ಜವೆ ವ್ಯೈಯಾಗೆ ಸಮಾಧಿಯೊಳ್ ನೆಲಸುತಂ ಭಕ್ತರ್ಕಳಿಷ್ಟಾರ್ಥವೀ ॥
ಯುವ ಕಾರುಣ್ಯದ ವಾರ್ಧಿಯೊಳ್ ಬಿನದಿಪಾ ನೀರಾನೆಯಾಗಿರ್ದ ಬಾ ।
ಳುವುದಂ ನೀಡು ಸುಯೋಗಿರಾಜನೆ ಫಲಾಹಾರೇಶನೇ ಪೂಜ್ಯನೇ ॥೮॥

ಗುರುಪಾದಾಬ್ಜದಯಾಸುಲಬ್ಧಕವಿತಾಶ್ರೀಭೂಷನಾಗೇಶನಾ ।
ದರದಿಂದಂ ಬರೆದೀ ಶುಭಾಷ್ಟಕದ ಪಾರಾಸಕ್ತಿಯುಳ್ಳರ್ಗೆ ತಾಂ ॥
ದೊರೆಕೊಳ್ಗುಂ ವರಭೋಗಮೋಕ್ಷಫಲಸಂಪದ್ದಾಯಕಂ ತತ್ಕೃಪಾ ।
ವರಣಶ್ರೀಶಿವಯೋಗಭೂಷಣಫಲಾಹಾರೇಶ್ವರಾನುಗ್ರಹಂ ॥೯॥ ಶ್ರೀಃ॥

— ಶ್ರೀ ಫಲಾಹಾರಶಿವಯೋಗೀಶ್ವರಾಷ್ಟಕವು ಮುಗಿದುದು. —





ಶ್ರೀ ಅವರಾದಿ ಫಲಾಹಾರೇಶ್ವರ ಮಠಾಧ್ಯಕ್ಷ
ಶ್ರೀ. ನಿ. ಪ್ರ. ಸಂಗನೋಶ್ವರ ಮಹಾಸ್ವಾಮಿಗಳು.

ಕಳಾಪ್ರಪೂರ್ಣ-ಸರ್ವದರ್ಶನ ತೀರ್ಥ-ಶಿವಕವಿವರ್ಯ ಶಿ. ಷಂ. ವೈ. ನಾಗೇಶಶಾಸ್ತ್ರಿಗಳು.
ಮೈಸೂರ ಆಸ್ಥಾನ ಪಂಡಿತ ವೀರಶೈವ ಕಾಲೇಜಿನ ಕನ್ನಡ ಪ್ರಾಧ್ಯಾಪಕರು, ಬಳ್ಳಾರಿ.

# ಶ್ರೀ ಫಲಾಹಾರಶಿವಯೋಗೀಶ್ವರಪುರಾಣದ

## ಮುದ್ರಣಕ್ಕೆ ಧನಸಹಾಯ ಮಾಡಿದ ಮಹನೀಯರ ಹೆಸರುಗಳು.

---

೧ ಶಿವಮೂರ್ತಿಯ್ಯಾ ಅಯ್ಯಪ್ಪಯ್ಯಾ ಸಾರಂಗಮಠ ಡಾಕ್ಟರ ಸಾ| ಸುರೇಬಾನ.
೨ ಮೇಗುಂಡಯ್ಯಾ ವೀರಯ್ಯಾ ತಾಳಕೋಡ ಸಾ| ಸುರೇಬಾನ.
೩ ಶಂಕರಪ್ಪಾ ಫಕೀರಪ್ಪಾ ಅಂಗಡಿ ಸಾ| ಸುರೇಬಾನ.
೪ ಅಖಂಡಪ್ಪಾ ಶಿವಪ್ಪಾ ಸೀರಿ ಸಾ| ಸುರೇಬಾನ.
೫ ನಾಗಪ್ಪಾ ಸಿದ್ಧಪ್ಪಾ ಚಿಕ್ಕೊಪ್ಪದ ಸಾ| ಅವರಾದಿ.
೬ ಕರಬಸಪ್ಪಾ ಮಲ್ಲಪ್ಪಾ ಮುದಕಟ್ಟಿ ಸಾ| ,,
೭ ಸುಬ್ರಾಯಪ್ಪಾ ಜಯರಾಮಪ್ಪಾ ಗಡದೆ ಸಾ| ಅವರಾದಿ.
೮ ಲಿಂಗಪ್ಪಾ ಶಿವಪ್ಪಾ ಎಲಿಗಾರ ಸಾ| ಅವರಾದಿ.
೯ ಚಿನ್ನಪ್ಪಾ ಸೀಲಪ್ಪಾ ಎಲಿಗಾರ ಸಾ| ಅವರಾದಿ
೧೦ ಬಸವಪ್ಪಾ ಲಕ್ಷ್ಮಪ್ಪಾ ಹಿರೇರಡ್ಡಿ ಸಾ| ಅವರಾದಿ.
೧೧ ಶಿವಪ್ಪಾ ಲಕ್ಷ್ಮಪ್ಪಾ ಪಲ್ಲೇದ ಶಾಳಾಮಾಸ್ತರ ಸಾ| ಅವರಾದಿ.
೧೨ ಬಸವಪ್ಪಾ ಮಹಾದೇವಪ್ಪಾ ಮೇಟಿ ಸಾ| ಅವರಾದಿ.
೧೩ ಗುರುನಾಥ ಬಾಳಾಜಿ ಗೋಖಲೆ ಸಾ| ಅವರಾದಿ.
೧೪ ಭೀಮಪ್ಪಾ ಬಸವಪ್ಪಾ ಮೇಟಿ ಸಾ| ಅವರಾದಿ.
೧೫ ಮಹಾದೇವಪ್ಪಾ ಬಸವಪ್ಪಾ ಮೇಟಿ ಸಾ| ಅವರಾದಿ
೧೬ ಲಿಂಗಪ್ಪಾ ಕೋಂ ಮಲ್ಲಯ್ಯಾ ಅಳ್ಳಯ್ಯನವರ ಸಾ| ಅವರಾದಿ.
೧೭ ಶಿವಪ್ಪಾ ಲಕ್ಷ್ಮಪ್ಪಾ ಪಾಟೀಲ ಸಾ| ಅವರಾದಿ.
೧೮ ಶಿವಪ್ಪಾ ಲಿಂಗಪ್ಪಾ ರೋಣದ ಸಾ| ಅವರಾದಿ.
೧೯ ಸಂಗಪ್ಪಾ ಬಸಪ್ಪಾ ಬಡಕಂಣವರ (ಕೊಣ್ಣೂರ) ಸಾ| ಅವರಾದಿ.
೨೦ ಅನ್ನದಾನೆಪ್ಪಾ ಲಿಂಗಪ್ಪಾ ಮೇಟಿ ಸಾ| ಅವರಾದಿ,
೨೧ ಬಸವಪ್ಪಾ ಮಲ್ಲಪ್ಪಾ ಮುದಕಂಣವರ ಸಾ| ಅವರಾದಿ.
೨೨ ಮಹಾದೇವಪ್ಪಾ ಬಸವಪ್ಪಾ ಬ್ಯಾಹಟ್ಟಿ ಸಾ| ರೇವಡಿಕೊಪ್ಪ ತಾ| ರಾಮದುರ್ಗ.
೨೩ ಹನುಮಂತಪ್ಪಾ ಭೀಮಪ್ಪಾ ಹನಸಿ ಸಾ| ರೇವಡಿಕೊಪ್ಪ ತಾ| ರಾಮದುರ್ಗ.
೨೪ ಪ್ರಭಪ್ಪಾ ದೊಡ್ಡಅಯ್ಯಪ್ಪಾ ಮುದೇನೂರ ಸಾ| ಕಿತ್ತೂರ ,,
೨೫ ವೆಂಕಪ್ಪಾ ಶಂಕರರಡ್ಡೆಪ್ಪಾ ಬೆನಾಳ ಸಾ| ಹಿರೇಕೊಪ್ಪ ಪೇತಾ: ನರಗುಂದ.

೨೬ ಬಸವಪ್ಪಾ ದ್ಯಾಮಪ್ಪಾ ವೀರಾಪೂರ ಸಾ। ಅಬ್ಬಿಗೇರಿ.
೨೭ ಗುರುಬಸವಪ್ಪಾ ಗವಿಯಪ್ಪಾ ವೀರಾಪೂರ ಸಾ। ಅಬ್ಬಿಗೇರಿ.
೨೮ ಮಲ್ಲಪ್ಪಾ ಶಿವಬಸವಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೨೯ ಬಸವರಡ್ಡೆಪ್ಪಾ ಸಣ್ಣಮಲ್ಲಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೦ ಶಿವಪ್ಪಾ ದೊಡ್ಡಮಲ್ಲಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೧ ಚೆನ್ನಪ್ಪಾ ಫಕೀರರಡ್ಡೆಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೨ ಶಿವಪ್ಪಾ ಮಲ್ಲಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೩ ಪರಪ್ಪಾ ಶಿವಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೪ ಗಿರಿಯಪ್ಪಾ ಮುದಕಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೫ ಶಿವಪ್ಪಾ ಬಸವಂತಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೬ ಫಕೀರರಡ್ಡೆಪ್ಪಾ ಶಿವಬಸವಪ್ಪಾ ದಾನರಡ್ಡಿ ಸಾ। ಮಲ್ಲಾಪೂರ.
೩೭ ಶಿವಪ್ಪ ನಾಗಪ್ಪ ಬೆಳಕೊಪ್ಪ ಸಾ। ಮಲ್ಲಾಪೂರ
೩೮ ಮಲ್ಲಪ್ಪ ಭೀಮಪ್ಪ ಚಿಕ್ಕರಡ್ಡಿ ಸಾ। ಮಲ್ಲಾಪೂರ.
೩೯ ದೊಡ್ಡಬಸವನಗೌಡಾ ತೋಟನಗೌಡಾ ಪಾಟೀಲ ಸಾ।ಮಲ್ಲಾಪೂರ.
೪೦ ಶಿವಲಿಂಗಪ್ಪ ದಾನರಡ್ಡಿ ಸಾ। ಬೆಳವಣಿಕಿ.
೪೧ ಶಿವಪ್ಪ ಗದಿಗೆಪ್ಪ ಭೂಪಲಾಪೂರ ಸಾ। ಹಡಗಲಿ.
೪೨ ಚೆನ್ನಬಸವಪ್ಪ ಬದನಿಕಾಯಿ ಸಾ। ಹದ್ಲಿ.
೪೩ ಗದಿಗೆಪ್ಪ ಅಯ್ಯಪ್ಪ ಸುಂಕದ ಸಾ। ಹದ್ಲಿ.
೪೪ ಗುರಪ್ಪ ದಂಡಿನ ಇಂಜನೀಯರ ಮುಕ್ಕಾಂ ರಾಮದುರ್ಗ.
೪೫ ಗಣಪ್ಪ ಗದಿಗೆಪ್ಪ ಬಳಗಾನೂರ ಸಾ। ಕೊಂಗವಾಡ.
೪೬ ಗೌಡಪ್ಪಗೌಡಾ ದೇಸಾಯಿಗೌಡರ ಸಾ। ಕೊಂಗವಾಡ.
೪೭ ವೀರಭದ್ರಪ್ಪ ಯಾವಗಲ್ಲ ಸಾ। ಆಲೂರ.
೪೮ ವೀರಭದ್ರಪ್ಪ ವೀರಪ್ಪ ವಾಳದ ಸಾ। ನರಗುಂದ.
೪೯ ಬಸವಪ್ಪ ಅಡಿವೆಪ್ಪ ಎರಗುಪ್ಪಿ ಸಾ। ಶಲವಡಿ.
೫೦ ಶಿವಪ್ಪ ಮಲ್ಲಪ್ಪ ಮೇಗೂರ (ಅ-ಎ-ಓ-ಸಾಹೇಬ) ಸಾ। ಮುಂಡೂರ (ಬಿ.ಟಿ.)
೫೧ ಬಸವನಗೌಡಾ ಕುದರಿ ಸಾ। ಹದ್ಲಿ.

ಈ ಎಲ್ಲ ಮಹನೀಯರಿಗೆ ಶ್ರೀ ಭಕ್ತವತ್ಸಲ ಮಹಾತಪಸ್ವಿ ಶ್ರೀಫಲಾಹಾರ ಶಿವಯೋಗಿಯು ಸಕಲಭೋಗಮೋಕ್ಷಗಳಿಗೆ ಮೂಲಭೂತ ನಿಷ್ಕಲಂಕ ಪರಿಪೂರ್ಣ ಸ್ಥಿರವಾದ ಸದ್ಭಕ್ತಿಯನ್ನೀಯುಲೆಂದು ಆಶಿಸುತ್ತೇನೆ.

**ಶ್ರೀ ಶಿವಮೂರ್ತಿಸ್ವಾಮಿ ಫಲಾಹಾರೇಶ್ವರಮಠ,**
**ಅವರಾದಿ.**

# ಮುನ್ನುಡಿ

ಶ್ರೀ ಅವರಾದಿ ಫಲಾಹಾರೇಶ್ವರ ಮಠಾಧ್ಯಕ್ಷರೂ,ನನ್ನ ಪರಮ ಗುರುಗಳೂ, ಆದ, ಶ್ರೀ। ನಿ। ಪ್ರ। ಸಂಗಮೇಶ್ವರ ಮಹಾಸ್ವಾಮಿಗಳ ಸದುಹೃದಯದಲ್ಲಿ, ಮಠದ ಮೂಲಕರ್ತೃಗಳಾದ, ಶ್ರೀಫಲಾಹಾರೇಶ್ವರ ಮಹಾಸ್ವಾಮಿಗಳ ಪುಣ್ಯಚರಿತ್ರವನ್ನು ಪುರಾಣರೂಪದಿಂದ ಬರೆಯಿಸುವಂತೆ ಪರಶಿವಪ್ರೇರಣೆಯಾಗಿದ್ದಿತು. ಶ್ರೀ ಫಲಾ ಹಾರಶಿವಯೋಗೀಶನ ಕೃಪೆಯಿಂದ ಪುರಾಣರಚನೆಗೆ ಸುಸಮಯವೂ ಪ್ರಾಪ್ತವಾಗಿ, ಬಳ್ಳಾರಿಯಲ್ಲಿ ವೀರಶೈವ ಕಲಾಶಾಲೆಯ ಕನ್ನಡ ಪ್ರಾಧ್ಯಾಪಕರಾದ, ಮೈಸೂರು ಆಸ್ಥಾನ ಪಂಡಿತ, ಸರ್ವದರ್ಶನತೀರ್ಥ, ವೈ. ನಾಗೇಶಶಾಸ್ತ್ರಿಗಳನ್ನು ಹುಬ್ಬಳ್ಳಿ ಯಲ್ಲಿರುವ ಶ್ರೀ ಶಿ।ಪಂಡಿತ ಶಿವಶಾಸ್ತ್ರಿ ಹಿರೇಮಠ,ಅನವಾಲ. ಇವರ ಮೂಲಕವಾಗಿ ಅವರಾದಿಯ ಮಠಕ್ಕೆ ಬರಮಾಡಿಕೊಂಡು, ಮಠದ ಪೂಜ್ಯಪಾದರು,ತಮ್ಮ ಪವಿತ್ರ ಹೃದಯದಲ್ಲಿ ಆದ, ಈಶಪ್ರೇರಣೆಯ ವಿಷಯವನ್ನು ನಿರೂಪಿಸಿದರು. ಆ ನಿರೂಪ ವನ್ನು ಶಿರಸಾವಹಿಸಿ,ನಾಗೇಶಶಾಸ್ತ್ರಿಗಳು,ಮಧುರವಾದ ಸರಳ ಶೈಲಿಯಲ್ಲಿ,ಪುರಾಣ ವನ್ನು ರಚಿಸಿ, ಸನ್ನಿಧಿಗೆ ಅರ್ಪಿಸಿ, ಮಠದಿಂದ ಸನ್ಮಾನಿತರಾದುದು, ಅಭಿನಂದ ನೀಯವು.

ಪುರಾಣದ ಕಥಾವಸ್ತುವನ್ನು ಅವರಾದಿಯ ಶಿ।ಏಕದಾರಿ ಸಂಗಯ್ಯಮಾಸ್ತರ, ಇವರು, ಹಾಡಿನ ರೂಪದಲ್ಲಿ ಮೊದಲು ಸಂಗ್ರಹವಾಗಿ ಬರೆದಿದ್ದರು. ಅವರ ಸಂಗ್ರ ಹವು, ಪುರಾಣ ರಚನೆಗೆ, ಹೆಚ್ಚಿನ ಸಹಾಯವನ್ನು ನೀಡಿತು. ಈ ಬಗೆಯ ಪವಿತ್ರ ಸೇವೆಯಿಂದ ಸಂಗಯ್ಯ ಮಾಸ್ತರರೂ ಅಭಿನಂದನೀಯರಾಗಿದ್ದಾರೆ.

ಇದರಂತೆ ಮಹಾಸ್ವಾಮಿಯ ಚರಿತ್ರಾಂಶಗಳಲ್ಲಿ, ಹೆಚ್ಚು ಗಮನೀಯವಾದ ಸನ್ನಿವೇಶಗಳನ್ನು, ಹೃದಯಂಗಮವಾಗಿ ಚಿತ್ರಿಸಿಕೊಟ್ಟ,ಗದುಗಿನ ಸುಪ್ರಸಿದ್ಧ ಕಲಾ ವಿದರಾದ, ಶ್ರೀಯುತ ಮುರಿಗೆಪ್ಪಾ ಚಿಟ್ಟಿ, ಜಿ. ಡಿ. ಆರ್ಟ (ಮುಂಬಯಿ)ಆರ್ಟಿಸ್ಟ, ಇವರ ಕಲಾಪೂರ್ಣ ಸೇವೆಯು ಪ್ರಶಂಸನೀಯವಾಗಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಶ್ರೀಯುತ ಎಮ್. ಜಿ. ವಿರೂಪಾಕ್ಷನ್ ಧಾರವಾಡ, ಇವರು, ತಮ್ಮ ಲೇಖನಾದಿ ಕಾರ್ಯಬಾಹುಲ್ಯದಲ್ಲಿಯೂ,ಶ್ರೀಗಳ ಅಪ್ಪಣೆಯಂತೆ, ಸಮುಚಿತವಾದ ವಿದ್ವತ್ಪೂರ್ಣ ಪ್ರಸ್ತಾವನೆಯನ್ನು ಬರೆದುಕೊಟ್ಟುದು, ಅವರ ಭಕ್ತಿಯ ಘನತೆಗೆ ತಕ್ಕ ನಿದರ್ಶನವಾಗಿದೆ.

ಇದೇ ಪ್ರಕಾರ, ಎಂದಿನಿಂದಲೂ ಮಹಾಶಿವಯೋಗಿಯ ಸೇವಾತತ್ಪರರಾದ, ಹುಬ್ಬಳ್ಳಿಯಲ್ಲಿರುವ, ಶಿ। ಶಿವಮೂರ್ತಿಯ್ಯಾ ಓಂಕಾರಯ್ಯಾ ಹಿರೇಮಠ ಮಾಸ್ತರ

ಸಾ॥ ಕಲ್ಹಾಳ, ಇವರು ಈ ಪುರಾಣದ ಮುದ್ರಣ ವಿಷಯದಲ್ಲಿ ಅತ್ಯಂತ ಭಕ್ತಿ ಪೂರ್ವಕವಾಗಿ ಮಾಡಿದ ಸಾಹಸವು ಅತಿಸ್ತುತ್ಯವಾದುದು.

ಮುಖ್ಯವಾಗಿ ಹುಬ್ಬಳ್ಳಿಯ ಶ್ರೀ ಮಲ್ಲಿಕಾರ್ಜುನ ಮುದ್ರಣಾಲಯದ ಒಡೆಯ ರಾದ, ಶ್ರೀಯುತ ಪರ್ವತಪ್ಪಾ ಗಂಗಾಧರಪ್ಪಾ ಮಾಗಡಿ, ಇವರು ಕೆಲವೇ ದಿನ ಗಳಲ್ಲಿ ನಿರ್ದಿಷ್ಟ ವೇಳೆಗೆ ಈ ಪುರಾಣವನ್ನು ಅತಿಭಕ್ತಿಯಿಂದ ಪರಿಶ್ರಮ ವಹಿಸಿ, ಅಚ್ಚುಕಟ್ಟಾಗಿ ಅಚ್ಚುಮಾಡಿಕೊಟ್ಟುದು ಅವರಕಾರ್ಯದಕ್ಷನುತೆಯ ಪ್ರತೀಕವಾಗಿದೆ.

ಇದಲ್ಲದೆ ಈ ಪುರಾಣದಲ್ಲಿರತಕ್ಕ ಎಲ್ಲ ಫೋಟೋಗಳ ಬ್ಲಾಕುಗಳನ್ನು ಹುಬ್ಬಳ್ಳಿಯಲ್ಲಿರುವ ಶ್ರೀಯುತ ಬೋಧರಾವ ಬೆಂಗೇರಿ, ಇವರು ಒಳ್ಳೇ ಉತ್ತಮ ರೀತಿಯಿಂದ ಸಕಾಲಕ್ಕೆ ತಯಾರಿಸಿಕೊಟ್ಟ ಸೇವೆಯು ಸರ್ವಾನಂದಕರವಾಗಿದೆ.

ಈ ವಿಷಯಗಳೆಲ್ಲಕ್ಕೂ ಮುಖ್ಯವಿಷಯವೆಂದರೆ, ಶ್ರೀಫಲಾಹಾರೇಶ್ವರನ ಕೃಪಾಪ್ರಸಾದದಿಂದ ಜನ್ಮಗ್ರಹಣಮಾಡಿ, ಇದುವರೆಗೂ ಮಠದ ಶ್ರೀಗಳಲ್ಲಿ ಅನನ್ಯ ಭಕ್ತಿಯನ್ನು ವಹಿಸಿ, ಸೇವೆಯನ್ನು ಸಲ್ಲಿಸಿಯೂ ಸಲ್ಲಿಸುತ್ತಲೂ ಇರುವ ಶಿ॥ ಪಂಡಿತ ಶಿವಶಾಸ್ತ್ರಿ ಗುರಪ್ಪಯ್ಯಾ ಹಿರೇಮಠ. ಅನವಾಲ, (ಹುಬ್ಬಳ್ಳಿ) ಇವರದು. ಇವರೇ ಪುರಾಣ ರಚನೆಯ ಕಾರ್ಯದಲ್ಲಿ ಮೊದಲಿಂದಲೂ ಕಂಕಣಬದ್ಧರಾಗಿ ನಿಂತು, ಹೃತ್ಪೂರ್ವಕವಾದ ಸೇವೆಯನ್ನು ಮಾಡಿರುವರು. ಮುದ್ರಣಕ್ಕೆ ಅನುಕೂಲವಾಗು ವಂತೆ, ತಮ್ಮ ಮುದ್ದಾದ ಹಸ್ತಾಕ್ಷರಗಳಿಂದ ಪುರಾಣದ ಪ್ರತಿಯನ್ನು ಬರೆದು ಕೊಟ್ಟುದಲ್ಲದೆ, ಮಠದಲ್ಲಿ ಯಾವಾಗಲೂ ಇರುವುದಕ್ಕೆ ಸುಂದರವಾದ ಕೈಬರೆಹದ ಪ್ರತಿಯೊಂದನ್ನು ಸಿದ್ಧಪಡಿಸಿರುವರು. ಮತ್ತು ಮುದ್ರಣಸಮಯದಲ್ಲಿ ಮುದ್ರಿತ ವಾದ ಕರಡು ಪ್ರತಿಗಳನ್ನು ತಿದ್ದುವ ಕೆಲಸವನ್ನು ಅತ್ಯಂತ ಶ್ರಮವಹಿಸಿ ಮಾಡಿರು ತ್ತಾರೆ. ಈ ಶಾಸ್ತ್ರಿಗಳ ಸೇವೆಯು ಸರ್ವಾದರಣೀಯವಾಗಿದೆ.

ಈ ಮಹಾಕಾರ್ಯಕ್ಕೆ ಅತಿಶಯ ಭಕ್ತಿ, ವಿಶ್ವಾಸಗಳಿಂದ ತಮ್ಮ ಹೃತ್ಪೂ ರ್ವಕ ಸೇವೆಯನ್ನು ಸಲ್ಲಿಸಿದವರೆಲ್ಲರಿಗೂ, ಸಚ್ಚಿದಾನಂದರೂಪಿಯಾದ ಶ್ರೀಫಲಾ ಹಾರಶಿವಯೋಗಿಪುಂಗವನು ಯಾವಾಗಲೂ ಕಲ್ಯಾಣವನ್ನುಂಟುಮಾಡಲೆಂದು ಹಾರೈಸುತ್ತೇವೆ.

**ಶಿವಮೂರ್ತಿಸ್ವಾಮಿ ಗುರು ಸಂಗಮೇಶ್ವರಸ್ವಾಮಿ**
**ಫಲಾಹಾರೇಶ್ವರಮಠ ಅವರಾದಿ.**

ಶ್ರೀ ಫಲಾಹಾರಶಿವಯೋಗೀಶ್ವರಪುರಾಣದ

# ವಿಷಯಾನುಕ್ರಮಣಿಕೆ.

| ಸಂಧಿ | ವಿಷಯ | ಪುಟ |
|---|---|---|

| ಸಂಧಿ | ವಿಷಯ | ಪುಟ |
|---|---|---|
| ೨೩ | ಶ್ರೀ ಶಿವಯೋಗಿಯು, ಭಕ್ತೋದ್ಧಾರಕ್ಕಾಗಿ ಸಂಚಾರ ಮಾಡಿದುದು. ಗುಡ್ಡದ ಮಲ್ಲಾಪುರದಲ್ಲಿ, ಶಿವಯೋಗೀಶನ ಕಂಟಲಿಯ ಬಸವನು ಲಿಂಗದೊಳದಾದುದು. ವೀರಶೈವರು ಗುಡಿಯನ್ನು ಕಟ್ಟಿಸಿ, ಲಿಂಗಪ್ರತಿಷ್ಠೆಯನ್ನು ಮಾಡುವುದು ಯೋಗ್ಯವೆ? ಎಂದು ಕೇಳಿದ ಭಕ್ತರಿಗೆ, ಫಲಾಹಾರೇಶನು ಸದುತ್ತರವನ್ನು ಹೇಳಿದುದು, ಮತ್ತು ಶಿವನಾಮಕ ಶಿಷ್ಯನಿಗೆ ಚರಾಧಿಕಾರವನ್ನು ಕೊಟ್ಟು ಲಿಂಗೈಕ್ಯನಾದುದು. | ೨೦೬ |
| ೨೪ | ಶ್ರೀ ಫಲಾಹಾರೇಶ್ವರಮಠದ ಎರಡನೆಯ ಗುರುವಾದ ಶಿವಯೋಗಿಯು, ಲಿಂಗನಿಷ್ಠಾಪರನಾಗಿ, ಗುರುಗದ್ದುಗೆಯ ಪೂಜಾದಾಸೋಹಾದಿ ಸತ್ಕಾರ್ಯಗಳನ್ನು ನಡೆಸುತ್ತ, ಗುರುಗಳ ರಥೋತ್ಸವವನ್ನು ಏರ್ಪಡಿಸಿದುದು. ಸಂಚಾರ ಕಾಲದಲ್ಲಿ, ಹಂಚಿನಾಳಗೌಡನಿಗೂ, ಗೆಜ್ಜಲಗಟ್ಟಿ ದೇಶಾಯಿಗೂ, ಪ್ರಾಣದಾನವನ್ನು ಮಾಡಿದುದು. ಹಂಚಿನಾಳ ಗೌಡನು, ತನ್ನ ಮನೆಯನ್ನು, ಶಿವಯೋಗಿಗೆ ಮಠವನ್ನಾಗಿ ಮಾಡಿಕೊಟ್ಟುದು. ಶಿವಯೋಗಿಯು ತನ್ನ ಉತ್ತರಾಧಿಕಾರಕ್ಕಾಗಿ, ಬ್ಯಾಯಟ್ಟಿ ಮಠದ ಮಾಹೇಶನ ಮಗನನ್ನು ತೆಗೆದುಕೊಂಡುದು. ಸೊಟಕನಾಳ ಅಕ್ಕಸಾಲಿಗನಿಗೆ ಜೀವನ ಕಾಯಕವನ್ನು ಹೇಳಿದುದು. ಮತ್ತು ಅಟವೀಶನೆಂಬ ಶಿಷ್ಯನಿಗೆ ಚರಾಧಿಕಾರವನ್ನು ಕೊಟ್ಟು ಲಿಂಗೈಕ್ಯನಾದುದು. | ೨೧೮ |
| ೨೫ | ಶ್ರೀ ಅಟವೀಶ ಗುರುವು, ಲಿಂಗನಿಷ್ಠಾಪರನಾಗಿ, ದಾಸೋಹಾದಿ ಸತ್ಕಾರ್ಯಗಳನ್ನು ನಡೆಸುತ್ತ, ಬಲಿದ ವೈರಾಗ್ಯವುಳ್ಳವನಾಗಿ, ಶಿವನಾಮಕ ಶಿಷ್ಯನಿಗೆ ಚರಾಧಿಕಾರವನ್ನು ಕೊಟ್ಟು, ಹಂಚಿನಾಳ ಮಠದಲ್ಲಿ, ಲಿಂಗಾನಂದ ತತ್ಪರನಾಗಿದ್ದುದು. ಲಿಂಗನಿಷ್ಠಾಪರ ಶಿವಯೋಗಿಯು ದಾಸೋಹಾದಿ ಸತ್ಕಾರ್ಯಗಳನ್ನು ನಡೆಸುತ್ತ, ಭಕ್ತೋದ್ಧಾರಕ್ಕಾಗಿ ಸಂಚರಿಸಿದುದು. ಅನಾವೃಷ್ಟಿ ಸಂಭವಿಸಲು, ಸುವೃಷ್ಟಿಯನ್ನು ಸುರಿಸಿದುದು. ಲಿಂಗಾರ್ಚನೆಗೆ ಕುಳಿತು, ಲಿಂಗದೊಳಗಾದುದು. ಶ್ರೀ ಅಟವೀಶ ಗುರುವೇ, ಪುನಃ ಅವರಾದಿಗೆ ಬಂದು, ದಾಸೋಹಾದಿ ಸತ್ಕಾರ್ಯಗಳನ್ನು | |

---

– ಶ್ರೀ ಗುರು ಪ್ರಸನ್ನ –

ಶ್ರೀ ಫಲಾಹಾರಶಿವಯೋಗೀಶ್ವರಪುರಾಣದ

# ಪ್ರಸ್ತಾವನೆ.



## ೧. ಅವರಾದಿಯ ಶ್ರೀ ಫಲಾಹಾರೇಶ್ವರ ಮಠದ ಪರಂಪರೆ ಮತ್ತು ಕಾಲನಿರ್ಣಯ.

ಬೆಳಗಾವಿ ಜಿಲ್ಲೆ ರಾಮದುರ್ಗ ತಾಲೂಕದಲ್ಲಿ ಅವರಾದಿ ಎಂಬುದೊಂದು ಗ್ರಾಮ. ಸುಮಾರು ಕಳೆದ ೧೨೦ ವರ್ಷಗಳಿಂದ ಇಲ್ಲಿಯ ವಿರಕ್ತಮಠವು ಜಸ-ವೊಡೆದು ಕಂಗೊಳಿಸುತ್ತಲಿದೆ. ಈ ಮಠದ ಕರ್ತೃವು ಶ್ರೀ ಫಲಾಹಾರೇಶ್ವರ (ಶಿವಸ್ವಾಮಿ) ಸ್ವಾಮಿಗಳು, ಮಠದ ಮೊದಲನೆಯ ಗುರುವೂ ಅವರೇ ಆಗಿದ್ದಾರೆ. ಇವರು ಮೊದಲಿಗೆ ಧಾರವಾಡಜಿಲ್ಲೆ ರೋಣ ತಾಲೂಕಿನ ಅಸೂಟಿ ಗ್ರಾಮದವರು. ಭಕ್ತೋದ್ಧಾರಕ್ಕಾಗಿ ದೇಶ ಸಂಚಾರ ಹೊರಟು ಅವರಾದಿಗೆ ಆಗಮಿಸಿ, ಅಲ್ಲಿ ಈ ಮಠವನ್ನು ಸ್ಥಾಪಿಸುತ್ತಾರೆ. ಮಠದ ಎರಡನೆಯ ಗುರುಗಳು ಶ್ರೀ ಶಿವಸ್ವಾಮಿಗಳು. ಮೂರನೆಯವರು ಶ್ರೀ ಅಡವಿ ಸ್ವಾಮಿಗಳು, ನಾಲ್ಕನೆಯವರು ಶ್ರೀ ಶಿವಸ್ವಾಮಿಗಳು, ಐದನೆಯವರೇ ಇಂದಿನ ಅವರಾದಿಯ ಶ್ರೀ ಫಲಾಹಾರೇಶ್ವರ ಮಠಾಧ್ಯಕ್ಷ ಶ್ರೀ ಮ. ನಿ. ಪ್ರ. ಸಂಗಮೇಶ್ವರ ಸ್ವಾಮಿಗಳು.

ಆದಿಯಿಂದಲೂ ಈ ಮಠದ ಸ್ವಾಮಿಗಳೆಲ್ಲ ಸಮಾಜೋದ್ಧಾರ ಹಾಗು ದಾಸೋಹಕಾಯಕವನ್ನು ಕೈಗೊಂಡು ನಿರಹಂಭಾವದಿಂದ ನಡೆಸುತ್ತ ಬಂದಿದ್ದಾರೆ. ಮಠದ ಭಕ್ತತಿಂತಿಣಿಯೂ ಅಧಿಕವಾಗಿದೆ. ಅವರೆಲ್ಲರೂ ಮಠದ ಕಾರ್ಯದಲ್ಲಿ ಭಕ್ತಿಯಿಂದ ಸಹಕರಿಸುತ್ತ ಸೇವೆಸಲ್ಲಿಸುತ್ತಲಿರುವರು. ಇಂದಿನ ಪೀಠಾಧಿಪತಿಗಳಾದ ಶ್ರೀ ಮ. ನಿ. ಪ್ರ.ಸಂಗಮೇಶ್ವರಸ್ವಾಮಿಗಳು, ಮಠದ ಉಜ್ಜ್ವಲ ಪರಂಪರೆಯನ್ನು ಕಾಯ್ದುಕೊಂಡು, ವಿದ್ಯಾರ್ಜನೆಗಾಗಿ ಆಗಮಿಸಿದ ಆ ಭಾಗದ ವಿದ್ಯಾರ್ಥಿಗಳಿಗೆ ಪ್ರಸಾದ ನಿಲಯವನ್ನು ತೆರೆದು, ಅನ್ನದಾನದ ಮಹೋಪಕಾರ ಕಾರ್ಯದಲ್ಲಿ ತೊಡಗಿದ್ದಾರೆ.

ಪ್ರಸ್ತುತ ಪುರಾಣದ ಶ್ರೀ ಫಲಾಶನ ಯೋಗಿಯು ಐತಿಹಾಸಿಕ ಪುರುಷನೆಂಬುದು ನಿರ್ವಿವಾದದ ಮಾತು. ಇದನ್ನು ಬಲಪಡಿಸಲು ಸಾಕಷ್ಟು ಆಧಾರಗಳೂ ಸಿಗುತ್ತವೆ. ನರಗುಂದ ನಾಡಿನ ಅರಸು ಅಪ್ಪಾಸಾಹೇಬನು ಅರಳಿಕಟ್ಟೆಯಲ್ಲಿರುವ ಶ್ರೀ ಫಲಾಶನ ಮಠಕ್ಕೆ ೩೨ ಎಕರೆ ಭೂದಾನ ಮಾಡಿದ್ದಾನೆ. ಇದರ

ಸನದು ಕೂಡ ಮಠದಲ್ಲಿದೆ, ಮುಂದೆ ಬ್ರಿಟಿಷರ ಆಳಿಕೆಯಲ್ಲಿ, ಸರ್ ಜಾರ್ಜ ರಸೆಲ್ ಕ್ಲಾರ್ಕ ಅವರು ಮುಂಬಯಿ ಪ್ರಾಂತದ ಗವರ್ನರ್ ಆಗಿದ್ದಾಗ, ವಿಕ್ಟೋರಿಯಾ ಮಹಾರಾಣಿಯು ದಿ. ೨೫-೧-೧೮೬೨ರಂದು ಈ ಭೂದಾನ ಸನದನ್ನು ಸ್ಥಿರಪಡಿಸಿ ಮುಂದುವರಿಸಿದ್ದಾಳೆ. ಅದು ಇಂದಿಗೂ ನಡೆದು ಬಂದಿದೆ ತೊರಗಲ್ಲು ಸಂಸ್ಥಾನದ ಅರಸು ಲಕ್ಷ್ಮಣರಾವ ಸಿಂಧೆ ಅವರು ಶ್ರೀ ಫಲಾಶನ ಯೋಗಿಯ ಹೆಸರಿನಲ್ಲಿ ಮಠವನ್ನು ಕಟ್ಟಿಸಿ, ಸಾಲಾಪುರ ಗ್ರಾಮದಲ್ಲಿಯ ೭೨ಎಕರೆ ಜಮೀನನ್ನು ಇನಾಮಾಗಿ ಕೊಟ್ಟಿರುವುದಲ್ಲದೆ, ಪೇಟೆಯಲ್ಲಿ "ಫಸಗಿ"ಯನ್ನು ಎತ್ತಲು ಅಧಿಕಾರಕೊಟ್ಟಿದ್ದಾರೆ. ಉದುಪುಡಿಯ ಮಹಾರಾಣಿ ಅಹಲ್ಯಾಬಾಯಿ ಸಿಂಧೆ, ಕಿಲ್ಲೆ, ತೊರಗಲ್ಲು ಈಕೆಯು ಒಟ್ಟು ೫ ಹಳ್ಳಿಯಿಂದ ೨೨ ಎಕರೆ ಜಮೀನನ್ನು ಶಿವಯೋಗಿಯ ಹೆಸರಿನಲ್ಲಿ ದಾನ ಮಾಡಿದ್ದಾಳೆ. ಈ ಎರಡೂ ಭೂದಾನಗಳು ಸನ್ ೧೮೩೩ನೆಯ ಇಸ್ವಿಯಲ್ಲಿ ನಡೆದಿದ್ದು, ಆದರ ದಾನಪತ್ರಗಳು ಇಂದಿಗೂ ಮಠದಲ್ಲಿರುತ್ತವೆ. ಇವಲ್ಲದೆ ಅವರಾದಿಯಲ್ಲಿಯೂ ಇನಾಂ ಜಮೀನುಗಳಿರುತ್ತವೆ.

ಶ್ರೀ ಫಲಾಶನ ಶಿವಯೋಗಿಯ ಜನ್ಮದಿನವು ಪುರಾಣದಲ್ಲಿ ಎಲ್ಲಿಯೂ ವ್ಯಕ್ತವಾಗಿಲ್ಲ. ಆದರೆ, ಅವರು ಲಿಂಗೈಕ್ಯರಾದುದು, ಶಾಲಿವಾಹನ ಶಕೆ ೧೭೫೭ ಮನ್ಮಥನಾಮ ಸಂವತ್ಸರ ಫಾಲ್ಗುಣ ಬಹುಳ ೧೧ ರವಿವಾರ ದಿವಸವೆಂದು ಹೇಳಲಾಗಿದೆ. ಶಾ. ಶಕೆ ೧೭೫೭ ಅಂದರೆ ಕ್ರಿ. ಶಕೆ ೧೮೩೫ ಕ್ಕೆ ಸಮಹೊಂದುತ್ತದೆ. ಅಂದರೆ, ಇಂದಿಗೆ ೧೧೮ ವರ್ಷಗಳ ಹಿಂದೆ ಶ್ರೀಗಳು ಲಿಂಗದಲ್ಲಡಗಿದರೆಂದು ಸ್ಪಷ್ಟಪಡುತ್ತಿದೆ. ಮೇಲಿನ ಭೂದಾನ ಶಾಸನಗಳಾದುದು, ಶ್ರೀಗಳು ದೇಹವಿಡುವ ಎರಡು ವರ್ಷ ಪೂರ್ವದಲ್ಲಿ ಅವರು ದೇಶ ಪರ್ಯಟನೆಗೆ ಹೊರಟ ಕಾಲದಲ್ಲೆಂದು ಸಿದ್ಧವಾಗುತ್ತಿದೆ. ಸ್ವಾಮಿಗಳು ಲಿಂಗದಲ್ಲಡಗುವ ಕಾಲಕ್ಕೆ ಸುಮಾರು ೫೫ ವರ್ಷದವರಿದ್ದರೆಂದು ಊಹಿಸಬಹುದಾದರೆ, ಅವರ ಜನನವು ಸನ್ ೧೭೮೦ನೆಯ ಇಸ್ವಿಯಲ್ಲೆಂಬುದು ಗೊತ್ತಾಗುತ್ತದೆ. ಈ ಪುರಾಣದಿಂದ, ಚಿದಂಬರ ದೀಕ್ಷಿತರು ಜರುಗಿಸಿದ ಸೋಮಯಾಗಕ್ಕೆ ಗರಗಿನ ಶ್ರೀ ಮಡಿವಾಳೇಶ್ವರ ಸ್ವಾಮಿಗಳು ಉಪಸ್ಥಿತರಿದ್ದರೆಂದು ತಿಳಿದು ಬರುತ್ತದೆ. ಅಲ್ಲಿ ಶ್ರೀ ಫಲಾಶನರಿಗೂ ಅವರಿಗೂ ಸಂದರ್ಶನವಾಗುತ್ತದೆ. ಇದರಿಂದ ಇವರೀರ್ವರೂ ಸಮಕಾಲೀನರೆಂದು ಭಾವಿಸಬೇಕಾಗುತ್ತದೆ. ಈ ಸಂದರ್ಶನದ ಸಂದರ್ಭವು ಕಾಲ ನಿರ್ಣಯವನ್ನು ಕುರಿತು ವಿವೇಚಿಸುವಾಗ ಇದಕ್ಕೂ ಹೆಚ್ಚಿನ ಸಂಶೋಧನಕ್ಕೆ ದಿಕ್ಸೂಚಿಯಾಗಬಹುದೆಂದು ಆಶಿಸುತ್ತೇನೆ

—ಎಂ. ಜಿ. ವಿರೂಪಾಕ್ಷನ್.

-‡ ಶ್ರೀ ಗುರು ಪ್ರಸನ್ನ ‡-

# ಪ್ರಸ್ತಾವನೆ

## ( ೨ )

ಶ್ರೀ ಮದನಾದಿ ಅಲ್ಲಮ ಪ್ರಭುವಿನ ಬಳಿವಿಡಿದು ಸಾಗಿ ಬಂದ ಶಿವಯೋಗಿಗಳ ಪರಂಪರೆಯಲ್ಲಿ, ಕನ್ನಡ ನಾಡಿನಲ್ಲಿ ಅನೇಕಾನೇಕ ಶಿವಯೋಗಿಗಳು, ಶಿವಶರಣ ಶರಣೆಯರು ಆಗಿಹೋಗಿದ್ದಾರೆ. ಅವರೆಲ್ಲರ ಪುರಾಣ ಅಥವಾ ಚರಿತ್ರೆಗಳು ಇಂದು ನಮಗೆ ಉಪಲಬ್ಧವಿಲ್ಲ. ಅವರೆಲ್ಲರ ಭಕ್ತ್ಯೋದ್ಧಾರ ಕೃತಿಗಳು,ಮಹಿಮೆಗಳು, ಅನುಭವದ ಉಪದೇಶಗಳು ಜನರ ಬಾಯಲ್ಲಿ ನಲಿದೋ, ಗದ್ದುಗೆಯ ಮೇಲೆ ಪೂಜೆಗೊಂಡೋ, ಮಠ, ಮನೆಗಳ ಮೂಲೆಯಲ್ಲಿ ಗೆದ್ದಲು ಹಿಡಿದೋ, ದಿನಗಳೆದಂತೆ ಮಾಯವಾಗುತ್ತಿರುವುದು ಶೋಚನೀಯವಾಗಿದೆ. ಇವೆಲ್ಲ, ಗ್ರಂಥ ರೂಪದಲ್ಲಿ ಬೆಳಕಿಗೆ ಬರುವುದು ಇಷ್ಟವಾಗಿದೆ. ಇದೀಗ ಮಠಾಧೀಶರ ಕರ್ತವ್ಯ ಜಾಗ್ರತೆಯಿಂದ ಅಲ್ಲೊಂದು ಇಲ್ಲೊಂದು ಗ್ರಂಥಗಳು ಪ್ರಕಟವಾಗುತ್ತಿರುವುದು ಶುಭಚಿನ್ಹವಾಗಿದೆ. ಅವರಾದಿಯ ಶ್ರೀ ಮ. ನಿ. ಪ್ರ. ಸಂಗಮೇಶ್ವರ ಸ್ವಾಮಿಗಳು ಈ ಕೃತಿಯನ್ನು ಪ್ರಕಟಿಸಿ, ಓರ್ವ ಮಹಾಶಿವಯೋಗಿಯ ಪವಿತ್ರ ಜೀವನದ ಸಿದ್ಧಿಯನ್ನು ತೋರಿರುವರಲ್ಲದೆ,ಕನ್ನಡನುಡಿ ಭಂಡಾರವನ್ನು ಬೆಳಗಿ ಅಭಿವಂದನೀಯರಾಗಿದ್ದಾರೆ.

ಜೀವ, ಜಗತ್ತು, ಈಶ್ವರ, ಮೋಕ್ಷಗಳ ಬಗೆಗೆ ಶ್ರೀ ಬಸವಾದಿ ಶಿವಶರಣರೂ ಶಿವಯೋಗಿಗಳೂ ಪ್ರಗತಿಪರವಾದ ಹೊಸಹಾದಿಯನ್ನೇ ತುಳಿದಿರುವುದು ಗಮನಾರ್ಹವಾಗಿದೆ. ಭಾರತದ ಧಾರ್ಮಿಕ ಇತಿಹಾಸದಲ್ಲಿ, ರಾಮಾಯಣ, ಮಹಾಭಾರತಗಳನ್ನೊಳಗೊಂಡು, ಲೋಕೋದ್ಧಾರಕ್ಕಾಗಿ ಅಥವಾ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಗಾಗಿ ದೇವನು ಧರೆಗೆ ಅವತರಿಸಿ ಬಂದು, ಅದ್ಭುತ ಪವಾಡಗಳನ್ನು ಮೆರೆದು ಕಾರ್ಯವೆಸಗಿದ ಉದಾಹರಣೆಗಳೇ ಹೇರಳವಾಗಿ ದೊರೆಯುತ್ತಿವೆ. ದೇವನು ಮಾನವನಾಗಿ ಅವತಾರವೆತ್ತಿ ಪೂಜೆಗೊಳ್ಳುವುದಕ್ಕಿಂತ, ಮಾನವನೇ ತನ್ನ ಆಧ್ಯಾತ್ಮಿಕ ಶಕ್ತಿ, ಸಾಮರ್ಥ್ಯದಿಂದ ಸಿದ್ಧಿ ಹೊಂದಿ,ದೇವನಾಗಿ ಪೂಜೆಗೊಂಡು,ಲೋಕರಕ್ಷಣೆಯ ಕಾರ್ಯವನ್ನೆಸಗುವುದು, ಸಾಸಿರಪಾಲಿಗೆ ಮಿಗಿಲಾದುದಲ್ಲವೆ? ಇಂತು ಮಾನವನು ದೇವನಾಗುವ ಭಕ್ತಿ-ಶಕ್ತಿಯ,ಅಂಗ-ಲಿಂಗ ಸಾಮರಸ್ಯದ ಮಾರ್ಗವನ್ನು ಜಗಕೆ ತಿಳುಹಿದ ಹಿರಿಮೆ, ಬಸವಾದಿ ಶಿವಶರಣರ ಹಾಗು ಶಿವಯೋಗಿಗಳದಾಗಿದೆ. "ಕೊಲುವೆನೆಂಬ ನುಡಿ ದೇವನದಾದೊಡೆ, ಗೆಲುವೆನೆಂಬ ಛಲ,ಭಕ್ತನದಾಗಬೇಕು''ಎಂದು ಭಕ್ತಿಯ ಕೆಚ್ಚಿನಿಂದ ದೇವನೊಡನೆ, ಸ್ಪರ್ಧೆ ನಡೆಸಿದ ಮನೋಧೈರ್ಯ, ನಮ್ಮ ಶಿವಶರಣ, ಶಿವಯೋಗಿಗಳದು. "ಮರಣವೇ ಮಹಾನವಮಿ''ಯೆಂದು ಸಾವನ್ನು ಹಾರೈಸಿ

ಅಪ್ಪಿಕೊಂಡ ಆಧ್ಯಾತ್ಮಿಕವಾದ ಎದೆಗಾರಿಕೆ ಆ ಮಹಾಮಹಿಮರಿಗೆ ಮೀಸಲು. ಪರಮಾತ್ಮನೆಂತು ಸತ್ಯನಿತ್ಯನೋ ಅಂತೆಯೇ ಅವನಿಂದ ನಿರ್ಮಿತವಾದ ಸೃಷ್ಟಿಯೂ ಸತ್ಯವೆಂದು ಉಗ್ಗಡಿಸುತ್ತ, ತ್ಯಾಗ ಪೂರ್ವಕವಾದ ಭೋಗದಲ್ಲಿಯೇ ಯೋಗವಿದೆ ಯೆಂದು, ತ್ಯಾಗ-ಭೋಗಗಳ ಸಮನ್ವಯ ಮಾಡಿ ತೋರಿದ ಪೆರ್ಮೆ ಆ ಅರಿವಿನ ಮಹಂತರದು. ಮಾನವನು ದೇವನಾಗುವ ದಿವ್ಯ ಬೋಧೆಯನ್ನೊಳಗೊಂಡ ವೀರಶೈವ ಸಮಾಜದಲ್ಲಿ, ಅನ್ಯ ಸಮಾಜಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಸಾಧು, ಸತ್ಪುರುಷರೂ ಶಿವಶರಣ, ಶಿವಯೋಗಿಗಳೂ ಆಗಿಹೋಗಿರುವುದು ಅದರ ಮಹತಿ ಯನ್ನು ಪ್ರದರ್ಶಿಸುತ್ತಿದೆ.

ಅಜೇಯವಾದ ಪ್ರಕೃತಿಯನ್ನು ತಮ್ಮ ಬುದ್ಧಿಬಲ ಹಾಗು ವಿಜ್ಞಾನ ಶಕ್ತಿ ಯಿಂದ ಜಯಿಸಿಯೇ ತೀರುವೆವೆಂದು ಪಣತೊಟ್ಟಿದ್ದಾರೆ. ಪಾಶ್ಚಿಮಾತ್ಯರು, ವಿಜ್ಞಾನದ ಪ್ರಯೋಗ ಶಾಲೆಯಲ್ಲಿ ಕುಳಿತು ಸಹಸ್ರಾರು ಸಂಶೋಧನೆಗಳನ್ನು ನಡೆಸಿ ಇಂದಿಗೆ ಅವರು ಸಾಧಿಸಿರುವುದು ಅಲ್ಪ ಮಾತ್ರ. ಅದರಲ್ಲಿ ಮಾನವ ಕಲ್ಯಾಣ ಕ್ಕಾಗಿ ಉಪಯೋಗವಾಗಿರುವುದು ಆಯ, ಅಳತೆಗೆ ಸಿಗವಷ್ಟು ಸ್ವಲ್ಪವಾಗಿದೆ. ಇದಕ್ಕೂ ಬಹುಕಾಲದ ಹಿಂದೆಯೇ, ಪೌರ್ವಾತ್ಯರು ಆಧ್ಯಾತ್ಮಿಕ ಪ್ರಯೋಗ ಶಾಲೆ ಯಲ್ಲಿ ಕುಳಿತು, ಯೋಗಸಿದ್ಧಿ, ಶಿವಯೋಗದ ಸಾಮರ್ಥ್ಯದಿಂದ-ನೀರಿನ ಮೇಲೆ ನಡೆಯುವುದು, ಆಕಾಶಯಾನ, ಪರಕಾಯ ಪ್ರವೇಶ, ಅಂತರ್ ಮುಖಿಯಾಗಿ ಸಂಭಾಷಿಸುವುದು, ಪಶು-ಪಕ್ಷಿಗಳಲ್ಲಿಯ ವೈರತ್ವವನ್ನು ಕಳೆದು ಕೆಳೆತನ ಬೆಳೆಸು ವುದು, ಅಂತರ್ ದೃಷ್ಟಿಯಿಂದ ಜಗತ್ತಿನ ಆಗು-ಹೋಗುಗಳನ್ನು ಲಕ್ಷಿಸಿ, ಮುನ್ನೆ ಚ್ಚರದಿಂದ ನಡೆದು ಪ್ರಕೃತಿಯ ಮೇಲೆ ಪ್ರಭುತ್ವವನ್ನು ಸಂಪಾದಿಸಿ, ಆಧೀನಪಡಿಸಿ ಕೊಂಡ ಇಂತಹ ಅನೇಕ ಉದಾಹರಣೆಗಳು ನಮಗೆ ದೊರೆಯುತ್ತಿವೆ. ಶಿವಯೋಗ ಸಿದ್ಧಿ ಪ್ರಭೆಯ ಎದುರಿನಲ್ಲಿ ಪ್ರಕೃತಿಯೂ ತಗ್ಗಿ ನಡೆದಿರುವುದು ಸಾಮಾನ್ಯ ಮಾತಲ್ಲ. ಇಂತಪ್ಪಶಕ್ತಿ, ಸಾಮರ್ಥ್ಯಗಳನ್ನು ಅಂಗವಿಸಿಕೊಂಡ ಶಿವಯೋಗಿಗಳು ಆತ್ಮಕಲ್ಯಾಣದ ಜೊತೆಗೆ ಮಾನವ ಕಲ್ಯಾಣವನ್ನೂ ಸಾಧಿಸಿದರು. ಇದುವೇ ಶಿವಯೋಗದ ಸಾರ್ಥಕತೆ; ಪರಾಕಾಷ್ಠತೆ.

## ಕವಿ-ಕಾವ್ಯ ಪರಿಚಯ

ಶ್ರೀ ಫಲಾಹಾರ ಶಿವಯೋಗೀಶ್ವರ ಪುರಾಣದ ಕರ್ತೃವು ಏಳುಬೆಂಚೆಯ ಶಿ. ನಾಗೇಶಶಾಸ್ತ್ರಿಗಳು, ಏಳುಬೆಂಚಿ ಗ್ರಾಮವು ಬಳ್ಳಾರಿ ಪುರಮಂಡಲದಲ್ಲಿದೆ. ಇಂದಿಗೂ ಶಿ. ಶಾಸ್ತ್ರಿಗಳು ಬಳ್ಳಾರಿಯ ವೀರಶೈವ ಮಹಾವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿ ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.

ಶಿವಮೂರ್ತಿ ನಾಗೇಶ ಶಾಸ್ತ್ರಿಗಳು ಸಂಸ್ಕೃತ ಕನ್ನಡ ಪಂಡಿತರಿದ್ದು, ಹಿಂದಿ, ತೆಲಗು, ಮರಾಠಿ, ಬಂಗಾಲಿ, ಆಂಗ್ಲ ಈ ಭಾಷೆಗಳ ಪರಿಚಯವುಳ್ಳವರಾಗಿದ್ದಾರೆ.

ಮೈಸೂರು ರಾಜ್ಯ ರಮಾರಮಣರ ಮೆಚ್ಚುಗೆ ಹೊಂದಿ "ಆಸ್ಥಾನ ವಿದ್ವಾನ್'' ಗೌರವ ಪದವಿಯನ್ನು ಇಪ್ಪತ್ತು ವರ್ಷಗಳ ಹಿಂದೆಯೇ ಪಡೆದಿದ್ದಾರೆ ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ "ಸರ್ವದರ್ಶನ ತೀರ್ಥ'' ಮತ್ತು ಮದ್ರಾಸು ವಿಶ್ವವಿದ್ಯಾಲಯದಲ್ಲಿ "ಸಂಸ್ಕೃತ ಕನ್ನಡ ವಿದ್ವಾನ್" ಎಂಬ ಪದವಿಗಳನ್ನು ಪಡೆದಿರುವರು ಮತ್ತು ವಿದ್ವಜ್ಜನರಿಂದಲೂ ಜನತೆಯಿಂದಲೂ "ಕಳಾ ಪ್ರಪೂರ್ಣ" "ಪಂಡಿತ'' ಅಂಕಿತದ ಉನ್ನತ ಸನ್ಮಾನಗಳೂ ಅವರಿಗೆ ದೊರೆತಿವೆ ಅಖಿಲ ಕನ್ನಡನಾಡನ್ನು ಪ್ರತಿನಿಧಿಸುವ "ಕನ್ನಡ ಸಾಹಿತ್ಯ ಪರಿಷತ್ತಿ"ನ ಗದ್ದುಗೆಯನ್ನೇರುವ ಮನ್ನಣೆಯಾಂತು ಸಾಹಿತ್ಯಾಚಾರ್ಯರೆನಿಸಿದ್ದಾರೆ.

ಶಿ ಶಾಸ್ತ್ರಿಗಳು ರಚಿಸಿದ ಇನ್ನಿತರ ಕೃತಿಗಳು ಇಂತಿವೆ; ರಘುವಂಶ, ಕುಮಾರಸಂಭವ, ಭಗವದ್ಗೀತೆ-ಇವು ಮೂರು ಸಂಸ್ಕೃತದಿಂದ ಕನ್ನಡಕ್ಕೆ ಪರಿವರ್ತಿಸಿದ ಪದ್ಯಗ್ರಂಥಗಳು. ಶ್ರೀ ಮರಿಯೋಗೀಶ್ವರ ಪುರಾಣ, ಶ್ರೀ ಗವಿಸಿದ್ಧೇಶ್ವರ ಪುರಾಣ ಇವೆರಡು ಷಟ್ಪದಿಯಲ್ಲಿ ರಚಿತವಾದ ಪುರಾಣಗಳು. ಶಿವಾನುಭವ ಸೂತ್ರಸಾರ ಇದು ಮೊಗ್ಗೆಯ ಮಾಯಿದೇವ ವಿರಚಿತ 'ಶಿವಾನುಭವ ಸೂತ್ರ'ವೆಂಬ ಸಂಸ್ಕೃತ ಗ್ರಂಥವನ್ನು ಕನ್ನಡದಲ್ಲಿ ಗದ್ಯಾತ್ಮಕವಾಗಿ ಬರೆದುದು. ಅಷ್ಟಾವರಣ ವಿವೇಕ, ಪಂಚಾಚಾರ ಪ್ರಕಾಶಿಕೆ, ಷಟ್‌ಸ್ಥಲ ತತ್ತ್ವ ಪ್ರಕಾಶಿಕೆ, ಕರ್ನಾಟಕ ಚಂದ್ರಾಲೋಕ, ವಿಜಯನಗರಾಭ್ಯುದಯ ನಾಟಕ, ವಜ್ರಾಂಗುಳೀಯ, ಅಭಿನವಸೀತೆ, ವಿದ್ಯಾವಿನೋದಿನಿ ಇವೆಲ್ಲ ಸ್ವತಂತ್ರ ಗ್ರಂಥಗಳು. ಇವುಗಳಲ್ಲಿ ಕೆಲವು ಇನ್ನೂ ಪ್ರಕಟವಾಗಬೇಕಾಗಿವೆ.

ಪ್ರಸಿದ್ಧಿ, ಪ್ರಕಟನೆ, ಪ್ರಚಾರಗಳ ಹಂಬಲವಿಲ್ಲದೆ, ಕರ್ಮಶೀಲರಾಗಿ ನುಡಿದೇವಿಯ ಆರಾಧನೆಯನ್ನು ಮಾಡುತ್ತಿರುವ ಕೆಲವೇ ಸಾಹಿತ್ಯ ಭಕ್ತರಲ್ಲಿ ಶಿ. ಶಾಸ್ತ್ರಿಗಳೊಬ್ಬರಾಗಿದ್ದಾರೆ. ಎಲೆಯ ಮರೆಯ ಸುವಾಸಿಕ ಪುಷ್ಪದಂತೆ, ತಮ್ಮ ಕೃತಿಗಳ ಪರಿಮಳವನ್ನು ಬೀರುತ್ತ, ತೆರೆಯ ಮರೆಯಲ್ಲಿರುವ ಸೌಜನ್ಯ, ಶಾಸ್ತ್ರಿಗಳವರ ಪಾಲಿಗೆ ಮೀಸಲಾಗಿದೆ. ಋಷಿ ಹೃದಯದ ಶಾಸ್ತ್ರಿಗಳ ಪ್ರಗಲ್ಭ ಪಾಂಡಿತ್ಯ, ಪ್ರೋಜ್ವಲ ಪ್ರತಿಭೆ, ತುಂಬು ಅನುಭವ, ಕಾವ್ಯಬಂಧನದ ಬಗೆಗೆ ಹೆಚ್ಚು ಹೇಳಬೇಕೆಂದೆನಿಸುವುದಿಲ್ಲ. ಅವರಿಗೆ ದೊರೆತಿರುವ ಮನ್ನಣೆಗಳು ಹಾಗು ಅವರ ಕೃತಿಗಳು ಅವನ್ನು ಎತ್ತಿ ತೋರುತ್ತಲಿವೆ.

ಈ ಪುರಾಣದಲ್ಲಿ, ಮಂಗಳಾಚರಣ ಸಂಧಿಯ ೩೨ ಪದ್ಯಗಳನ್ನು ಕೂಡಿ ಒಟ್ಟು ೫೫ ಸಂಧಿಗಳಲ್ಲಿ ೧೧೨೧ ಪದ್ಯಗಳು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿವೆ. ಇದರಲ್ಲಿ ೨೩ ಸಂಧಿಗಳ ೧೦೨೪ ಷಟ್ಪದಿಗಳು ಪುರಾಣದ ಅಧಿನಾಯಕ ಶ್ರೀ ಫಲಾಶನನನ್ನು ಕುರಿತು ರಚಿತವಾದವುಗಳು. ಇನ್ನೆರಡು ಸಂಧಿಗಳಲ್ಲಿ ಮಠದ ಮುಂದಿನ ಮೂವರು ಗುರುವರರ ಬಗೆಗೆ ಸಿಂಹಾವಲೋಕನ ಮಾಡಲಾಗಿದೆ. ಅವರಾದಿಯ

ಶಿ. ಏಕದಾರಿ ಸಂಗಯ್ಯನವರು, ಶ್ರೀ ಫಲಾಹಾರ ಶಿವಯೋಗಿಗಳನ್ನು ಕುರಿತು ವಿಷಯವನ್ನು ಸಂಗ್ರಹಿಸಿ ಹಾಡಿನ ರೂಪದಲ್ಲಿ ಬರೆದ ಕಥಾವಸ್ತುವೇ ಈ ಕಾವ್ಯ ರಚನೆಗೆ ಸಹಾಯಕವಾಗಿದೆಯೆಂದು ತಿಳಿಯುತ್ತದೆ.

ಮಂಗಳಾಚರಣ ಸಂಧಿಯಲ್ಲಿ ಶ್ರೀ ಫಲಾಶನ, ಇಷ್ಟ ದೈವತಗಳು, ಹರಿಹರ ಮತ್ತು ಗುರುವರ್ಯರ ಪ್ರಾರ್ಥನೆಗೆ ೩೨ ಪದ್ಯಗಳು, ಒಂದನೆಯ ಸಂಧಿಯಲ್ಲಿ ಪುಣ್ಯಪುರುಷರಿಗೆ ಜನ್ಮವಿತ್ತ ಭಾರತ ಮತ್ತು ಕರ್ಣಾಟಕ ದೇಶದ ವರ್ಣನೆಗೆ ೩೮, ಶ್ರೀ ಫಲಾಶನನ ಜನ್ಮಕ್ಕೆ ೩೮, ಗೋಪಾಲನಾದ ಶ್ರೀ ಫಲಾಶನನು ನಿಜಲಿಂಗ ಪೂಜಾಲೋಲನಾದುದಕ್ಕೆ ೩೯, ಜಾಲಿಹಾಳದಿಂದ ಶ್ರೀಶೈಲಕ್ಕೆ ಹೊರಟ ಬಗೆಗೆ ೫೩, ಮಾರ್ಗದಲ್ಲಿ ಪಂಪಾಯಾತ್ರೆ ಮತ್ತು ಚಕ್ರತೀರ್ಥದಲ್ಲಿ ಎಸಗಿದ ಲೀಲೆಗೆ ೬೫, ಹಂಪೆಯಿಂದಶ್ರೀಗಿರಿಗೆ ಹೋಗಿ ಮಲ್ಲಿಕಾರ್ಜುನನ ದರ್ಶನ ಪಡೆಯಲು ೪೯, ಫಲಾಶನನಿಗೆ ಮಲ್ಲಯ್ಯನು ಮೈದೋರಿದ ಬಗ್ಗೆ ೪೧, ಮಲ್ಲಿಕಾರ್ಜುನನು ಫಲಾಶನನಿಗೆ ಮಾಡಿದ ಶಿವಯೋಗ ಸಿದ್ಧಿ ಉಪದೇಶಕ್ಕೆ೪೧, ಗಿರಿಯಿಂದ ಅಸೂಟಿಗೆ ಬಂದು ತನ್ನವರನ್ನು ಕಾಣಲು ೪೫, ಕೊಣ್ಣೂರು ಮಠಕ್ಕೆ ಆಗಮಿಸಿ ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ ಉಪದೇಶಕ್ಕೆ ೧೬೭, ಕಂಬಳಿಯ ಮೇಲೆ ಕುಳಿತು ಹೊಳೆದಾಟಿ ಹೊಸಕೇರಿಗೆ ಬರಲು ೪೬, ಕಾಕನೂರಿಂದ ಅರಳಿಕಟ್ಟಿಗೆ ಬಂದು ನೆಲೆಸಲು ೩೯, ನರಗುಂದ ಅರಸು ತೀರ್ಥ ಪಡೆದು ರೋಗ ನಿವಾರಣೆ ಮಾಡಿಕೊಂಡ ಬಗೆಗೆ ೭೫, ಸಾಲಾಪುರದ ಗಂಗೋದ್ಭವ ಲೀಲೆಗೆ ೪೩, ಉದುಪುಡಿಯ ಮಹಾರಾಣಿ ಮತ್ತು ತೊರಗಲ್ಲು ಅರಸನನ್ನು ಹರಸಿ, ರಾಕ್ಷಸನೋರ್ವನ ಶಾಪವಿಮೋಚನೆಗೆ ೫೫, ಅವರಾದಿಗೆ ಆಗಮಿಸಿ ಮಠಸ್ಥಾಪನೆಯ ಮಾಡಲು ೫೮, ದೀಕ್ಷಿತರ ಯಾಗಕ್ಕೆ ತೆರಳಿ ಫಲಗಳನ್ನು ಹೆಚ್ಚಿಸಿ, ನೀರಿನಲ್ಲಿ ಮುಳುಗುವ ಬಾಲಕನನ್ನು ವರದ ಹಸ್ತದಿಂದ ಪಾರು ಮಾಡಿದ್ದಕ್ಕೆ ೪೭, ಧರೆಯ ಭಕ್ತೋದ್ಧಾರ ಕಾರ್ಯ ಮುಗಿಸಿ ಲಿಂಗದಲ್ಲಡಗಲು ೫೭, ಮಠದ ೨ನೆಯ ಗುರುವಾದ ಶಿವಸ್ವಾಮಿಗಳಿಗೆ ೫೮, ೩ ಮತ್ತು ೪ನೆಯ ಗುರುಗಳಿಗೆ ೩೯- ಹೀಗೆ ಒಟ್ಟು ೧೧೨೧ ಪದ್ಯಗಳು ೨೫ ಸಂಧಿಗಳಲ್ಲಿ ವಿಭಾಗಿತವಾಗಿವೆ.

ಶ್ರೀ ಫಲಾಶನ ಶಿವಯೋಗಿಯೇ ಈ ಕಾವ್ಯದ ಜೀವ-ಜೀವಾಳ, ಈತನು ಐತಿಹಾಸಿಕ ಪುರುಷನೆಂಬುದನ್ನು ಮಠದ ಪರಂಪರೆ, ಕಾಲ ನಿರ್ಣಯ ಭಾಗದಲ್ಲಿ ತೋರಲಾಗಿದೆ. ಈ ಕಥಾನಾಯಕನ ಪೋಷಕವಾಗಿ, ಆತನ ತಾಯಿ-ತಂದೆಗಳಾದ ಶರಭಾಂಬೆ-ಮಲ್ಲಿಕಾರ್ಜುನರು, ಜಾಲಿಹಾಳದ ದೇಸಾಯಿ, ಶಿವಪ್ಪಯ್ಯ, ಭಕ್ತಬಸವ, ಅಪ್ಪಾಸಾಹೇಬ, ಚಿದಂಬರ ದೀಕ್ಷಿತ, ಭಕ್ತ ದಂಪತಿಗಳು, ಅಹಲ್ಯಾರಾಣಿ, ಲಕ್ಷ್ಮಣರಾವ ಸಿಂಧೆ, ಬಾಬಾಸಾಹೇಬ, ೨ನೆಯ ಶಿವಸ್ವಾಮಿಗಳು, ೩ನೆಯ ಅಡವಿಸ್ವಾಮಿಗಳು, ೪ನೆಯ ಶಿವಸ್ವಾಮಿಗಳು, ಶ್ರೀ. ಮ. ನಿ. ಪ್ರ. ಸಂಗಮೇಶ್ವರ ಸ್ವಾಮಿಗಳು-ಇವರೆಲ್ಲರು ಸಂದರ್ಭೋಚಿತವಾಗಿ ಪುರಾಣದಲ್ಲಿ ಪ್ರಕಟವಾಗುತ್ತಾರೆ.

## ಕಾವ್ಯ ವಿಮರ್ಶೆ.

ಪ್ರಾಚೀನ ಪುರಾಣ ಕಾವ್ಯಗಳಿಗೂ ಈ ಪುರಾಣಕ್ಕೂ ಕಾವ್ಯದರ್ಶನ,ರಚನೆ, ವಿಷಯ ಪ್ರತಿಪಾದನೆ ಮೊದಲಾದವುಗಳ ದೃಷ್ಟಿಯಿಂದ ಅವಲೋಕಿಸುವುದಾದರೆ ಅವುಗಳಲ್ಲಿ ಮಹದಂತರ ಕಂಡು ಬರುತ್ತಿದೆ. ಇಲ್ಲಿ ಅಮಾನುಷ ಅದ್ಭುತ ಪವಾಡಗಳ ಹೇರಳ ವರ್ಣನೆ ಇಲ್ಲ. ಇದ್ದರೆ,ಶಿವಯೋಗ ಸಿದ್ಧಿಯಿಂದ ಸಾಧಿಸಬಹುದಾದ. ಸುಜ್ಞರು ಒಪ್ಪಬಹುದಾದ ಮಹಿಮೆಗಳು ಅಲ್ಲಲ್ಲಿ ಕಂಡು ಬರುತ್ತಿವೆ. ಅತಿಶಯೋಕ್ತಿಯ ಆಡಂಬರದ ಅಭಿಮಾನೋಕ್ತಿಗಳು ಕಾಣಬರುವುದಿಲ್ಲ. ಕಥಾ ಪ್ರಾರಂಭವಾಗುವ ಪೂರ್ವದಲ್ಲಿ ಬರಬಹುದಾದ ಕೈಲಾಸ, ಭೂಲೋಕ, ಸಮುದ್ರ, ಕವಿಯ ಹೆಗ್ಗಳಿಕೆ ಮೊದಲಾದ ಬೇಸರತರುವ ವರ್ಣನಗಳಿಲ್ಲ ಕತೆಯ ಓಟವನ್ನು ತಡೆಹಿಡಿಯುುವ ಉಪಕತೆಗಳ(ಒಂದನ್ನು ಬಿಟ್ಟರೆ)ಗೊಂದಲವಿಲ್ಲ. ಕಾವ್ಯ ನವರಸಗಳಿಂದ ತುಂಬಿ ಶೋಭಿಸಬೇಕೆಂದು ಅಕಾರಣವಾಗಿ ಶೃಂಗಾರ ಮೊದಲಾದ ರಸಗಳನ್ನು ಎಳೆದು ತಂದು ಜೋಡಿಸುವ ಸಾಂಪ್ರದಾಯಕ ಬಯಕೆ ಇಲ್ಲಿಲ್ಲ ಕವಿಯ ಲೋಕಾನುಭವ, ಕಾವ್ಯದ ಅನೇಕ ಕಡೆಗಳಲ್ಲಿ ಬರುವ ಉಪಮೆಗಳಿಂದ ಚೆನ್ನಾಗಿ ವ್ಯಕ್ತವಾಗುತ್ತದೆ ಕತೆಯ ಬೆಳವಣಿಗೆ ಪಾತ್ರಪೋಷಣೆ ಉತ್ತಮವಾಗಿವೆ. ಧರ್ಮೋಪದೇಶ, ಕತೆಯ ಓಟಕ್ಕೆ ಸ್ವಲ್ಪ ತಡೆಯನ್ನುಂಟು ಮಾಡಿದರೂ ಅದೆಲ್ಲ ಶಿವಯೋಗಿಯ ವ್ಯಕ್ತಿತ್ವ ದೃಷ್ಟಿಯಿಂದ ಬೇಕೆನಿಸುತ್ತಿದೆ ಯಾವ ವಿಷಯುವನ್ನು ಎಷ್ಟು, ಎಂತು, ಎಲ್ಲಿ ಹೇಳಬೇಕೆಂಬುದರ ಅರಿವು ಕಾವ್ಯದ ಎಲ್ಲೆಡೆಯೂ ಕಂಡು ಬರುತ್ತಿದೆ ಭಕ್ತಿರಸವು ಕಾವ್ಯದುದ್ದಕ್ಕೂ ಪ್ರಧಾನವಾಗಿ ಹರಿದು ಬಂದಿದೆ.

ಶ್ರೀ ಫಲಾಶನನಿಗೆ ಹುಟ್ಟಿದ ಮೇಲೆ ಲಿಂಗ ಕಟ್ಟಿರುವುದು ಸಾಂಪ್ರದಾಯಿಕವಾದುದಾಗಿದೆ. ಗರ್ಭದ ಒನೆಯ ತಿಂಗಳಲ್ಲಿಯೇ ಲಿಂಗಧಾರಣ ಮಾಡಿಸಿದ್ದರೆ ಹೆಚ್ಚು ಒಳಿತಿತ್ತೆಂದು ತೋರುತ್ತದೆ. ಲಿಂಗಧಾರಣವಾದೊಡನೆ ಮಾಂಸಪಿಂಡ ಅಳಿದು ಮಂತ್ರಪಿಂಡವಾಗುವುದು. ಅದು ಕಾರಣ, ಶಿವಯೋಗಿಯು ಮಂತ್ರಪಿಂಡವಾಗಿಯೇ ಜನ್ಮವೆತ್ತಿದನೆಂಬುದು ಭಾವನಾ ಪ್ರಧಾನರಿಗೆ ಹೆಚ್ಚಿನ ತೃಪ್ತಿಯನ್ನುಂಟು ಮಾಡಬಹುದಿತ್ತು. *

ವೀರಶೈವ ಧರ್ಮ, ನೀತಿ, ತತ್ವಗಳನ್ನು ತಿಳಿಸಿಕೊಡುವುದು, ವಿಶೇಷ ಕಠಿಣವಾದ ಕಾರ್ಯ. ಇಂತಹ ನಿಗೂಢವಾದ, ಗಡಚಾದ ವಿಷಯುವನ್ನು ಕಾವ್ಯದ ಮೂಲಕ ಸಾಧಿಸಿರುವುದು ಕವಿಯ ಅರಿವಿನ ಆಳ, ಅನುಭವದ ಅಗಲ, ಭಾವದ ಔನ್ನತ್ಯವನ್ನು ಪ್ರದರ್ಶಿಸುತ್ತಿದೆ. ಈ ಕಾವ್ಯದ ಸರಳತೆ, ಮಧುರತೆಗಳನ್ನು ನೆನೆದಾಗ, ಇಂತಿದೆಯೆಂದು ಹೇಳಲು "ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ''ಎಂಬ ನುಡಿಗಳನ್ನು ಸ್ಮರಿಸದೆ ಬಿಡುಗಡೆ ಇಲ್ಲವೆಂದೆನಿಸುತ್ತಿದೆ.

---

* ಆದರೆ, ಜನನವಾದೊಡನೆ ಲಿಂಗವನ್ನು ಧರಿಸುವುದೂ ವಿಧ್ಯುಕ್ತವಾಗಿರುವುದು.

ರಂಗ ಭೂಮಿಯನ್ನು ಅಲಕ್ಷಿಸಿ ವಾಕ್ ಚಿತ್ರಗಳಿಗೆ ಮಾರು ಹೋದಂತೆ, ಶಾಸ್ತ್ರೀಯ ಸಂಗೀತವನ್ನು ಉದಾಸೀನ ಮಾಡಿ ವಾಕ್ ಚಿತ್ರ ಸಂಗೀತಕ್ಕೆ ಮನ ಸೋತಂತೆ, ಇಂದಿನ ಪೀಳಿಗೆ ಆಧುನಿಕ ಕಾವ್ಯಗಳಿಗೆ ಮೋಹಪರವಶರಾಗಿ ಷಟ್ಪದಿ ಕಾವ್ಯಗಳ ವಾಚನ, ಅಭ್ಯಸನಗಳನ್ನು ತೊರೆದಿರಬಹುದು. ಅಂತಹರು ಈ ಕಾವ್ಯ ವನ್ನೋದಿ ನಿರ್ಮಲಾಂತಃಕರಣಪೂರಿತ ಅಭಿಪ್ರಾಯ ಕೊಡುವುದಾದರೆ, ಕಾವ್ಯ ವನ್ನು ಪ್ರಶಂಸಿಸದೆ, ರಸಾನುಭವವನ್ನು ಹೊಂದದೆ ಗತ್ಯಂತರವಿಲ್ಲವೆಂದು ಧೈರ್ಯ ವಾಗಿ ಹೇಳಬಹುದಾಗಿದೆ.

## ವರ್ಣನೆಗಳು.

ಹಂಪೆಯ ಕ್ಷೇತ್ರ, ಕ್ಷೇತ್ರದೊಳಗಿನ ದೈವತಗಳು, ಹಾಳು ಹೋದ ಆ ನಗರದ ಅವಶೇಷಗಳನ್ನು ಬಣ್ಣಿಸುವಾಗ, ಶ್ರೀ ಗಿರಿಯ ವನಲಕ್ಷ್ಮಿಯ ಸೌಂದರ್ಯವನ್ನು ಚಿತ್ರಿಸುವಾಗ ಕವಿಯು ಮಹೋನ್ನತ ಮಟ್ಟಕ್ಕೇರುತ್ತಾನೆ. ಆಗ ತನ್ನೊಡನೆ ಓದುಗರನ್ನೂ ಎಳೆದೊಯ್ದು ಹಂಪೆಯ ದಿವ್ಯದರ್ಶನ ಮಾಡಿಸಿ, ಗತ ವೈಭವವನ್ನು ನೆನೆದು ಮರುಗುವಂತೆಯೂ, ಶ್ರೀ ಗಿರಿಯ ವನಶೋಭೆಯನ್ನು ನೋಡಿ ಮನ ತಣಿ ಯುವಂತೆಯೂ ಎಸಗುತ್ತಾನೆ. ಈ ಕೆಳಗಿನ ವಿವಿಧ ವಿಷಯಗಳ ವರ್ಣನೆಯಲ್ಲಿ ಕವಿಯ ಭಾವದ ಬೆಳಗನ್ನು, ಬುದ್ಧಿಯ ಬೆಳಕನ್ನು, ಭಕ್ತಿಯ ತುಳಕನ್ನು ಮನಗಾಣ ಬಹುದಾಗಿದೆ. ಸ್ಥಲಾಭಾವದಿಂದ ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

### ಭಾರತ ಮತ್ತು ಕರ್ಣಾಟಕದ ಬಣ್ಣನೆ ಇದು:

### ೧ ನೆಯ ಸಂಧಿ

ಇದು ಪುರಾತನಕಾಲದಿಂ ಸ ।
ತ್ಯದ ಸನಾತನಧರ್ಮದಾಶ್ರಯ ।
ವಿದು ಸದಾ ಪರಮಾತ್ಮತತ್ವವಿಮರ್ಶನದ ಬೀಡು ॥
ಇದು ಸುಸಂಸ್ಕೃತಿಗಿಕ್ಕೆ ಕಲೆಗಳ ।
ಸದನವಧಿಕಪರಾಕ್ರಮದ ನೆಲೆ ।
ಯಿದು ಸಕಲಸಂಪದದ ನಿಲಯವು ಭರತಭೂತಲವು ॥ ೫ ॥

ಇದು ಮತಸ್ಥಾಪಕರ ತಾಯ್ಮನೆ ।
ಯಿದು ಮಹಾಋಷಿಕವಿಬುಧರಿಗೆಡೆ ।
ಯಿದು ಪರಾಕ್ರಮಭೂಷಣರ ಭೂಮಿಪರ ಜಸದಿರವು ॥
ಇದು ಜಗಕೆ ತಾಂ ಮಾರ್ಗದರ್ಶಕ ।
ವಿದು ಸುಜೀವನಶಾಂತಿದಾಯಕ ।
ವಿದು ನಿಜಂ ನಿಜವೆಂದು ಭರತೋರ್ವಿಯನು ಬಣ್ಣಿಪರು ॥ ೬ ॥

ಇಂತು ಭಾರತ ಭೂರಮೆಯ ಸೀ ।
ಮಂತರತ್ನದ ಶೋಭೆಯಂ ತಾ ।
ನಾಂತು ಬೆಳಗುವ ಕನ್ನಡದ ಧರೆ ಕಾಲಕಾಲದೊಳು ॥
ಸಂತರಿಗೆ ಸದ್ಭಕ್ತರಿಗೆ ನಿ ।
ಶ್ಚಿಂತ ಶಿವಯೋಗೀಂದ್ರರಾದಿಯ ।
ನಂತಮಹಿಮರ್ಗಿತ್ತು ಜನ್ಮವ ಜಸದೊಳಿಸೆಯುವುದು ॥ ೩೮ ॥

ಇತ್ತ ಶರಭಾಂಬೆ ಪುತ್ರಾಪೇಕ್ಷೆಯಿಂದ ಮಾಡುವ ಲಿಂಗಪೂಜೆ, ಗರ್ಭಿಣೀ ಸ್ತ್ರೀ ಹಾಗು ಪುತ್ರನ ಮಾತೃ ಪೂಜೆಯನ್ನು ನಿರುಕಿಸಿರಿ :

## ೨ ನೆಯ ಸಂಧಿ

ಬಳಿಕೆ ಭಕ್ತಿಸುಧಾಸರೋವರ ।
ದೊಳಗೆ ವಿಹರಿಪ ಹಂಸಮಿಥುನದ ।
ಚೆಲುವನೊಂದಿದ ದಂಪತಿಗಳವರಿಷ್ಟಲಿಂಗವನು ॥
ಸಲೆ ಸಮರ್ಚಿಸಿ ಪಾಡಿ ಪೊಗಳುತೆ ।
ನಲಿದು ತತ್ತೀರ್ಥಪ್ರಸಾದವ ।
ಕೊಳುತೆ ಬೇಡಿದರೀ ಬಗೆಯ ತನುಭವನ ಜನನವನು ॥ ೨೦ ॥

ಕರಸರೋಜದ ಲಿಂಗಮೂರ್ತಿಯ ।
ಪರಮಭಕ್ತಿಯೊಳಿಂತು ಬೇಡು ।
ತ್ತಿರೆ ತದೀಶ್ವರನವರಿಗೊಲಿಯುತೆ ಕೆಲದಿನಕೆ ತನ್ನಾ ॥
ಪರತರದ ಚಿತ್ಕಳೆಯನಾ ಶಿವ ।
ಶರಣೆ ಶರಭಾಂಬಿಕೆಯ ಗರ್ಭದ ।
ಸುರುಚಿರದ ಗುಡಿಯೋಳ್ ಪ್ರತಿಷ್ಠೆಯ ಗೈದನೇನೊರೆವೇಂ ॥೨೨॥

ಒಳಗೆ ಲೋಕದ ಗುರುವಿರುವುದನು ।
ತಿಳಿಸುವಂತಿರೆ ಪುಣ್ಯವನಿತೆಯ ।
ಬಳಿವ ತೆಳ್ಪಸಿರ್ವೈದೆ ತಳೆದುದು ತಾಂ ಗುರುತ್ವವನು ॥
ವಿಲಸಿತಾಂಗದೆ ಬೆಳ್ಪಳಗು ಮಿಗೆ ।
ಪೊಳೆದುದಾಕೆಯ ತ್ವಕ್ಕಿನೊಳೆ ಸಲೆ ।
ನೆಲಸಿರುವ ಚರಲಿಂಗದೊಳ್ ಲೇಪಿಸಿದ ಭೂತಿಯೆನೆ ॥೨೩॥

ಜೊಲ್ಲಿನಭಿಷೇಕವನೆಸಗಿ ನಗೆ ।
ಮಲ್ಲಿಗೆಗಳನು ಮುಡಿಸಿ ಸಲೆ ಸುಲಿ ।
ಪಲ್ಲಿನಕ್ಷತೆಯಿಟ್ಟು ತೊದಲಿನ ನುಡಿಯ ನುತಿಗೈದು ॥

ಉಲ್ಲಸಿತ ತನುಭವನು ದಿನದಿನ ।
ದಲ್ಲಿ ತಾಯ್ಗೀ ತೆರದ ಪೂಜೆಯ ।
ಸಲ್ಲಿಸಲು ಮೋದಾಬ್ಧಿಯೊಳು ಮುಳುಗುವಳು ತಜ್ಜನನೀ ॥೩೭॥

ಪುಣ್ಯ ತುಂಗಭದ್ರೆಯ ವರ್ಣನೆ ಇಂತಿದೆ :

### ೫ನೆಯ ಸಂಧಿ

ಹರನ ತೆರದಿಂ ಭುವನಭರಿತಂ ।
ಹರಿಯವೋಲ್ ಪದ್ಮಾಶ್ರಯಂ ಮೇಣ್ ।
ಪರಿಕಿಪೊಡೆ ಪರಮೇಷ್ಠಿಯಂತಿರೆ ಜಲಜಗರ್ಭಂ ತಾಂ ॥
ಇರುವ ಕತದಿಂ ತುಂಗಭದ್ರೆಯು ।
ಪರಮಪೂಜ್ಯಮದೆನಿಸಿ ನಿರುತಂ ।
ಮೆರೆಯುತಿರ್ಪುದು ತತ್ತ್ರಿಮೂರ್ತಿಗಳಂತೆ ಭೂತಲದೆ ॥೧೮॥

ಶಿವಯೋಗಿಯು ಶ್ರೀಗಿರಿಯನ್ನೇರುವ ಸೊಬಗನ್ನು ಸವಿಯಿರಿ :

### ೭ನೆಯ ಸಂಧಿ

ಏರೆ ವನಲಕ್ಷ್ಮಿಯ ಸಿರಿಯು ಕ ।
ಣ್ಗೇರೆ ಪಕ್ಷಿಗಳಿಂಚರವು ಕಿವಿ ।
ಗೇರೆ ಬೀಸುವ ತಣ್ಣೆಲರ ಸಂಸ್ಪರ್ಶಮಂಗಕ್ಕೆ ॥
ಏರೆ ಪೂಗಳ ಕಂಪು ನಾಶಿಕ ।
ಕೇರೆ ಸಂಮುದವೆದೆಗೆ ಗುರುವರ ।
ನೇರುತಿರ್ದನು ಭಕ್ತಸಂಗತನಾಗಿ ಬೆಟ್ಟಕ್ಕೆ ॥೧೩॥

ಗಿರಿಯ ಮಲ್ಲಿಕಾರ್ಜುನನ ತುಂಬು ಚಿತ್ರವನ್ನು ಇಲ್ಲಿ ಕಾಣಿರಿ :

### ೮ನೆಯ ಸಂಧಿ

ಕಾವಿಯುಡೆ ವರಮಸ್ತಕದ ಸಲೆ ।
ತೀವಿರುವ ಜಡೆ ಫಾಲತಲದ ।
ಶ್ರೀವಿಭೂತಿಯು ಕಂಠಗತ ರುದ್ರಾಕ್ಷಿಗಳ ಮಾಲೆ ।
ಪಾವನದ ಕೈಬೆತ್ತವಡಿಗಳ ।
ಹಾವುಗೆಯು ಕಂಗೊಳಿಸೆ ಜಂಗಮ ।
ದೇವವೇಷದ ಮಲ್ಲಿಕಾರ್ಜುನನಲ್ಲಿಗೈತರಲು ॥೨೦॥

ಮಲ್ಲಯ್ಯನೊಡನೆ ಬರುತಿರ್ದ ಶಿವಯೋಗಿಗೆ ಪ್ರಕೃತಿ ತೋರಿದ ಬಗೆ ಇಂತಿದೆ :

## ೮ನೆಯ ಸಂಧಿ

ಮಲ್ಲಿಕಾರ್ಜುನನೊಡನೆ ಬರುತಿರೆ ।
ಕಲ್ಲು ಚಿಂತಾಮಣಿಯೆನಿಸಿ ಮರ ।
ಬಳ್ಳಿಗಳು ಸುರಭೂಜವಲ್ಲರಿಯಾಗಿ ಗೋವುಗಳು ॥
ಸಲ್ಲಲಿತ ಸುರಧೇನುವಾಗು ।
ತ್ತೆಲ್ಲ ನೀರುಂ ಸಿದ್ಧರಸವಾ ।
ಗಲ್ಲಿ ತೋರಿದವೇನೊರೆವೆನಾ ಗುರುಸುತನ ಕಣ್ಗೆ ॥೩೮॥

ಇದೊ ಇಲ್ಲಿ ಶಿವಯೋಗಿಯ ಲಿಂಗಪೂಜಾ ಸಂಪತ್ತನ್ನು ದರ್ಶಿಸಿರಿ :

## ೧೦ನೆಯ ಸಂಧಿ

ದಿಟ್ಟಿಯೊಳು ಲಿಂಗವನು ಲಿಂಗದ ।
ಬಟ್ಟೆಯೊಳು ಹರಣವನು ಹರಣದೊ ।
ಳಿಟ್ಟ ಭಾವವನೊಂದುಗೂಡಿಸಿ ಜಾನಿಪುದರಿಂದೆ ॥
ಇಷ್ಟಲಿಂಗದ ಚಿತ್ಕಳೆಯು ತಾಂ ।
ಗಟ್ಟಿಗೊಂಡೊಳಹೊರಗೆ ಬೆಳಗಲು ।
ನೆಟ್ಟನದರೊಳು ಮುಳುಗಿ ಕುಳಿತಿರ್ದನು ಮಹಾಯೋಗೀ ॥೨೩॥

ಇತ್ತ ಮಳೆಗಾಲದ ವರ್ಣನೆಯ ಶೋಭೆಯನ್ನು ನೋಡಿರಿ :

## ೧೫ನೆಯ ಸಂಧಿ

ತಳೆದು ಸುರಚಾಪವನು ಮೇಣ್ ಸಲೆ ।
ಹೊಳೆವ ಮಿಂಚಿನ ಖಡ್ಗಮಂ ತಾಂ ।
ಮೊಳಗಿನುರುಗರ್ಜನೆಯನೆಸಗುವ ಮೇಘದಂತಿಯೊಳು ॥
ಕುಳಿತು ಬರುತಿರೆ ಘನಸಮಯನೃಪ ।
ಸಿಳೆಯವರು ಕಣ್ಣರಳಿಸುತೆ ಕಡು ।
ನಲವಿನಿಂ ನೋಡಿದರು ಜೀವನಸುಖವನೀವವನಂ ॥೩॥

ಪಾರೆ ಬಿಲಗಳಿಗಂಚೆಗಳು ನಲ ।
ವೇರೆ ಜಾದಗೆಯೆದೆಗೆ ಕುಣಿತದೆ ।
ಸೇರೆ ನವಿಲುಗಳೇರಿ ಗಗನಾಂಗಣಕೆ ಕಾರ್ಮುಗಿಲು ॥
ಭೂರಮೆಯು ತಾಂ ಕ್ರೀಡಿಸಲು ಕಾ ।
ಸಾರಮಂ ಗೈದವೊಲು ಧಾರಾ ।
ಕಾರದಿಂ ಮಳೆಗರೆದು ಮುಳುಗಿಸಿತಿಳೆಯ ಜಲದೊಳಗೆ ॥೪॥

ಶಿವಯೋಗಿಯ ಲಿಂಗಪೂಜಾತಪಸ್ಸಿನ ಪ್ರಭಾವದಿಂದ ಪಶು-ಪಕ್ಷಿಗಳಲ್ಲಿ ಕೆಳೆತನ ಬೆಳೆದ ಬಗೆಯನ್ನು ಈಕ್ಷಿಸಿರಿ :

### ೧೬ನೆಯ ಸಂಧಿ

ಉರಗವೆತ್ತಾಡಿಸುವ ಹೆಡೆಯ ।
ಲ್ಲೆರಗಿದುದು ಮರಿಗಿಳಿಯು ಬಳಿಯೊಳೆ ।
ಗರಿಗೆದರಿ ಸಲೆ ಕುಣಿಯುತಿರ್ದುವು ನಲಿದು ನವಿಲುಗಳು ॥
ಹರಿಣಗಳು ವೃಕದೊಡನೆ ಭೀತಿಯ ।
ತೊರೆದು ಬಿನದಿಸುತಿರ್ದುವಾಗುರು ।
ವರನ ವಿಮಳಾಶ್ರಮದೊಳಾತನ ಯೋಗಮಹಿಮೆಯೊಳು ॥೧೯॥

ಇಲ್ಲಿ ಸೂರ್ಯಾಸ್ತದ ನೋಟ ನೋಡಿರಿ :

### ೧೬ನೆಯ ಸಂಧಿ

ಬಾಡುತಿರೆ ತಾವರೆಯು ಕಿರುನಗೆ ।
ಗೂಡುತಿರೆ ನೈದಿಲೆಗೆ ಕೋಕದೆ ।
ಮೂಡುತಿರೆ ವಿರಹವ್ಯಥೆಯು ಪಕ್ಕಿಗಳ ಸಂಕುಲವು ॥
ಗೂಡು ಸೇರುತ್ತಿರಲೆಲರು ಸುಳಿ ।
ದಾಡುತಿರೆ ಪಶ್ಚಿಮದ ಶೈಲದ ।
ಕೋಡುಗಲ್ಲಿನ ಬೆನ್ನೊಳಡಗಿದನಾ ದಿನೇಶ್ವರನು ॥೨೮॥

ಇದೋ, ನರಗುಂದ ನಾಡಿನ ವರ್ಣನೆ ಇದು :

### ೧೭ನೆಯ ಸಂಧಿ

ಹೊಲದ ಬೆಳೆಗಳ ಪೆಂಪು ಕೆರೆ ತೊರೆ ।
ಕೊಳದ ತಡಿಗಳ ತಂಪು ತೋಟದೊ ।
ಳಲರ್ದ ಪೂಗಳ ಕಂಪು ತರು ಲತೆಗಳೊಳೆಸೆವ ಸೊಂಪು ॥
ಕಲಿತವರ ನುಡಿಯಿಂಪು ಧರ್ಮದ ।
ಕೆಲಸವೆಸಗುವಲಂಪು ದೇವಸು ।
ನಿಳಯುಗಳ ಗುಂಪಿರುವುದಾ ನಾಡಗಲದೊಳು ನೋಡೆ ॥೨॥

ಅರಸು ಕಟ್ಟಿಸಿದ ಗುಡಿಯ ನೋಟವಿಂತಿದೆ :

### ೧೮ನೆಯ ಸಂಧಿ

ಕಟ್ಟಿಸುವವೋಲ್ ಪಡೆವ ಪುಣ್ಯದ ।
ಬಟ್ಟೆಗುರೆ ನೆಲಗಟ್ಟ ತಾಂ ಮೇಣ್ ।
ಕಟ್ಟಿಸುವವೋಲ್ ತನ್ನ ವಂಶದ ಬೆಳ್ಪಸದ ಗುಡಿಯಾ ॥

ಕಟ್ಟಿಸಿದನಾತ್ಮೋನ್ನತಿಯ ಸಲೆ ।
ಕೊಟ್ಟು ರಕ್ಷಿಪ ಗುರುಮಠವ ಮನ ।
ವಿಟ್ಟು ತನ್ನೃಪನೀಕ್ಷಿಪರ ಕಣ್ಮನವ ಸೆಳೆವಂತೆ ||೨೩||

### ೨೧ನೆಯ ಸಂಧಿ

ಇದು ಸುಪಂಚಾಚಾರದಾಶ್ರಮ ।
ವಿದು ಮಹಾಷ್ಟಾವರಣಗಳ ತವ ।
ರಿದು ಪರಮ ಷಟ್‌ಸ್ಥಲದ ತತ್ವವ ಬೋಧಿಸುವ ಶಾಲೆ ||
ಇದು ಸುಭಕ್ತರನುದ್ಧರಿಪ ನೆಲೆ ।
ಯಿದು ಶಿವನು ಬಿನದಿಸುವ ಬೀಡೆನಿ ।
ಪ್ಪುದು ಮಠವು ದಿಟವೆಂದದನು ಕಂಡವರು ಪೊಗಳಿದರು ||೪೫||

ಸಿದ್ಧಿ ಹೊಂದಿದ ಶಿವಯೋಗಿಯ ಸಾಮರ್ಥ್ಯವನ್ನು ಇಲ್ಲಿ ನೋಡಿರಿ :

### ೧೯ನೆಯ ಸಂಧಿ

ಅಡಿಯಿಡಲು ನೆಲೆಗಳು ಪವಿತ್ರವು ।
ನುಡಿದುದೆಲ್ಲವು ದಿಟವು ಕೈಯಿಂ ।
ಕೊಡುವುದೆಲ್ಲ ಮಹಾಪ್ರಸಾದವು ಮನದೆ ನೆನೆದೊಡವೆ ||
ಪೊಡವಿಯೊಳು ಮೈವೆತ್ತು ನಿಲುವುದು ।
ಕಡು ದಯದೆ ನಸು ನೋಡೆ ಜನ್ಮದ ।
ಜಡರು ಪೋಪುದು ತನ್ಮಹಾಯೋಗಿಯ ಮಹಿಮೆಯೆಂತೊ ||೩||

### ೨೩ನೆಯ ಸಂಧಿ

ನುಡಿದುದೇ ವರವಾಗಿ ಕೈಯಿಂ ।
ಪಿಡಿದುದೇ ಮಣಿಯಾಗಿ ದಿಟ್ಟಿಯು ।
ಕೆಡವಲಾರೊಳಮವರು ಸಜ್ಜನರಾಗಿ ಪದವಿಟ್ಟಾ ||
ಎಡೆಗಳೇ ದೇವತೆಗಳಳ್ತಿಯು ।
ಗುಡಿಗಳಾಗಿ ಸುಮನದೆ ನೆನೆದುದು ।
ಬಿಡದೆ ಸೃಷ್ಟಿಯುದಾಗಿ ತೋರುವ ತೆರದೆ ನಾಡಿನೊಳು ||೧೯||

### ಪವಾಡಗಳು.

ಈ ಕಾವ್ಯದಲ್ಲಿ,- ಚಕ್ರತೀರ್ಥದಲ್ಲಿ ಮುಳುಗಿದ ಶಿವಯೋಗಿಯು ಬೇಗನೆ ಬರದಿರಲು, ಅವನನ್ನು ಹುಡುಕಲು ಭಕ್ತದಂಪತಿಗಳು ಅದರಲ್ಲಿ ಧುಮುಕಿದಾಗ

ಅವರನ್ನು ಎತ್ತಿ ಮೇಲಕ್ಕೆ ತಂದುದು; ನದಿಯಲ್ಲಿ ಕಂಬಳಿ ಒಗೆದು ಅದರ ಮೇಲೆ ಕುಳಿತು ತೀರವನ್ನು ಸೇರಿದುದು; ಸುಣ್ಣದ ಬಟ್ಟಿಯಲ್ಲಿ ಹಾರಿ ಅದೃಶ್ಯನಾದುದು; ತೀರ್ಥದಿಂದ ನರಗುಂದ ಅರಸನ ರೋಗವನ್ನು ನಿವಾರಿಸಿದುದು; ಸಾಲಾಪುರದಲ್ಲಿ ಗಂಗೋದ್ಭವ ಲೀಲೆ ಗೈದುದು; ರಾಕ್ಷಸನ ಶಾಪ ವಿಮೋಚನೆ ಮಾಡಿದುದು; ಕಳ್ಳ ತನ ಮಾಡಿ ದೃಷ್ಟಿ ಕಳೆದುಕೊಂಡ ಕಳ್ಳರಿಗೆ ಕ್ಷಮೆದೋರಿ ದೃಷ್ಟಿ ಕೊಡುವುದು; ದೀಕ್ಷಿತರ ಯಾಗದಲ್ಲಿ ಫಲಗಳನ್ನು ಅಧಿಕ ಮಾಡಿ ತೋರಿದುದು; ನೀರಿನಲ್ಲಿ ಮುಳು ಗುವ ಬಾಲಕನನ್ನು ವರದ ಹಸ್ತದಿಂದ ಪಾರು ಮಾಡಿದುದು; ಬದಾಮಿಯ ಪ್ರಾಂತಕ್ಕೆ ಬರಗಾಲ ಬಂದಾಗ ಮಳೆಯನ್ನು ತರಿಸಿದುದು— ಹೀಗೆ ಒಟ್ಟು ಹತ್ತು ಪವಾಡಗಳ ವರ್ಣನೆ ಇದೆ.

ಪವಾಡ, ಲೀಲೆಗಳೆಂದೊಡನೆ ಟೀಕೆ ಮಾಡುವ ಮನೋವೃತ್ತಿಯವರು, ಇಲ್ಲಿ ಸಾವಧಾನದಿಂದ ವಿಚಾರ ಮಾಡಬೇಕಾಗಿದೆ. ಇಲ್ಲಿ ಬಂದಿರುವ ಪವಾಡಗಳೆಲ್ಲ ಎಲ್ಲರಿಗೂ ಸಾಧ್ಯವಿಲ್ಲವೆಂಬ ಮಾತಿಗೆ ಎರಡಿಲ್ಲ ಆದರೆ, ಶಿವಯೋಗ ಸಿದ್ಧಿಯನ್ನು ಪಡೆದು, ಆತ್ಮಶಕ್ತಿಯನ್ನು ಬೆಳೆಸಿಕೊಂಡವನಿಗೆ ಇದು ಅಸಾಧ್ಯವಲ್ಲವೆಂಬುದು ದೃಢಪಡುತ್ತದಲ್ಲದೆ, ಅಷ್ಟೇ ಸತ್ಯವಾದ ಮಾತು. ಯೋಗಸಿದ್ಧಿಯನ್ನು ಅಂಗವಿಸಿ ಕೊಂಡ ಮಹಾತ್ಮರಿಗೆ ಪ್ರಕೃತಿಯು ಕೂಡ ಆಧೀನವಾಗುತ್ತದೆಂಬುದು ಯೋಗ ಶಾಸ್ತ್ರದಿಂದ ತಿಳಿದು ಬರುತ್ತದೆ. ಅಂತಹನು, ಮಾನವನಿಗೆ ಅಸಾಧ್ಯವಾದ, ಅದ್ಭುತವಾದ ಕಾರ್ಯಗಳನ್ನು ಮಾಡಬಲ್ಲನೆಂಬುದಕ್ಕೆ ಪ್ರಾಚೀನ ಹಾಗು ಆರ್ವಾ ಚೀನ ಉದಾಹರಣೆಗಳು ಅನೇಕ ದೊರೆಯುತ್ತಿವೆ.

ಈ ಮಾತನ್ನು ನಿರ್ಧರ ಪಡಿಸಲೋಸುಗ, ಪವಾಡಗಳನ್ನು ಕುರಿತು ಓರ್ವ ಪಾಶ್ಚಾತ್ಯ ಪಂಡಿತನ ಅಭಿಪ್ರಾಯವನ್ನು ಇಲ್ಲಿ ತೋರುವುದು ಅನಿವಾರ್ಯವಾಗಿದೆ. ಓರ್ವ ಬಾಲಕನು ಮನೆಯ ಕೋಣೆಯೊಂದರಲ್ಲಿ ಕುಳಿತು ಆಡುತ್ತಿರುವನೆಂದು ಭಾವಿಸೋಣ. ಆ ಕಾಲಕ್ಕೆ ಒಂದು ಇರುವೆ ಅವನ ಬಳಿಯಲ್ಲಿ ಹಾಯ್ದು ಹೋಗು ತ್ತಲಿದೆ. ಬಾಲಕನು ಇದನ್ನು ಅರಿಯದೆ ಕೈಯಲ್ಲಿರುವ ಆಟಿಗೆಯ ವಸ್ತುವನ್ನು ಎಸೆಯುತ್ತಾನೆ. ಅದು ಇರುವೆಯ ಮೇಲೆ ಬೀಳುತ್ತದೆ. ಆಗ, ಇರುವೆ ಹಿಂದೆ, ಮುಂದೆ ಚಲಿಸಲು ಆಸ್ಪದವಿಲ್ಲದಂತಾಗಿ "ಇದಾವುದೋ ಒಂದು ದೊಡ್ಡ ಗಂಡಾಂತ ರವು ನನ್ನ ತಲೆಯ ಮೇಲೆ ಬಂದಿತು. ನಾನು ಇದರಿಂದ ಬದುಕುವಂತಿಲ್ಲ. ಇದು ನನ್ನ ಅಂತಿಮಾವಸ್ಥೆ" ಎಂದು ನೆನೆದು ಪುನಃ ಅತ್ತ, ಇತ್ತ ಸರಿಯಲು ಪ್ರಯತ್ನಿಸಿ ವಿಫಲವಾಗುವ ಹೊತ್ತಿಗೆ— ಅದೇ ಬಾಲಕನು ಏನೂ ಅರಿಯದೆ, ಪುನಃ ಆ ಆಟಿಗೆಯ ವಸ್ತುವನ್ನು ಕೈಗೆ ತೆಗೆದುಕೊಂಡು ಆಡಹತ್ತುವನು. ಆಗ ಆ ಇರುವೆ "ಎಂತಹ ಕುತ್ತಿನಿಂದ ಪಾರಾದೆನು; ಎಲ್ಲ ಆಶೆಯನ್ನು ತೊರೆದ ನನ್ನನ್ನು ದೇವನೇ ರಕ್ಷಿಸಿದನು'' ಎಂದು ನೆನೆಯುತ್ತ ಮುಂದೆ ಸಾಗುವುದು.

ಇದರಿಂದ ಏನು ಸಿದ್ಧವಾಗುತ್ತಿದೆ? ಶಕ್ತಿ ಹೀನವಾದ ಆ ಇರುವೆಗೆ ಭಾರವಾದ ವಸ್ತು, ಬಾಲಕನಿಗೆ ಸಹಜ ಆಟದ ವಸ್ತುವಾಗಿ, ಅವನು ಎಸಗಿದ ಆ ಕಾರ್ಯ ಇರುವೆಗೆ ಅದ್ಭುತವಾಗಿ ಕಂಡು ಬಂದಿತಲ್ಲದೆ, ಆ ಬಾಲಕನೇ ದೇವನಾಗಿ ತೋರಿದನು. ಅಂತೆಯೇ, ಸಿದ್ಧಿಯನ್ನು ಹೊಂದಿದ ಶಿವಯೋಗಿ ಸಾಮಾನ್ಯ ಮಾನವರಿಂದಾಗದ ಅದ್ಭುತ ಕಾರ್ಯವನ್ನು ಮಾಡುವ ಶಕ್ತಿಯನ್ನು ಪಡೆದಿರುತ್ತಾನೆಂಬುದು ಈ ನಿದರ್ಶನದಿಂದ ದೃಢಪಡುತ್ತಿದೆ. ಆದುದರಿಂದ ಇಲ್ಲಿ ಬಂದಿರುವ ಪವಾಡಗಳೆಲ್ಲ ಶಿವಯೋಗಿಯ ಸಹಜ ಲೀಲೆಗಳು. ಅವೆಲ್ಲ, ಆ ಮಹಾಪುರುಷನ ಜೀವನ ತೋಟದ ಮಲ್ಲಿಗೆಯ ಹೂಗಳು; ಅವುಗಳ ಇಂಪು, ತಂಪು, ಕಂಪುಗಳು ಆತನ ವ್ಯಕ್ತಿತ್ವಕ್ಕೆ ಕೋಡು ತಂದಿವೆ ಎಂಬುದು ಸತ್ಯವಾದುದಾಗಿದೆ.

## ಕವಿಯ ಉದ್ದೇಶ, ಪ್ರಗತಿಪರ ದೃಷ್ಟಿ

ವೀರಶೈವ ಧರ್ಮ, ನೀತಿ,ತತ್ವಗಳೆಂಬ ಹಿರಿದಾದ ವಿಷಯಗಳನ್ನು ಕಿರಿದಾದ ಶಬ್ದಗಳಲ್ಲಿ ಮನಂಬುಗುವಂತೆ ತಿಳಿಸಿಕೊಡಬೇಕೆನ್ನುವುದು ಹಾಗು ಅವುಗಳೆಲ್ಲ ಶ್ರೀ ಫಲಾಹಾರೇಶ್ವರನ ವ್ಯಕ್ತಿತ್ವದಲ್ಲಿ ಮೂಡಿಬರಬೇಕೆನ್ನುವುದು ಕವಿಯ ಪರಮೋದ್ದೇಶಗಳಾಗಿವೆ. ಅಂತೆಯೇ ಕವಿಯ ದರ್ಶನ ಶಕ್ತಿಯೆಲ್ಲ ಶ್ರೀ ಫಲಾಶನನು ಸಿದ್ಧಿ ಪುರುಷನೆಂಬುದನ್ನು ತೋರಲು ಕ್ರೋಡೀಕೃತವಾಗಿದೆ. ಅದಕ್ಕಾಗಿಯೇ ಆ ಮಹಾಯೋಗಿಯ ವ್ಯಕ್ತಿತ್ವಕ್ಕೆ ತನ್ನ ಜೀವಿತದ ಆದರ್ಶವನ್ನೆಲ್ಲ ನೀಡಿ ಕಣ್ಣು- ಮನ-ಹೃದಯದುಂಬಿ ಆನಂದಿಸುತ್ತಾನೆ. ಸಾಧಕಾವಸ್ಥೆಯಿಂದ ಸಿದ್ಧಿಯನ್ನು ಹೊಂದಿದ ಶಿವಯೋಗಿಯ ಜೀವನ ವಿಕಾಸವನ್ನು, ಆತನ ಲಿಂಗಪೂಜಾಯೋಗಸಮಾಧಿಯನ್ನು, ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲಗಳನ್ನು ಕವಿಯು ಒಂದೆಡೆ ಶಾಸ್ತ್ರದ ಅಧಿಕಾರವಾಣಿಯಿಂದ, ಇನ್ನೊಂದೆಡೆ ಸಾಹಿತ್ಯದ ಸವಿನುಡಿಯಿಂದ, ಮಗದೊಂದೆಡೆ ಅನುಭವದ ಅಮರವಾಣಿಯಿಂದ ಬೋಧಿಸುತ್ತಾನೆ. ಅದನ್ನು ತಿಳಿಸುವುದು ಮಾತು, ಮನಗಳಿಗೆ ನಿಲುಕದ ವಿಷಯ; ಅದು ಅನಿರ್ವಚನೀಯವಾದುದು. ಆ ಕಾಲಕ್ಕೆ, ಫಲಾಶನನೇ ವೀಣೆ; ಕವಿಯೇ ವೈಣಿಕ; ನಾಗೇಶ ಭಕ್ತಿದುಂಬಿ ನುಡಿಯ ಹತ್ತಿದನೆಂದರೆ— ಆ ನುಡಿಯೇ ಮುತ್ತಿನಹಾರ, ಆ ನುಡಿಯೇ ಸ್ಫಟಿಕದ ಸಲಾಕೆ, ಆ ನುಡಿಯೇ ಮಾಣಿಕ್ಯದ ದೀಪ್ತಿ........ ಓದುಗ ಮೈಮರೆಯುತ್ತಾನೆ; ಶ್ರೋತೃವೃಂದ ಭಕ್ತಿಯ ಉನ್ಮಾದದಲ್ಲಿ ತಲೆದೂಗುತ್ತಿದೆ. ಆಗಲೇ ಮಾತು ಜ್ಯೋತಿರ್ಲಿಂಗವಾಗುತ್ತದೆ. ಇದುವೇ ಕವಿಯ ಕವಿತಾ ಬಂಧನದ ಅಂತಿಮಾವಸ್ಥೆಯಾಗಿದೆ.

ಪುರಾಣ ಬರೆಯುವ ಕವಿಗೂ ಪ್ರಗತಿಶೀಲ ದೃಷ್ಟಿ ಇದೆ ಎಂಬುದಕ್ಕೆ ಈ ಕಾವ್ಯವೇ ಸಾಕ್ಷಿ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಇಲ್ಲಿ ಕೊಡಬಹುದಾಗಿದೆ. ಒಂದು ಕಡೆ, ಶರಭಾಂಬೆ ಪುತ್ರರಿಲ್ಲದ್ದಕ್ಕೆ ತನಗಾದ ವ್ಯಥೆಯನ್ನು ಪತಿ

ಮಲ್ಲಿಕಾರ್ಜುನನಿಗೆ ತಿಳಿಸುತ್ತಾಳೆ. ಈ ಸಂದರ್ಭದಲ್ಲಿ ಮತ್ತೋರ್ವ ಕವಿಯಾಗಿದ್ದರೆ, ಗಿಡ, ಮರಗಳನ್ನು ಸುತ್ತಲೋ, ಹರಕೆಹೊರಲೋ ಅಥವಾ ಮತ್ತಾವ ವ್ರತವನ್ನು ಪಾಲಿಸಲೋ ಹೇಳುತ್ತಿದ್ದನು. ಆದರೆ, ಆ ಕೊರಗನ್ನು ಕಂಡು ಶರಭಾಂಬೆಯನ್ನು ಸಂತೈಸುವ ವಿಧಾನ ಹಾಗು ಸಂತಾನಕ್ಕಾಗಿ ಇಷ್ಟಲಿಂಗವನ್ನು ಪೂಜಿಸಿ ಆ ಭಾಗ್ಯವನ್ನು ಪಡೆಯೆಂದು ಕವಿ ಹೇಳುವ ಮಾತುಗಳು ವಿಚಾರಪರವೂ ಪ್ರಗತಿದಾಯಕವೂ ಆಗಿವೆ. ವೀರಶೈವರು ಅನ್ಯ ದೈವತಗಳ ದರ್ಶನ,ಸ್ತುತಿ ಮಾಡುವುದು ನಿಷಿದ್ಧವೆಂದು ನಮ್ಮಲ್ಲಿ ಅನೇಕರು ತಿಳಿದುಕೊಂಡಿದ್ದಾರೆ. ಅದರೆ, ಗುಡಿಕಟ್ಟಿಸಿ, ಸ್ಥಾವರಲಿಂಗ ಪ್ರತಿಷ್ಠೆಮಾಡಲು ಸಂಶಯಕ್ಕೊಳಗಾಗಿ ಬಂದ ಭಕ್ತರ ಸಂಶಯ ನಿವಾರಣೆ ಮಾಡುವಾಗ ಈ ಮಾತಿನ ನಿರ್ಣಯವನ್ನು ಕವಿಯು ಬಹು ಜಾಣ್ಮೆಯಿಂದ, ಪ್ರಗತಿಶೀಲನಾಗಿ ಇಂತುಗೈದಿದ್ದಾನೆ. ಇಷ್ಟ ಲಿಂಗವನ್ನು ಬಿಟ್ಟು ಅನ್ಯ ದೈವತಗಳ ಉಪಾಸನೆ ಮಾಡಬಾರದೆಂಬ ಕಟ್ಟನ್ನು ಶರಣರಿಟ್ಟಿರುವುದು ನಿಜ. ಸ್ಥಾವರ ಲಿಂಗಗಳನ್ನು ಉಪಾಸ್ಯ ದೈವತಗಳೆಂದು ನೆನೆಯದೆ, ಅವುಗಳ ದರ್ಶನ, ಸ್ತೋತ್ರ ಮಾಡುವುದು ದೋಷವಲ್ಲವೆಂದು ಸ್ಪಷ್ಟಪಡಿಸುತ್ತಾನೆ. ಇನ್ನೊಂದೆಡೆ, ಭೋಗದಲ್ಲಿ ವಿರತಿಯನ್ನು ಹೊಂದಿ ಬಂದ ಕೆಲವರಿಗೆ– ತ್ಯಾಗ ಪೂರ್ವಕವಾದ ಭೋಗದಲ್ಲಿಯೇ ಯೋಗವಿದೆ;ನನ್ನದೆಂದು ಭೋಗಿಸದೆ ಪುರಹರನ ಪ್ರಸಾದವೆಂದು ಹರನಿಗರ್ಪಿಸಿ, ಶೇಷವನ್ನು ಭೋಗಿಸಿದೊಡೆ ಅದುವೇ ಶಿವಯೋಗ; ಇದರಿಂದ ದೊರಕುವ ಶಾಂತಿಯೇ ಮುಕ್ತಿ ಎಂದು ತ್ಯಾಗ-ಭೋಗಗಳ ಸುಂದರ ಸಮನ್ವಯವನ್ನು ತೋರಿ, ಅವರನ್ನು ಲೌಕಿಕದಲ್ಲಿದ್ದೇ ಆತ್ಮೋದ್ಧಾರ ಮಾಡಿಕೊಳ್ಳಲೊಪ್ಪಿಸುವನು. ಶ್ರೀ ಫಲಾಹಾರೇಶ್ವರನ ಜನ್ಮವನ್ನು ಉತ್ಪ್ರೇಕ್ಷೆಮಾಡದೆ ನೈಸರ್ಗಿಕವಾಗಿ ಹೇಳಿರುವುದು- ಕವಿಯ ವಿಚಾರಪರ ದೃಷ್ಟಿಯ ನಿದರ್ಶನವಾಗಿದೆ.

ಶ್ರೀ ಫಲಾಶನ ಶಿವಯೋಗಿಯು ಎಸಗಿದ ಹತ್ತು ಪವಾಡಗಳ ಕಾಲಕ್ಕೂ ಅವೆಂತು ಜರುಗಿದವೆಂಬುದಕ್ಕೆ "ಭಕ್ತರ ಭಕ್ತಿಯ ಶಕ್ತಿಯಿಂದ, ಯಜ್ಞದೇವನ ಕೃಪೆಯಿಂದ, ದೀಕ್ಷಿತರ ಮಹಿಮೆಯಿಂದ, ನಿನ್ನ ನಿಷ್ಠೆ, ನಂಬುಗೆಯಿಂದ'' ಎಂದು ನಿರಹಂಭಾವ ದ್ಯೋತಕವಾಗಿ ನುಡಿಸುತ್ತಾನೆ. ಇಲ್ಲಿ ಕವಿಯ ಆದರ್ಶ ಚೆನ್ನಾಗಿ ವ್ಯಕ್ತಪಡುತ್ತಿದೆ.

## ಉಪಸಂಹಾರ.

ಈ ಕಾವ್ಯ ಕೃತಿಯನ್ನು "ಶ್ರೀ ಫಲಾಹಾರ ಶಿವಯೋಗೀಶ್ವರ ಪುರಾಣ" ವೆಂದು ಹೆಸರಿಸುವುದಕ್ಕಿಂತ ಶ್ರೀ ಫಲಾಹಾರೇಶ್ವರ ಚರಿತೆ, ಆತ್ಮ ಚರಿತೆ, ಆತ್ಮ ಶ್ರೀ ಅಥವಾ ಕಾವ್ಯವೆಂದು ಸಂಬೋಧಿಸುವುದು ಕಾಲ, ಮಾನ, ಪರಿಸ್ಥಿತಿಗನುಸರಿಸಿ ಹೆಚ್ಚು ಸೂಕ್ತವೆಂದು ತೋರುತ್ತದೆ. "ಪುರಾಣ" ಈ ಶಬ್ದವು ಅಚ್ಚಗನ್ನಡವಲ್ಲ. 'ಪುರಾ' ಶಬ್ದದಿಂದ ಪುರಾಣದ ಉತ್ಪತ್ತಿಯಾಗಿದೆ. ಪುರಾಣ— ಇದರರ್ಥವನ್ನು

ರೆವರೆಂಡ ಫಾದರ್ ಕಿಟ್ಟೆಲ್ ಅವರು, ಬಹು ಹಿಂದಿನ ಕಾಲದ, ಹಳೆಯ, ಆದಿಕಥೆ-ಎಂದು ಕೊಡುತ್ತಾರೆ. ನಾನಾರ್ಥ ರತ್ನಾಕರ,ಮಂಗರಾಜ ನಿಘಂಟಿನಲ್ಲಿಯೂ ಇದೇ ಅರ್ಥವಿದೆ. ಶ್ರೀ ಫಲಾಹಾರೇಶ್ವರನು ಐತಿಹಾಸಿಕ ಪುರುಷ ಇಂತಿರುವಾಗ ಸುಮಾರು ೧೨೫ ವರ್ಷಗಳ ಹಿಂದೆ ಆಗಿ ಹೋದ ಮಹಾ ಶಿವಯೋಗಿಯ ಜೀವನ ಚರಿತೆಗೆ ಪುರಾಣವೆನ್ನುವುದು ಅಷ್ಟು ಸಮಂಜಸವಾಗಿ ತೋರಲಾರದೆಂದು ನನ್ನ ವಿನಮ್ರ ಅಭಿಮತವಾಗಿದೆ.

ನಮ್ಮವರು, ಪ್ರಾಚೀನವಾದುದು, ಬಹು ಹಿಂದಿನದು, ಅನಾದಿಯಿಂದ ಬಂದುದು ಎಂದರೆ— ಅದಕ್ಕೆ ಆಕರ್ಷಿತರಾಗಿ ಆಸಕ್ತಿ ವಹಿಸಿದುದು ಕಂಡು ಬರುತ್ತಿದೆ. ಲಿಂಗಾಯತ ಧರ್ಮವು ಬಸವಣ್ಣನವರ ಕಾಲಕ್ಕಿಂತ ಸಹಸ್ರಾರು ವರ್ಷಗಳ ಪೂರ್ವವಲ್ಲಿಯೇ ಇತ್ತೆಂದರೆ ಅವರಿಗೆ ತೃಪ್ತಿ. ಅದಕ್ಕೂ ಹಿಂದೆ ಅದು ಯಾವ ರೀತಿಯಲ್ಲಿತ್ತು? ಬಸವಣ್ಣನವರು ಅದನ್ನು ಎಂತು ಮಾರ್ಪಡಿಸಿಕೊಂಡು ಲಿಂಗಾಯತ ಧರ್ಮವನ್ನಾಗಿ ಪ್ರಸ್ಥಾಪಿಸಿದರೆಂಬ ವಿವೇಚನೆ, ವಿಚಾರಕ್ಕೆ ಅವರು ತಲೆ ಹಾಕುವುದಿಲ್ಲ. ಪ್ರಾಚೀನವೆಂದರೆ ಅಷ್ಟೊಂದು ಅಭಿಮಾನ, ಆಸಕ್ತಿ ಬೆಳೆದು ಬಂದಿದೆ. ನಮ್ಮವರಲ್ಲಿ, ಇದರಂತೆಯೇ ವೇದದ ಪ್ರಾಚೀನತೆಯನ್ನು ಅನುಲಕ್ಷಿಸಿ ನಮ್ಮ ಮಾಹೇಶ್ವರರು ಹೆಸರಿನ ಹಿಂದೆ ವೇದಮೂರ್ತಿಯೆಂದು ಹಚ್ಚಿಕೊಳ್ಳುತ್ತಿರುವುದು ಇನ್ನೊಂದು ಉದಾಹರಣೆಯಾಗಿದೆ. ವೇದಕ್ಕಿಂತಲೂ ಪ್ರಾಚೀನನಾದ ಅನಾದಿಯಾದ ಶಿವನಿರುವಾಗ ಶಿವಮೂರ್ತಿ ಎಂದೇಕೆ ಸಂಬೋಧಿಸಿಕೊಳ್ಳಬಾರದು? ಶಿವಮೂರ್ತಿ ಎಂಬುದು ಎಷ್ಟು ಮಂಗಲಕರವಾಗಿದೆ. ಈ ರೂಢಿಯು ನಮ್ಮ ಸಮಾಜದಲ್ಲಿ ಒಳಕೆಗೆ ಬರಲೆಂದು ಈ ಮೂಲಕ ಬಿನ್ನವಿಸುತ್ತೇನೆ.

ಇಂತು, ಪ್ರಾಚೀನತೆಗೆ ಮಾರು ಹೋದ ನಮ್ಮ ಸಮಾಜ, ಇಂತಹ ಕೃತಿಗಳಿಗೆ ಪುರಾಣವೆಂದು ಕರೆಯುತ್ತಿರುವುದು ಅಚ್ಚರಿಯಮಾತಲ್ಲವಾದರೂ ಕೇವಲ ಒಂದು ಶತಮಾನದ ಹಿಂದೆ ಆಗಿ ಹೋದ ಈ ಕಾವ್ಯದ ಐತಿಹಾಸಿಕ ಮಹಾ ಶಿವಯೋಗಿಗೆ ಅದು ಉಚಿತವೆನಿಸಲಾರದು. ಏಕೆಂದರೆ, ಪುರಾಣವೆಂದೊಡನೆ ಮುನಿದು, ಮೂಗುಮುರಿದು, ಮೂದಲಿಸುತ್ತಿದೆ ಇಂದಿನ ನವನಾಗರಿಕ ಜನಾಂಗ, ಹೀಗೆ ಪುರಾಣಗಳ ಬಗೆಗೆ ಅನಾಸಕ್ತಿ ಬೆಳೆದಿರುವಾಗ ಪುರಾಣ ಅಲ್ಲದುದನು. ಪುರಾಣವೆಂದು ಕರೆದು ಅದನ್ನು ನೋಡುವ,ಅಭ್ಯಸಿಸುವ,ಆಕಾಂಕ್ಷೆಗೆ ತಣ್ಣೀರೆರಚುವುದು- ಇಷ್ಟವಾದುದಲ್ಲ. ಜನಮನವನ್ನು ತಿದ್ದಿ, ತೀಡಿ ಸಂಸ್ಕರಿಸುವ ಅಂಶಗಳು ಪುರಾಣಗಳಲ್ಲಿದ್ದರೂ ಅತಿಶಯೋಕ್ತಿ, ಅನಂತ ಅದ್ಭುತಲೀಲೆ, ಪವಾಡಗಳಿಂದಾಗಿ ಅವು ಸುಶಿಕ್ಷಿತರ ಮನವನ್ನು ಇಂದು ಆಕರ್ಷಿಸಲಾರದಾಗಿವೆ. ಪ್ರಸ್ತುತ ಪುರಾಣವನ್ನು ಕುರಿತು ಈ ಮಾತನ್ನು ಹೇಳುತ್ತಿಲ್ಲ. ಪುರಾಣವೆಂದೆನಿಸುವ ಇನ್ನಿತರ ಕೃತಿಗಳಿಗೆ ಇದು ಅನ್ವಯಿಸುತ್ತಿದೆ. ಕಾಲ ಬದಲಾದಂತೆ ಜನಮನವೂ ಬದಲಾ

ಗುತ್ತ ಹೋಗುವುದು ಪ್ರಕೃತಿಯ ನಿಯಮವಾಗಿದೆ. ಅದು ಕಾರಣ, ಬದಲಾವಣೆಗೆ ತಕ್ಕಂತೆ ಸಮುಚಿತವಾಗಿ ಗ್ರಂಥಕ್ಕೆ ಹೆಸರಿಸುವುದು ಅದರ ಮಹತಿಯ ದೃಷ್ಟಿಯಿಂದ ಸ್ವಾಗತಾರ್ಹವೆಂದು ಹೇಳಬಹುದಾಗಿದೆ. *

ಈ ಕೃತಿಯ ಪ್ರಸ್ತಾವನೆಯಲ್ಲಿ ಹೇಳಬೇಕೆಂದು ಮನದಲ್ಲಿ ಮಡಗಿದುದು ಬಹಳ. ದಿನದ ಕಾರ್ಯದ ಒತ್ತಡ, ಕಾಲದ ಅಭಾವ, ದೇಹಾಲಸ್ಯದ ಮೂಲಕ ಅದೆಲ್ಲವೂ ಪೂರೈಸದಿದ್ದುದಕ್ಕೆ ವಿಷಾದಪಡಬೇಕಾಗಿದೆ. ವಿಷಾದದಿಂದ ಅಂತ್ಯವಾಗುವುದು ನಮ್ಮ ಸಂಸ್ಕೃತಿಗೆ ಒಪ್ಪದ ಮಾತಲ್ಲವೇ? ಆದರೆ, ಆ ವಿಷಾದದ ಬೆಂಗೊಂಡು ಈ ನನ್ನ ಅಲ್ಪ ಸೇವೆ ಶಿವಯೋಗಿಗೆ ಅರ್ಪಿತವಾಯಿತೆಂಬ ಆನಂದವೂ ಉಕ್ಕೇರಿ ಬಂದಿದೆ.

**ಕೋಟೆ, ಧಾರವಾಡ.**
ದಿ. ೧—೮—೧೯೫೩.

**—ಎಂ. ಜಿ. ವಿರೂಪಾಕ್ಷನ್**

— ಸತ್ಯಂ-ಸುಂದರಂ-ಶಿವಂ —

---

* ಆದರೆ, ಕವಿಯ ಆಶಯವು ಹೀಗಿರುವುದೆಂದು ಕೊನೆಗೆ ನನಗೆ ಗೊತ್ತಾಯಿತು- "ಭವಿಷ್ಯತ್ಪುರಾಣವೂ ಇರುವುದರಿಂದ ಪುರಾತನ ಕಥೆಯನ್ನೇ ಪುರಾಣವೆಂದು ಕರೆಯಬೇಕೆಂಬ ನಿಯಮವಿಲ್ಲ. ಇಂದಿಗೂ ಶ್ರಾವಣಾದಿ ಪುಣ್ಯಕಾಲಗಳಲ್ಲಿ ಪುರಾಣ ಶ್ರವಣದಲ್ಲಿ ಭಕ್ತಿಯುಳ್ಳ ಭಾವುಕರಿರುವರು. ಅವರಲ್ಲಿ ಶ್ರೀ ಫಲಾಹಾರೇಶ್ವರ ಶಿವಯೋಗಿಯ ಚರಿತ್ರೆಯೂ ಶ್ರವಣಾರ್ಹವಾದ ಪುರಾಣವೆಂಬ ಭಕ್ತಿಯುಂಟಾಗಲೆಂದು ಈ ಚರಿತ್ರೆಗೆ ಪುರಾಣವೆಂದು ಹೆಸರಿಡಲಾಗಿದೆ" ಎಂದು.

– ಶ್ರೀ ಗುರು ಪ್ರಸನ್ನ –

ಶ್ರೀ ಫಲಾಹಾರ ಶಿವಯೋಗೀಶ್ವರ ಪುರಾಣದ

# ಪ್ರಸ್ತಾವನೆ.

## ೩. ಕಥಾ ಸಾರಾಂಶ.



### ಮಂಗಲಾಚರಣಸಂಧಿ

ಕವಿಯು, ಕಾವ್ಯದ ಪ್ರಾರಂಭಕ್ಕೆ ಭಕ್ತಪೋಷಕ ಶ್ರೀಫಲಾಹಾರೇಶ್ವರ, ಮಂಗಲಕರ ಶಿವ, ಶಕ್ತಿಯುತೆ ಶಿವೆ, ವಿಘ್ನನಾಶಕ ಗಣಪತಿ, ಶಿವಸುಸೌಖ್ಯದ ಭೋಗವನು ನೀಡುವ ಶ್ರೀಗುರು, ಮೋಕ್ಷಸಿದ್ಧಿಸಾಧನೆಗೆ ಪೂರಕವಾದ ಇಷ್ಟ ಲಿಂಗ, ಸಮಾಜೋದ್ಧಾರನಿರತ ಜಂಗಮ ಇವರನ್ನು ದಾಸ್ಯ ಮತ್ತು ಭಕ್ತಿ ಭಾವ ದಿಂದ ನೆನೆಯುತ್ತಾನೆ. ವೀರಶೈವದರ್ಶನಸಿದ್ಧಿಗೆ ಸಾಧಕವಾದ– ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳನ್ನು ಕಂಠ ತುಂಬಿ ಕೊಂಡಾಡುವನು. 'ಎನಗಿಂತ ಕಿರಿಯರಿಲ್ಲ'ವೆಂಬ ಭೃತ್ಯಾಚಾರದಿಂದ ನಡೆದು ತೋರಿದ ಜಗದಣ್ಣ ಬಸವಣ್ಣ, ವಿರತಿವಲ್ಲಭನಾದ ಅಲ್ಲಮಪ್ರಭು, ಜ್ಞಾನಖನಿಯಾದ ಚೆನ್ನಬಸವಣ್ಣ, ವೀರಶೈವ ಗುರೂತ್ತಮರಾದ ಪಂಚಾಚಾರ್ಯರು, ಇವರು ಭುವಿಯನ್ನು ಪಾವನ ಗೈದವರು; ಅವರೆಲ್ಲರೂ ನನ್ನ ಹೃದಯವನ್ನು ಬೆಳಗುತಿರಲೆಂದು ಹಂಬಲಿಸುತ್ತಾನೆ. ಶಿವ ಯೋಗಸಿದ್ಧಿಯನ್ನು ಪಡೆದ ಸಿದ್ಧರಾಮ, ವೀರವಿರಾಗಿಣಿ ಮಹಾದೇವಿಯಕ್ಕ, ವೀರಶೈವವೇ ವಿಶ್ವಧರ್ಮದ ಸಾರವೆಂಬುದನ್ನು ತಮ್ಮ ನಡೆ-ನುಡಿಗಳಿಂದ ತೋರಿದ ಶಿವಶರಣರ ಅಡಿಯ ಧೂಳಿಯ ಆಶೀರ್ವಾದವು ನನಗಿರಲೆಂದು ಬಯಸುತ್ತಾನೆ- ಏಕಜನ್ಮದಲ್ಲಿ ಮುಕ್ತಿಯನ್ನೀಯುವ ಏಕೇಶ್ವರವಾದದ ವೀರಶೈವಧರ್ಮದಲ್ಲಿ ಜನಿಸಿ ಬಂದುದೇ ತನ್ನ ಭಾಗ್ಯವೆಂದು ಮನದುಂಬಿ ನುಡಿಯುತ್ತಾನೆ. ಶಿವಶರಣರ ಆತ್ಮಾನುಭವವನ್ನು ಕವನ ಕನ್ನಡಿಯಲ್ಲಿ ತೋರಿದ ಮಹಾಕವಿ ಹರಿಹರ ಮೊದಲಾ ದವರು ನನ್ನ ಕವಿತಾವಾಣಿಗೆ ಭಕ್ತಿಸುಧೆಯನ್ನು ದಯಪಾಲಿಸಲೆಂದು ಬೇಡುತ್ತಾನೆ.

ಬೆಳಗಾವಿ ಜಿಲ್ಹೆ, ರಾಮದುರ್ಗ ತಾಲೂಕ, ಅವರಾದಿಯ ಮಠಾಧ್ಯಕ್ಷ ಶ್ರೀ, ನಿ. ಪ್ರ. ಸಂಗಮೇಶ್ವರ ಮಹಾಸ್ವಾಮಿಗಳ ದರ್ಶನಕ್ಕೆ ತುಂಗಗುಣಿ ಶಿವಮೂರ್ತಿ ಶಿವಶಾಸ್ತ್ರಿಗಳು ಹಿರೇಮಠ ಅನವಾಲ ಇವರ ಸಂಗಡ ಹೋದೆನು. ಆ ಕಾಲಕ್ಕೆ ಪೂಜ್ಯ ಶ್ರೀಗಳು ಈ ಪುರಾಣವನ್ನು ರಚಿಸಲು ಆಜ್ಞೆಯಿತ್ತು ಆಶೀರ್ವದಿಸಿದರು. ಅದಕ್ಕೆ ಶಿರಸಾಮಾನ್ಯವೆಂದು ಒಪ್ಪಿದೆನು. ಕೊಂಗವಾಡ ಹಿರಿಯಮಠದ ವೀರಭದ್ರ ಪಂಡಿತಗುರುವರನ ಚರಣಕಮಲವ ನೆನೆದು ಈ ಕೃತಿಯನ್ನು ರಚಿಸುವೆನೆಂದು

ಕವಿಯು ಒರೆಯುತ್ತಾನೆ. ಪುಣ್ಯಗಂಗೆಯನ್ನು ತುಂಬಿರಿಸಿದ ಮಣ್ಣು ಕೊಡವು ಎಂತು ಪೂಜಾರ್ಹವೋ, ಅಂತು ಶ್ರೀ ಫಲಾಹಾರೇಶ್ವರ ಗುರುವರನ ಚರಿತಾಮೃತ ದಿಂದ ತುಂಬಿದ ಈ ಕವನ ಪಾತ್ರೆಯು ಗುಣಜ್ಞ ಹೃದಯರಿಂದ ಪೂಜೆಗೊಳ್ಳಲೆಂದು ಪ್ರಾರ್ಥಿಸಿ ಕವಿಯು ಪುರಾಣ ರಚನೆಗೆ ತೊಡಗುತ್ತಾನೆ.

## ಒಂದನೆಯ ಸಂಧಿ

ಅಜನು ನಿರ್ಮಿಸಿದ ಜಗತ್ತು ಲಿಂಗಮಯವೆಂಬುದನ್ನು ತೋರಲೆಂಬಂತೆ ಈ ಭೂಮಂಡಲವು ಗೋಲಾಕೃತಿಯಲ್ಲಿ ಕಂಗೊಳಿಸುತ್ತಲಿದೆ. ಇಂತಪ್ಪ ಧರಣೀ ಕಾಂತೆಯ ಅಂತಃಪುರದಂತೆ ಭಾರತವು ಬೆಳಗುತ್ತಲಿದೆ. ತ್ರಿದಿಶೆಗಳಲ್ಲಿ ಕಡಲಿನಿಂದ, ಒಂದೆಸೆಯಲ್ಲಿ ಹಿಮದ ಬೆಟ್ಟದಿಂ ಸುತ್ತುವರಿಯಲ್ಪಟ್ಟ ಭಾರತವು ಸತ್ಯದ ಸನಾತನ ಧರ್ಮದಾಶ್ರಯವಾಗಿದೆ; ಪಾರಮಾರ್ಥ ತತ್ವ ವಿಮರ್ಶನದ ಬೀಡಾಗಿದೆ; ಸಕಲ ಸಂಪದದ ಆಲಯವಾಗಿದೆ ಇಂತಿರುವ ಭಾರತ ದೇವಿಯ ಪೂಜೆಗೆ ನಿರ್ಮಿಸಿದ ನಲ್ಗುಡಿಯೋ ಎಂಬಂತೆ ಕನ್ನಡ ನಾಡು "ಸುಜಲ, ಸುಫಲ, ಮಲಯಜ ಶೀತಲ'' ಇವುಗಳಿಂದ ಶೋಭಿಸುತ್ತಲಿದೆ. ಈ ನಾಡಿನಗಲದೊಳು ಎಲ್ಲಿ ನೋಡಿ ದೊಡಲ್ಲಿ ಗತವೈಭವದ ಕುರುಹುಗಳು, ಶಿಲಾಶಾಸನಗಳು, ವೀರಗಲ್ಲುಗಳು ಇಂದು, ಮುಂದಿನ ಪೀಳಿಗೆಗೆ ಸ್ಫೂರ್ತಿ ದುಂಬ ಚೇತನ ಕೊಡುತ್ತಲಿವೆ. ಇಲ್ಲಿಯ ಗುಡಿ, ಬಸದಿ, ಮಸೂತಿಗಳು ಕನ್ನಡ ಶಿಲ್ಪಕಲೆಯ ಮಹೋನ್ನತ ಕೃತಿಗಳಾಗಿವೆ. ಅನೇಕ ವಂಶದ ನೃಪರು ತಮ್ಮ ಇತಿಹಾಸದಿಂದ ಈ ನಾಡಿನ ಕೀರ್ತಿಯನ್ನು ಬೆಳಗಿದ್ದಾರೆ. ಅನಂತ ಧರ್ಮ ಸಂಸ್ಥಾಪಕರ, ಯೋಗಿವರರ, ಗುರುಪುಂಗವರ, ತಪೋಧನರ, ಶಿವಶರಣರ, ಶಿವಯೋಗಿಗಳ ಹೆತ್ತಮಾತೆಯಾಗಿ ಕನ್ನಡ ಭೂಮಾತೆ ಜಗದ ಕಣ್ಮಣಿ ಯಾಗಿ ಕಂಗೊಳಿಸುತ್ತಿರುವಳು. ಬಹುಮಾನ್ಯ ವಿಬುಧರಿಂ, ಕವಿಗಳಿಂ, ಸುಜ್ಞಾನಿ ಗಳಿಂ ತುಂಬಿದ ಈ ನಾಡು ನೋಡುವವರಿಗೆ ಶಿವಭಕ್ತ ಸಾಮ್ರಾಜ್ಯವೋ ಎಂಬಂತೆ ಸದಾ ಕಾಲವೂ ಮೆರೆಯುತ್ತಲಿದೆ.

## ಎರಡನೆಯ ಸಂಧಿ

ಧಾರವಾಡ ಜಿಲ್ಹೆ ರೋಣ ತಾಲೂಕಿಗೆ ಸೇರಿದ ಅಸೂಟಿ ಎಂಬುದೊಂದು ಗ್ರಾಮ. ಅಲ್ಲಿ ವೀರಶೈವ ಧರ್ಮಸಂಸ್ಕಾರ ಕರ್ತೃಗಳ ನೆಲೆಯಾಗಿ ಕಂಗೊಳಿಪ ಗುರುಮಠವೊಂದಿದೆ. ಈ ಮಠದ ವಂಶವಾರಿಧಿ ಸೋಮನೆಂಬಂತೆ ಮಲ್ಲಿಕಾರ್ಜುನ ಗುರುವು ತನ್ನ ಪ್ರೇಮಪತ್ನಿ ಶರಭಾಂಬೆಯೊಡಗೂಡಿ ಜೀವನ ಸಾಗಿಸಿದ್ದಾನೆ. ಅಂಗಸತಿ, ಲಿಂಗಪತಿಯ ಕಾಯಕದಿಂದ ಅಂಗಭೋಗವನ್ನೇ ಲಿಂಗಭೋಗವನ್ನಾಗಿ ಪರಿವರ್ತಿಸಿಕೊಂಡ ಆ ದಂಪತಿಗಳು ಭಕ್ತರಿಗೆ ಗೌರೀ-ಸಂಗಮೇಶ್ವರರಾಗಿ ಕಾಣ ತೊಡಗಿದ್ದಾರೆ. ಪತಿಯೇ ಪ್ರಾಣವೆಂದರಿತ ಶರಭಾಂಬೆ ಒಂದು ರಾತ್ರಿ ತನ್ನ ಪುತ್ರಾಭಿಲಾಷೆಯನ್ನು ಪತಿಗೆ ತಿಳಿಸುತ್ತಾಳೆ. ನಿಮ್ಮ ಕೃಪಾಜಲದಿಂದ ಪೋಷಿತ

ವಾದ ಈ ದೇಹ ಬಳ್ಳಿಯು ಇದೊಂದು ಚಿಂತೆಯಿಂದ ಬಾಡುತ್ತಲಿದೆ. ನಂಜಿನಂತೆ ಈ ತನುವನ್ನು ದಹಿಸುವ ಬಂಜೆತನವನ್ನು ಪರಿಹರಿಸುವ ಮಾರ್ಗವನ್ನು ಅರುಹ ಬೇಕೆಂದು ಬೇಡಿಕೊಂಬುವಳು. ಮಲ್ಲಿಕಾರ್ಜುನನು ಪ್ರಿಯ ಪತ್ನಿಗೆ, ಲಿಂಗಾಂಗ ಸಮರಸ ಸುಖದಲ್ಲಿ ಇದ್ದು ಇಷ್ಟಲಿಂಗವ ಪೂಜಿಸುತೆ ನಿನ್ನ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳೆಂದು ಉಪದೇಶಿಸುವನು. ಅಂದಿನಿಂದ ಭಕ್ತಿಸುಧಾಸರೋವರದಲ್ಲಿ ವಿಹರಿಸುವ ಹಂಸಮಿಥುನದ ಚೆಲುವನೊಳಗೊಂಡ ಆ ದಂಪತಿಗಳು, ತಮ್ಮಿಷ್ಟ ಲಿಂಗವ ಒಲಿದು ಪೂಜಿಸುತ್ತ ದಿನಗಳೆಯುತ್ತಾರೆ. ಭಕ್ತ ಪರಾಧೀನನಾದ ಪರ ಶಿವನು ಆ ದಂಪತಿಗಳ ಭಕ್ತಿಗೊಲಿದು ತನ್ನ ಪರಮ ಚಿತ್ಕಳೆಯನ್ನು ಶಿವಶರಣೆ ಶರಭಾಂಬೆಯ ಗರ್ಭದಲ್ಲಿ ಪ್ರತಿಷ್ಠೆ ಮಾಡುವನು. ನವಮಾಸ ಕಳೆದ ನಂತರ ಶರಭಾಂಬೆಯು ಶಂಕರನ ತೇಜದ ಪುತ್ರರತ್ನವನ್ನು ಪಡೆಯುವಳು. ಪಿತೃಗಳು ಅಸೂಟಿಯ ಭಕ್ತರೊಡನೆ ಕೂಡಿ ಈ ಲೋಕವನ್ನೇ ಶಿವಮಯವಾಗಿಸಲು ಪುಟ್ಟಿ ಬಂದ ಆ ಕಂದನಿಗೆ ಲಿಂಗಧಾರಣ ಮಾಡಿಸಿ **ಶಿವ**ನೆಂಬ ಶುಭ ನಾಮವನ್ನು ಇಡು ವರು. ದಿನದಿನಕ್ಕೆ ಕಳೆಯೇರಿ ಬೆಳೆಯುತ್ತಿರುವ ಗುರು ಬಾಲಕನು ಆ ಗ್ರಾಮದ ಕಣ್ಮಣಿಯಾದನು.

## ಮೂರನೆಯ ಸಂಧಿ

ಇಂತು ವೃದ್ಧಿ ಹೊಂದುತ್ತಿರುವ ಗುರುಸುತನು ತನ್ನ ಬಾಲಲೀಲೆಗಳಿಂದ ಮನೆಗೆಲಸದಲ್ಲಿ ತಂದೆ ತಾಯಿಗಳಿಗೆ ಅಡೆತಡೆಯನ್ನೊಡ್ಡುವನು. ಜನನಿ ಶರಭಾಂಬಿಕೆ ಲಿಂಗ ಮಧ್ಯದಲ್ಲಿ ದೃಷ್ಟಿಯನ್ನು ನೆಲೆಗೊಳಿಸಿದಾಗ ಶಂಭುವೇ ಮಗನ ರೂಪದಿಂದ ಜನ್ಮವೆತ್ತಿದನೋ ಎಂಬಂತೆ ಮಗನ ತೇಜವು ಕಣ್ತುಂಬುವದು.

ಅಣ್ಣ ಬಾ ಮುಕ್ಕಣ್ಣ ಬಾ ಬಸ।
ವಣ್ಣ ಬಾ ಹುಣ್ಣುವೆಯ ಸಸಿ ಬಾ।
ಕಣ್ಣ ಪುಣ್ಯದ ಮೂರ್ತಿ ಬಾರೈ ಚೆನ್ನಿಗನೆ ಬಾರಾ॥
ನನ್ನಿ ನಲ್ಮೆಯ ತವರೆ ಬಾರೈ।
ನನ್ನ ತೊಡೆ ನಲ್ಗದ್ದುಗೆಯನೇ।
ರಿನ್ನೆನುತ ನಿಜಮಾತೆ ಕರತಾಡನದೆ ಕರೆಯುತಿರೆ ॥೬॥

ಈ ರೀತಿಯಲ್ಲಿ ಮನದುಂಬಿ, ಕಣ್ತುಂಬಿ ಕರೆಯುವ ನುಡಿಗಳಿಗೆ ನಲ್ಗೆಜ್ಜೆ ಗಳ ರವದಿಂ ಕುಣಿಯುತ್ತ ಬರುವ ಮುದ್ದು ಮಗನನ್ನು ಮಾತೆಯು ಬರಸೆಳೆದು ಮುದ್ದಿಟ್ಟು ತೊಡೆಯ ಗದ್ದುಗೆಯನ್ನು ದಯಪಾಲಿಸುವಳು. ಹೀಗೆ ನಾಲ್ಕು ವರ್ಷಗಳು ಕಳೆಯುತ್ತವೆ. ಬಾಲಗುರುವಿನ ವಿದ್ಯಾಭ್ಯಾಸಕ್ಕೆ ನಾಡೋಜನನ್ನು ಗುರುತಿಸಿ ಏರ್ಪಡಿಸುತ್ತಾರೆ. ಕಾಲಾನುಕ್ರಮದಲ್ಲಿ, ಮಲತ್ರಯಗಳನ್ನು ಕಳೆದು ಶಿವಕಳೆಯನ್ನು ತುಂಬುವ ದೀಕ್ಷೆಯನ್ನು ಕೊಡುವರು. ಅಂದಿನಿಂದ ಗುರುಪುತ್ರನು ಲಿಂಗಾರ್ಚನೆಯ ಗೈಯುತ್ತ ಶಿವಯೋಗಶಕ್ತಿಯನ್ನು ಪಡೆಯ ತೊಡಗಿದನು.

ಬಾಲಯೋಗಿ ದಿನದ ಲಿಂಗಾರ್ಚನೆಯ ಭರದಲ್ಲಿ ಊಟ ಉಪಚಾರವನ್ನೇ ಮರೆಯ ತೊಡಗುವನು. ಹೀಗೆ ದಿನಗಳೆದಬಳಿಕ ಮೆಲ್ಲಮೆಲ್ಲನೆ ಬೇಡಿದುದ ಕೊಡಬಲ್ಲ ಶಕ್ತಿಯನ್ನು ಶಿವಮೂರ್ತಿಯು ಪಡೆದುಕೊಳ್ಳುತ್ತಾನೆ. ಇಂತಿರಲು ಒಂದು ದಿನ ಗೋಪಾಲನಾಕಾರ್ಯದಲ್ಲಿ ತೊಡಗಿದ್ದ ಶಿವಮೂರ್ತಿಯು, ಗೋವುಗಳಿಗೆ ಹುಲ್ಲು ತಿನಿಸಿ, ನೀರುಕುಡಿಸಿ, ನೆಳಲಿಗೆ ಮಲಗಿಸಿ, ಅಡವಿಯಲ್ಲಿಯೇ ಒಂದು ಪ್ರಶಾಂತ ಸ್ಥಳದಲ್ಲಿ ತನ್ನ ನಿತ್ಯದ ಲಿಂಗಾರ್ಚನೆಗೆ ಕುಳಿತನು. ದೇವೋನ್ಮಾದದ ನಿಬ್ಬೆರಗಿನಲ್ಲಿ ತನ್ನನ್ನು ತಾನೇ ಮರೆತು ರಾತ್ರಿಯೆಲ್ಲಾ ಯೋಗ ಮುದ್ರೆಯಲ್ಲಿಯೇ ಆಸಕ್ತನಾಗುವನು. ಇದನ್ನರಿತ ಜನನೀ-ಜನಕರು ಮತ್ತು ಭಕ್ತಾದಿಗಳು ಶಿವಮೂರ್ತಿಯನ್ನು ಮಠಕ್ಕೆ ಕರೆತಂದು ಇಂದಿನಿಂದ ಮಠದಲ್ಲಿಯೇ ಲಿಂಗಪೂಜೆಗೆ ಎಲ್ಲವನ್ನೂ ಅಣಿಗೊಳಿಸುವೆವೆಂದು ಭರವಸೆ ಕೊಡುತ್ತಾರೆ. ಇಂತು ಗೋಪಾಲನಾದ ಶಿವಮೂರ್ತಿಯು ನಿಜಲಿಂಗಪೂಜಾಲೋಲನಾಗಿ ಪರಿವರ್ತನೆ ಹೊಂದಿದನು.

## ನಾಲ್ಕನೆಯ ಸಂಧಿ

ಮೃಡನ ತೇಜದ ಶಿವಮೂರ್ತಿಯ ಇಷ್ಟಲಿಂಗ ಭಕ್ತಿಯು ಏರಿ ಕೊನರೊಡೆದು ಬೆಳೆದಂತೆಲ್ಲ, ಭಕ್ತರ ಮನದಭೀಷ್ಟವನ್ನು ಪೂರ್ಣಗೈಯುವ ಶಕ್ತಿ, ದೇವನ ಅನುಗ್ರಹದಿಂದ ಇಳಿದು ಬಂದಿತು. ಈ ವಾರ್ತೆಯನ್ನು ಕೇಳಿದ ಜಾಲಿಹಾಳ ಗ್ರಾಮದ ದೇಸಾಯಿ, ದರ್ಶನಾರ್ಥವಾಗಿ ಮಠಕ್ಕೆ ಆಗಮಿಸುವನು. ಅಲ್ಲಿ ಬಾಲಯೋಗಿಯ ವಿರತಿಯನ್ನು ಕಂಡು ಅಚ್ಚರಿಗೊಂಡನು. ಗುರುಪುಂಗವನನ್ನು ತನ್ನ ಗ್ರಾಮಕ್ಕೆ ಕರೆದೊಯ್ದು ಪಾದಪೂಜೆ ಮಾಡಬೇಕೆನ್ನುವ ತನ್ನ ಮನೀಷೆಯನ್ನು ದೇಸಾಯಿ ವ್ಯಕ್ತಪಡಿಸುವನು. ದೇಸಾಯಿಯ ಊರಲ್ಲಿ ಭಕ್ತರಿಗೆಲ್ಲ ಧರ್ಮಬೋಧೆಯನ್ನು ನೀಡುತ್ತಿರಲು, ಒಂದು ದಿನ ಶ್ರೀಗಿರಿಯ ಮಲ್ಲಿಕಾರ್ಜುನನು ತನ್ನಲ್ಲಿಗೆ ಬಾರೆಂದು ಆದರಿಸಿ ಕರೆದಂತೆ ದಿವ್ಯವಾಣಿ ಕೇಳಿಸುವದು. ಮಲ್ಲಯ್ಯನ ಬಳಿಗೆ ಹೋಗಲು ಮಾರ್ಗವರಿಯದ ಶಿವಮೂರ್ತಿಯು ಗೊಂದಲದಲ್ಲಿ ಬೀಳುವನು. ಅಷ್ಟರಲ್ಲಿ ಕಂಬಿಯಯ್ಯಗಳು ಮಲ್ಲಯ್ಯನ ಘೋಷಣೆ ಮಾಡುತ್ತ ಮಠದ ಸಮೀಪಕ್ಕೆ ಬರುವರು. ಇದು ಮಲ್ಲಯ್ಯನ ಮಾರ್ಗದರ್ಶನದ ಹಸ್ತವೆಂದು ತಿಳಿದು ಅವರೊಡನೆ ಯಾರೂ ಅರಿಯದಂತೆ ಶ್ರೀಗಿರಿಗೆ ಪಯಣ ಬೆಳೆಸುವನು. ಪುತ್ರನನ್ನು ಅರಸುತ್ತ ಹೊರಟ ತಂದೆ-ತಾಯಿಗಳು ಮಗನನ್ನು ಕಾಣದೆ ಊರಿಗೆ ಮರಳುವರು. ಮುಂದೆ, ಮಾರ್ಗದಲ್ಲಿ ಕಂಟಲಿ ಎತ್ತಿನೊಡನೆ ಶ್ರೀಗಿರಿಗೆ ಹೊರಟ ಪತಿ-ಪತ್ನಿಯರ ನೆರವಿನಿಂದ ಶಿವಮೂರ್ತಿಯು ದಾರಿ ತುಳಿಯ ತೊಡಗುವನು.

## ಐದನೆಯ ಸಂಧಿ

ಕಂಟಲಿ ಎತ್ತನ್ನು ಏರಿದ ಶಿವಮೂರ್ತಿಯು ಇಕ್ಕೆಲದಲ್ಲಿ ಆ ಪತಿ–ಪತ್ನಿಯರನ್ನೊಳಗೊಂಡು, ವೃಷಭವಾಹನನಾದ ಮೃಡನಂದದಿಂ ಮೆರೆಯುತ್ತ ಪಳ್ಳಿ-ಪುರಗಳ

ದಾಟಿ ಪಂಪಾ ಕ್ಷೇತ್ರಕ್ಕೆ ಆಗಮಿಸುವನು. ಹಂಪೆಯ ಪ್ರಕೃತಿ ದೇವಿಯ ವೈಸಿರಿಯನ್ನು ಮನದಣಿಯೆ ನಿಟ್ಟಿಸುತ್ತ ಕ್ಷೇತ್ರದ ಅಧಿನಾಯಕ ವೀರಭದ್ರ, ಬಡವಿಗಾಶ್ರಯವಿತ್ತ ಬಡವಿಲಿಂಗ, ಉಗ್ರರೂಪ ನರಸಿಂಹ, ಸಾಸಿವೆಯಕಾಳು ಗಣಪತಿಯ ದರ್ಶನ ಮಾಡಿಕೊಳ್ಳುವರು. ಅಲ್ಲಿಂದ ಹೇಮ ಕೂಟಕ್ಕೆ ಬಂದು ಸೋಮಧರನ ಪೂಜೆಯನ್ನು ಪೂರೈಸುವರು. ಸಮೀಪದಲ್ಲಿಯೇ ಆಕಾಶವನ್ನು ಚುಂಬಿಸಲು ಹೊರಟ ಉನ್ನತ ಗೋಪುರದಿಂ ಶೋಭಿಸುವ ಪಂಪಾಧವನಾಲಯಕ್ಕೆ ಬಂದು ಶ್ರೀ ಪಂಪಾಪತಿಯ ಹಾಗೂ ಪಂಪಾಂಬಿಕೆಯ ದರ್ಶನ ತಗೆದುಕೊಳ್ಳುವರು. ಹಂಪೆಯಾಳ್ದನ ಮಜ್ಜನಕ್ಕೆ ಇಂಪಿನುದಕವನಿತ್ತು ಜನರ ಬದುಕಿಗೆ ಆಶ್ರಯವನ್ನೀಯುತ್ತಲಿರುವ, ಪರಮಪಾವನೆ ತುಂಗಭದ್ರೆಯಲ್ಲಿ ಮಿಂದು, ಹೇಮ ಕೂಟದ ಪ್ರಶಾಂತ ಸ್ಥಳದಲ್ಲಿ ಲಿಂಗಸಮಾಧಿಯಲ್ಲಿ ಮಗ್ನನಾದ ಶ್ರೀ ಗುರುಮೂರ್ತಿಯು ಶ್ರೀ ವಿರೂಪಾಕ್ಷ ದೇವಾಲಯದ ಘಂಟಾರವಕ್ಕೆ ಎಚ್ಚತ್ತನು.

## ಆರನೆಯ ಸಂಧಿ

ಬೆಳಗಿನ ಜಾವದೊಳು ವಿಧಿ ಕರ್ಮಗಳನ್ನು ಮುಗಿಸಿಕೊಂಡು, ಹಂಪೆಯ ಕ್ಷೇತ್ರದಗಲದೊಳಗಿರುವ ದೇಗುಲ, ಪುಷ್ಕರಿಣಿ, ವಿಜಯನಗರದ ವೈಭವವನ್ನು ನೆನಪಿಗೆ ತರುವ ನೋಟಗಳನ್ನು ನಿರುಕಿಸಲು ಹೊರಟರು. ನೋಡಿದತ್ತ ಕಲ್ಲಿನಲ್ಲಿ ಕೆತ್ತಿದ ವಿಗ್ರಹಗಳು, ಗುಡಿ ಗೋಪುರಗಳು, ಕನ್ನಡ ಶಿಲ್ಪಕಲೆಯ ಜಾಣ್ಮೆಯನ್ನು ತೋರುತ್ತವೆ. ಅಲ್ಲಿಯ ಅವಶೇಷಗಳು, ಕಲ್ಲಿನ ತೇರು, ಕೋಟೆಗಳು ನೋಡಿದವರನ್ನು ಚಕಿತಗೊಳಿಸುತ್ತವೆ. ಮಾತಂಗಾಚಲವನ್ನೇರಿ ಮಾನವಮಿಯ ದಿಬ್ಬ, ಮಠಗಳ ಅವನತಿಯನ್ನು ಅವಲೋಕಿಸಿದಾಗ ಹಾಳಾದ ನಗರದ ದುಃಖ ಚಿತ್ರ ಕಣ್ಮುಂದೆ ಕಟ್ಟುವದು. ಅಲ್ಲಿರುವ ರಾಮುಲಕ್ಷ್ಮಣರ ಆಲಯ, ಪಂಪಾಸರೋವರವನ್ನು ಕಂಡು ರಾಮಾಯಣದ ಕತೆಯನ್ನು ಗುರುಮೂರ್ತಿ ಕಂಟಲಿ ಎತ್ತಿನಭಕ್ತ ದಂಪತಿಗಳಿಗೆ ಹೇಳುತ್ತಾನೆ. ಕರುನಾಡಿನವರ ಉದಾರತೆ, ಅತಿಥಿಸತ್ಕಾರವನ್ನು ಕಂಡುಂಡ ಶ್ರೀ ರಾಮಚಂದ್ರನು ಕನ್ನಡಿಗರನ್ನು ಮನೆಯವರಂತೆ ಭಾವಿಸಿದನು. ಮತ್ತು ಸೀತಾಮಾತೆಯು, ಅವರಲ್ಲಿ ಪುತ್ರ ಪ್ರೇಮವಿಟ್ಟಳೆಂದು ಉಸುರುತ್ತಾನೆ. ಮುಂದೆ ಬರುತ್ತಾ ಚಕ್ರ ತೀರ್ಥದಲ್ಲಿ ಸ್ನಾನ ಮಾಡುವೆನೆಂದು ಯೋಗಿ ಶಿವಮೂರ್ತಿ ಮಡುವಿನಲ್ಲಿ ಧುಮುಕುತ್ತಾನೆ. ಒಡನೆ ಇದ್ದ ದಂಪತಿಗಳು ಚಕ್ರತೀರ್ಥದಿಂದ ಬೇಗನೆ ಎದ್ದು ಬಾರದ ಶಿವಯೋಗಿಯನ್ನು ಕಂಡು ಆತನು ಗತಪ್ರಾಣನಾದನೆಂದು ತಿಳಿದು ತೀರ್ಥದಲ್ಲಿ ತಾವೇ ಹಾರಿಕೊಳ್ಳುವರು. ಆಗ ಬಾಲಯೋಗಿಯು ಬಾಲ ಸೂರ್ಯನ ತೆರದಿ ಆ ದಂಪತಿಗಳನ್ನು ಪಿಡಿದು ನೀರಿನಿಂದ ಮೇಲಕ್ಕೆ ಬರುತ್ತಾನೆ. ಆತನ ಲೀಲೆಯನ್ನು ನೋಡಿ ಬೆರಗಾದ ಭಕ್ತದಂಪತಿಗಳಿಗೆ ಇದೊಂದು ನೀರಿನ ಕಂಟಕವಿತ್ತು ನಿಮ್ಮ ಭಕ್ತಿಯ ಮಹಿಮೆಯಿಂದ ಪಾರಾದೆನೆಂದು ಪಂಪಾಪತಿಯ ದರ್ಶನ ಮುಗಿಸಿಕೊಂಡು ಶ್ರೀಶೈಲಯಾತ್ರೆಗೆ ಮುಂದುವರೆಯುವನು.

## ಏಳನೆಯ ಸಂಧಿ

ದಾರಿಯಲ್ಲಿ ಗಿರಿ-ವನಗಳ ಶೋಭೆಯನ್ನು ನೋಡಿ, ಅಲ್ಲಲ್ಲಿ ಲಿಂಗಾರ್ಚನೆಯ ನೆಸಗುತ್ತ, ಮಲ್ಲಯ್ಯನ ಗಿರಿಯನೇರುತ್ತಿದ್ದ ಯಾತ್ರಿಕತಿಂಥಿಣಿಯೊಂದಿಗೆ ಕೂಡು ವರು. ಆ ನಿಸರ್ಗ ದೇವತೆಯ ಆಡುಂಬೊಲದಲ್ಲಿ ಕಣ್ಣಿಗೆ ವನಲಕ್ಷ್ಮಿಯ ಸಿರಿಯು, ಕಿವಿಗೆ ಪಕ್ಷಿಗಳ ಇಂಚರವು, ಅಂಗಕ್ಕೆ ಬೀಸುವ ತಂಗಾಳಿ, ನಾಶಿಕಕ್ಕೆ ಹೂಗಳ ಕಂಪು ಏರಲು ಪ್ರಾರಂಭಿಸಿದಂತೆ ಶಿವಮೂರ್ತಿಯು ಶ್ರೀಗಿರಿಯನ್ನು ಏರುತ್ತಿದ್ದನು. ಗಿರಿಯ ಶಿಖರದ ಮೇಲೆ ಜಂಗಮತೇಜೋಮೂರ್ತಿಯೊಂದು ಬಾಲಯೋಗಿಯ ದೃಷ್ಟಿಗೆ ಬೀಳುವದು. ಇದು ಮಲ್ಲಯ್ಯನ ಲೀಲೆ ಎಂದರಿತು, ಗರ್ಭಗುಡಿಯನ್ನು ಪ್ರವೇಶಿಸಿ ದಿಟ್ಟತಣಿಯುವವರೆಗೆ ಮಲ್ಲಿಕಾರ್ಜುನನ ದರ್ಶನ ತೆಗೆದುಕೊಂಡು, ಗುಡಿಯ ಹೊರವಳಯಕ್ಕೆ ಬರುವರು. ಅಲ್ಲಿ ಅಸೂಟಿಯ ಯಾತ್ರಿಕರನ್ನು ಕಂಡ ಶಿವಮೂರ್ತಿ, ಇನ್ನು ಇವರು ನನ್ನನ್ನು ಕಂಡರೆ ಬಿಡರೆಂದು ತಿಳಿದು, ಅಲ್ಲಿಂದ ಗಿರಿಯ ವನದಲ್ಲಿ ಅದೃಶ್ಯನಾಗುತ್ತಾನೆ. ದೊರೆತ ಸಿರಿ ಬಯಲಾಯ್ತು, ಪುಣ್ಯದ ಪರುಷ ಬಯಲಾಯ್ತು. ಎಂದು ಅಸೂಟಿಯ ಯಾತ್ರಿಕರು ಮತ್ತು ಕಂಟಲೆ ಎತ್ತಿನ ದಂಪತಿಗಳು ಗಿಡ, ಬಳ್ಳಿ,ಕೊಳ್ಳ, ಗಿರಿ, ಗುಹೆಗಳಲ್ಲಿ ಹುಡುಕುತ್ತಾರೆ. ಆಗ ವೃದ್ಧ ಜಂಗಮವೇಷದಿಂದ ಮಲ್ಲಿಕಾರ್ಜುನನು ಅವರೆಡೆಗೆ ಬಂದು "ಇನ್ನು ಮುಂದೆ ನೀವು ಶಿವಮೂರ್ತಿಯನ್ನು ಹುಡುಕುವುದ ಬಿಟ್ಟು ಊರಿಗೆ ತೆರಳಿರಿ ಬಾಲಯೋಗಿಯು ನಿಜಲಿಂಗಪೂಜಾಬಲದಿಂದ ತನ್ನಿಷ್ಟ ಸಿದ್ಧಿಗಳ ಪಡೆದು, ನಿಮ್ಮ ಬಳಿಗೆ ಬರುವ" ನೆಂದು ಸಂತೈಸಿ ಸ್ವಲ್ಪ ದೂರದಲ್ಲಿಯೇ ಅದೃಶ್ಯನಾಗುವನು. ಈತನು ತಂದೆ ಮಲ್ಲಿಕಾರ್ಜುನನೆಂದು ಬಗೆದು ಯಾತ್ರಿಕರು ಊರಿಗೆ ಬಂದು,ನಡೆದ ಸಂಗತಿಯನ್ನು ಶರಭಾಂಬೆ-ಮಲ್ಲಿಕಾರ್ಜುನರಿಗೆ ತಿಳಿಸುತ್ತಾರೆ.

## ಎಂಟನೆಯ ಸಂಧಿ

ಶಿವಮೂರ್ತಿಯು ಆ ನಿರ್ಜನ ಗಿರಿಯ ಮಧ್ಯ, ಪೆರ್ಮರಗಳ ಗುಂಪಿನಲ್ಲಿ, ಪೂಗಳ ಕಂಪುಬೀರುವ ಸ್ಥಳವೊಂದನ್ನು ಗುರುತಿಸಿ, ಅಲ್ಲಿ ತನ್ನ ಇಷ್ಟಲಿಂಗಾರ್ಚನೆಗೆ ಪ್ರಾರಂಭಿಸಿದನು. ಕಾಲಹರ ಮಲ್ಲಿಕಾರ್ಜುನನನ್ನು ಒಲಿಸಲು ಇದೇ ಉತ್ತಮ ಸ್ಥಳವೆಂದು ಬಗೆದು ನಿತ್ಯವೂ ಪೂಜೆಯನೆಸಗುತ್ತ, ಫಲಗಳನ್ನು ಭುಂಜಿಸುತ್ತ, ಸಿಹಿ ನೀರು ಕುಡಿದು ತೃಪ್ತಿಯಿಂದ ಇರತೊಡಗಿದನು. ದಿನದ ಈ ಪರಿಪಾಠದಿಂದ ಶಿವ ಮೂರ್ತಿಗೆ ಗಿರಿಯ ಗಿಡ,ಬಳ್ಳಿ, ಪೊದೆ ಮೊದಲ್ಗೊಂಡು ಎಲ್ಲೆಲ್ಲಿಯೂ ಮಲ್ಲಿಕಾರ್ಜು ನನೇ ಕಾಣತೊಡಗಿದನು. 'ನಂಬಿ ಕರೆದಡೆ ಓ ಎನ್ನನೇ' ಶಿವನು, ಎಂಬ ವಚನ ದಲ್ಲಿ ದೃಢನಿಷ್ಠೆಯುಳ್ಳವನಾಗಿ ಮೈಮರೆದು ಒಂದು ದಿನ ಲಿಂಗಧ್ಯಾನದಲ್ಲಿ ಮಗ್ನ ನಾಗುವನು. ಲಿಂಗಮಧ್ಯದಲ್ಲಿ ಮಲ್ಲಿಕಾರ್ಜುನನು ಕಂಗೊಳಿಸುವದನ್ನು ಅನಿಮಿಷ ದೃಷ್ಟಿಯಿಂ ಅವಲೋಕಿಸುತ್ತ ಸಮಾಧಿಗತನಾದನು. ದಿವಸಗಳು ಉರುಳಿದವು,

ಹಕ್ಕಿ-ಪಕ್ಕಿಗಳು ದೇಹದ ಮೇಲೆರಗಿದರೂ, ಹಾವುಗಳು ಹರಿದಾಡಿದರೂ, ಶಿವಮೂರ್ತಿಗೆ ಸ್ಮೃತಿ ಇಲ್ಲದಾಗಿದೆ. ಆಗ ಶ್ರೀಮಲ್ಲಿಕಾರ್ಜುನನು ಕಾವಿ ಬಟ್ಟೆಯನ್ನುಟ್ಟು ಜಂಗಮ ರೂಪದಲ್ಲಿ ಅಲ್ಲಿಗೆ ದಯಮಾಡಿಸುವನು. ಶೂನ್ಯವೃತ್ತಿಯಲ್ಲಿದ್ದ ಬಾಲಯೋಗಿಯು ಎಚ್ಚತ್ತು ಚರಮೂರ್ತಿಯನ್ನು ನೋಡುವನು. ತಾಯಿಯ ಬಳಿಗೆ ಓಡಿ ಬರುವ ಕರುವಿನಂತೆ ಓಡಿ ಬಂದು, ಮಲ್ಲಯ್ಯನಡಿಗಳಿಗೆ ಮಸ್ತಕವನಿಟ್ಟು, ಇಂದು ನಿನ್ನ ದರ್ಶನ ಸೌಭಾಗ್ಯವನ್ನು ಎನಗಿತ್ತೆಯಾ ಎಂದು ಆನಂದದ ಪರಾಕಾಷ್ಠತೆಯನ್ನು ಹೊಂದುವನು. ಮಲ್ಲಿಕಾರ್ಜುನನಿಗೆ ಬಾಲಯೋಗಿಯ ಮೇಲಿನ ಮೋಹವು ಉಕ್ಕಿ ಬರಲು, ಆತನನ್ನು ಬಿಗಿದಪ್ಪಿ ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಶಿವಯೋಗ ಸಿದ್ಧಿಯನ್ನು ಹೊಂದಿ ನನ್ನನ್ನು ಒಲಿಸಿದೆಯಾ ಎಂದು ಹರ್ಷಗೊಳ್ಳುವನು. ಬಾಲಯೋಗಿ ಶಿವಮೂರ್ತಿ, ಜಗದೊಡೆಯ ಮಲ್ಲಯ್ಯನ ಪಾದಪೂಜೆ ಮಾಡಿ ಮಂಗಲಗೀತೆಗಳ ಪಾಡಲು, ನಿನ್ನ ಮನದಭೀಷ್ಟವನ್ನು ತಿಳಿಸೆಂದು ಮಲ್ಲಿಕಾರ್ಜುನದೇವನು ಕೇಳುವನು. ಭುವಿಯಲ್ಲಿ ಭಕ್ತರನ್ನು ಪೊರೆಯುವ ಕಾಯಕ ಮತ್ತು ಶಿವಾನುಭವಬೋಧೆಯ ನೀಡೆಂದು ಶಿವಮೂರ್ತಿಯು ಬೇಡಿಕೊಳ್ಳುತ್ತಾನೆ. ದೇವಾಲಯಕ್ಕೆ ಮಲ್ಲಿಕಾರ್ಜುನನ ಸಂಗಡ ಬರುತ್ತಿರುವ ಶಿಷ್ಯನಿಗೆ ದಾರಿಯಲ್ಲಿ ಕಲ್ಲುಗಳು ಚಿಂತಾಮಣಿಯಾಗಿ, ಮರ, ಬಳ್ಳಿಗಳು ದೇವತರುಗಳಾಗಿ, ಗೋವುಗಳು ಕಾಮಧೇನುಗಳಾಗಿ, ನೀರು ಸಿದ್ಧರಸವಾಗಿ ತೋರಿದವು. ಗುರು-ಶಿಷ್ಯರೀರ್ವರ ಆ ಪೂಜ್ಯ-ಪೂಜಕ ಲೀಲೆಯ ಸಮಾರಂಭವು ಶಿವಮೂರ್ತಿಗೆ ಶಿವರಾತ್ರಿಯಾಗಿ ಪರಿಣಮಿಸಿತು.

## ಒಂಭತ್ತನೆಯ ಸಂಧಿ

ಶ್ರೀಮಲ್ಲಿಕಾರ್ಜುನನು ಶಿಷ್ಯನಿಗೆ ಇಂತು ಬೋಧೆ ಮಾಡುವನು:— "ಮಂಗಲದಾಯಕ ಶಿವನ ಮುಖದಿಂದ ಹೊರಟ ಶಿವಾಗಮಗಳೇ ವೀರಶೈವಕ್ಕೆ ಆಧಾರವಾಗಿವೆ. ವೀರಶೈವ ದರ್ಶನದ ಸಾರಸರ್ವಸ್ವವೇ ಷಟ್‌ಸ್ಥಲ ತತ್ವದಲ್ಲಡಗಿದೆ. ಇನ್ನು ಆ ಷಟ್‌ಸ್ಥಲದಲ್ಲಿ ಲಿಂಗಾಂಗಯೋಗವು ತುಂಬಿರುವದು. ಯೋಗವನ್ನು ಅನೇಕರು ವಿವಿಧ ಬಗೆಯಾಗಿ ಬಣ್ಣಿಸಿದ್ದಾರೆ. ಜ್ಞಾನ, ಭಕ್ತಿ, ಕ್ರಿಯೆಯನ್ನು ಪಿಡಿದು ನನ್ನನ್ನು ಕಾಣಬಯಸುವ ಮಾರ್ಗಗಳೆಲ್ಲ ಜ್ಞಾನಯೋಗಾದಿ ಹೆಸರಿನಿಂದ ಪ್ರಸಿದ್ಧಿ ಪಡೆದಿರುವವು. ಇಂತು ಯೋಗದ ಅರ್ಥವಿದ್ದರೂ ಲಿಂಗಾಂಗಗಳ ಸಂಯೋಗವೇ ಶಿವಯೋಗವೆನಿಸುವದು. ಯೋಗಗಳು ಮಂತ್ರ,ಲಯ,ಹಠ,ರಾಜ, ಶಿವಯೋಗವೆಂದು ಐದೆರನಾಗಿರ್ಪವು. ವೀರಶೈವನು ಪಂಚಾರವೇ ಪ್ರಾಣ,ಅಷ್ಟಾವರಣವೇ ಅಂಗವೆಂದರಿದು ಷಟ್‌ಸ್ಥಲ ಮಾರ್ಗದಲ್ಲಿ ಶಿವಯೋಗ ಸಿದ್ಧಿಯನ್ನು ಪಡೆಯಬಹುದು. ಲಿಂಗವೇ ಶಿವನು; ದೀಕ್ಷೆಯ ಸಂಗದಿಂದ ಶುಚಿಯಾದ ಜೀವನೇ ಅಂಗ. ಇವರೀರ್ವರೊಳು ತೋರುವ ತಾದಾತ್ಮ್ಯ ಭಾವವೇ ಅಂಗ-ಲಿಂಗ ಸಾಮರಸ್ಯ ಅಥವಾ ಶಿವ-ಜೀವರೈಕ್ಯವೆಂದು ತಿಳಿ ಗುರುವಿನಿಂದ ಆಯತವಾಗಿ ಬಂದ ಲಿಂಗವು

ಇಷ್ಟ, ಪ್ರಾಣ, ಭಾವಲಿಂಗವೆಂದು ಕಟ್ಟೊಡೆಯುವುದು. ಅಂಗನು ಈ ರೀತಿಯಲ್ಲಿ ಸರ್ವಾಂಗಲಿಂಗಿ ಆದ ಬಳಿಕ ಲಿಂಗಭೋಗೋಪಭೋಗದೊಳು ಲೋಲಾಡುವನು. ಇದಕ್ಕೆ ಭಕ್ತಿಯೇ ಮುಖ್ಯ ಸಾಧನ, ಅಂಗನ ಶಕ್ತಿಯೇ ಭಕ್ತಿ, ಈ ಭಕ್ತಿಯು ಲಿಂಗಾಂಗ ಸ್ಥಲಗಳಲ್ಲಿ ವಿಕಾಸವಾಗುತ್ತ, ಕೊನೆಗೆ ಲಿಂಗವೇ ತಾನಾಗಿ ಮಾರ್ಪಡುವದು. ಅಂಗನಲ್ಲಿ ಈ ಭಕ್ತಿಯ ಶಕ್ತಿಯು ಏರಿದಂತೆ ಪರಶಿವನ ಅನುಗ್ರಹವು ದೇವಗಂಗೆಯಂದದಿ ಇಳಿದು ಬರುವದು. ಭಕ್ತಿ, ನಂಬುಗೆ, ಶ್ರದ್ಧೆಗಳು ಲಿಂಗದಲ್ಲಿ ಬಲಿದಂತೆ, ಅನುಭವದ ಆನಂದ ಉಕ್ಕಿ ಬರುವದು. ಅದರಲ್ಲಿ ಬೆರೆಯುವುದೇ ಸಮರಸವೆನಿಸುವದು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಷಟ್‌ಸ್ಥಲ ಹಂತದಲ್ಲಿ ಅಂಗನ ಭಕ್ತಿಯು ಕ್ರಮೇಣ ವಿಕಾಸ ಹೊಂದುತ್ತ ಕಡೆಯ ಸ್ಥಲದಲ್ಲಿ ಲಿಂಗದೊಡನೆ ಸಮರಸ ಹೊಂದುತ್ತಿದೆ. ಇದೇ ಲಿಂಗಾಂಗಯೋಗ; ಶಿವಯೋಗ ಸಿದ್ಧಿ"ಎಂದು ಬೋಧಿಸುತ್ತಾನೆ. ಈ ಮಾರ್ಗವನ್ನು ಭಕ್ತರಿಗೆ ಬೋಧಿಸುವ ಕಾಯಕದಲ್ಲಿರು, ನೀನು ನೆನೆದ ಕಾಲದಲ್ಲಿ ನಾನು ಮೈದೋರಿ ನೆರವೀಯುವೆನೆಂದು ಆಶೀರ್ವದಿಸುವನು. ಮಗುವೆ, ದಾಸೋಹಮೆಂಬುದು ಭಕ್ತಿಪಥದ ಒಂದು ಕವಲು. ಈ ಕಾಯಕವನ್ನು ನಿತ್ಯವೂ ನಿರಹಂಕಾರದಿಂದ ಎಸಗುತ್ತಲಿರು,ನಾನು ಮಾಡುವೆನೆಂಬುದನ್ನು ಅಳಿ, ನೀನು ಮಾಡುವದೆಲ್ಲವನ್ನೂ ನಿನ್ನೊಳಗಿದ್ದು ಮಾಡಿಸುತ್ತಿರುವೆನು. ಆದ್ದರಿಂದ ಈ ಕಾನನದಲ್ಲಿ ನೀನೊಬ್ಬನೇ ನಿನ್ನ ಆತ್ಮೋದ್ಧಾರ ಮಾಡಿಕೊಂಡರೆ ಸುಜ್ಞಾನಿಗಳು ನಿನ್ನನ್ನು ಸ್ವಾರ್ಥಿ ಎಂದು ಕರೆಯದಿರರೆ? ಅದುಕಾರಣ ಲೋಕ ಕಲ್ಯಾಣಕ್ಕಾಗಿ ಇಂದೇ ಹೊರಡೆಂದು,ಶಿವಮೂರ್ತಿಗೆ ಜಂಗಮಪದವಿಯನ್ನು ಕೊಡುತ್ತ, ಶಿರದಲ್ಲಿ ವರವಹಸ್ತವನಿಟ್ಟು ಆಶೀರ್ವದಿಸಿ ಮಲ್ಲಿಕಾರ್ಜುನನು ಲಿಂಗದಲ್ಲಡಗುತ್ತಾನೆ.

## ಹತ್ತನೆಯ ಸಂಧಿ

ಮಹೋನ್ನತ ರಜತಾದ್ರಿಯಿಂದ ಜಂಗಮರೂಪದಿಂ ಧರೆಗೆ ಬಂದ ಶಂಕರನಂತೆ, ಶಿವಮೂರ್ತಿಯು ಶ್ರೀಗಿರಿಯಿಂದ ಭಕ್ತೋದ್ಧಾರಕ್ಕಾಗಿ ಇಳಿದು ಬಂದನು. ಮಾರ್ಗದಲ್ಲಿ ಕಲಬುರ್ಗಿ, ಕಲ್ಯಾಣ, ಸೊನ್ನಲಾಪುರ ಕ್ಷೇತ್ರಗಳನ್ನು ಸಂದರ್ಶಿಸಿ ಅಸೂಟಿಗೆ ಆಗಮಿಸುವನು. ಪುತ್ರನನ್ನು ಕಾಣುತ್ತಲೆ ಶರಭಾಂಬೆ ಅವನನ್ನು ಪಾದದಿಂ ಮಸ್ತಕದವರೆಗೆ ದಿಟ್ಟಿಸಿ,ದೃಷ್ಟಿಯ ಪೂಗಳನ್ನು ಸೂಡಿ ಆಲಿಂಗಿಸುತ್ತಾಳೆ. ಕಳೆದು ಹೋದ ಮಠವೈಸಿರಿಯು ದೊರೆಯಿತೆಂದು,ಮಾತಾ-ಪಿತರ ಹರ್ಷಕ್ಕೆ ಮೇರೆ ಇಲ್ಲದಾಗುವದು. ಶಿವಮೂರ್ತಿಯು ಶ್ರೀಗಿರಿಯ ಯಾತ್ರೆಯನ್ನು ಬಣ್ಣಿಸುವನು. ಮಠದಲ್ಲಿ ಲಿಂಗಪೂಜೆಗೆ ಕುಳಿತ ಮಗನನ್ನು ನಿರೀಕ್ಷಿಸಿ, ಈತನು ಪ್ರತ್ಯಕ್ಷ ಪರಶಿವನ ಹುದು;ನನ್ನ ಪುತ್ರನೆಂಬ ಮೋಹವನ್ನು ಬಿಡುವದೇ ಉಚಿತವೆಂದು ಶರಭಾಂಬೆ ಮನ ವರಿತಳು. ಲಿಂಗಾರ್ಚನೆಯ ನಂತರ ಶರಭಾಂಬೆ ವಿವಿಧ ಭಕ್ಷ್ಯ, ಭೋಜ್ಯಗಳನ್ನು ಉಣಬಡಿಸುವಳು. ಯೋಗಿಯು ಅವೊಂದನ್ನೂ ಮುಟ್ಟದೇ,ಕೇವಲ ಫಲಗಳಿಂದ

ತಣಿಯುವೆನೆಂದು ಹೇಳಿದನು. ಸಮೀಚೀನವಾದ ಭೋಜನಮಾಡಿ ತನುವನ್ನು ಬೆಳಿಸಿದೊಡೇನು ಪ್ರಯೋಜನ? ಶಿವನಂ ನೆನೆವ ಮನವನ್ನು ಚಲಿಸದಂತೆ ಬೆಳೆಸುವದೇ ಹಿರಿಯ ಸಂಪತ್ತು. ಶ್ರೀಗಿರಿಯಲ್ಲಿ ನಾನು ಫಲಾಹಾರ ಮಾಡಿಯೇ ಕಾಲ ಕಳೆದಿರುವೆನು; ಇನ್ನು ಮುಂದಾದರೂ ಫಲಗಳನ್ನು ಸೇವಿಸಿಯೇ ಜೀವಿಸುವೆನೆಂದು ನುಡಿವನು. ಅಂದಿನಿಂದ **ಶಿವಮೂರ್ತಿಗೆ ಫಲಾಹಾರಶಿವಯೋಗಿ** ಎಂಬ ಹೆಸರೇ ಜನಜನಿತವಾಗುವದು. ಇಷ್ಟರಲ್ಲಿ ಶ್ರೀಗಿರಿಗೆ ಕರೆದೊಯ್ದ ಕಂಟಲೆ ಎತ್ತಿನ ದಂಪತಿಗಳು ಮಠಕ್ಕೆ ಆಗಮಿಸಿ, ಫಲಾಹಾರೇಶ್ವರನ ದರ್ಶನ ಹೊಂದುವರು ಕಾಲಾನುಕ್ರಮದಲ್ಲಿ ಫಲಾಹಾರೇಶ್ವರನು ಭಕ್ತೋದ್ಧಾರಕ್ಕಾಗಿ ಅಸೂಟಿಯಿಂದ ಹೊರಡುವ ತನ್ನ ಇಚ್ಛೆಯನ್ನು ಪ್ರಕಟಿಸುವನು.

## ಹನ್ನೊಂದನೆಯ ಸಂಧಿ

ಶ್ರೀಫಲಾಹಾರೇಶ್ವರನು ಭಕ್ತರ ಮನದಿಚ್ಛೆಯನ್ನು ಪೂರೈಸುವನು, ತಾಪತ್ರಯವ ಕಳೆಯುವನು ಎಂಬ ವಾರ್ತೆ ಸುತ್ತಮುತ್ತಲಿನ ನಾಡಿಗೆ ಹಬ್ಬಲು, ಅಸೂಟಿಯು ಕ್ಷೇತ್ರವಾಗಿ ಭಕ್ತವೃಂದದ ಬೀಡಾಯಿತು ಅಸೂಟಿಯನ್ನು ಬಿಟ್ಟು ಹೋಗಲು ಸಮ್ಮತಿಸದ ತಾಯ್ತಂದೆಗಳ ವಾಕ್ಯವನ್ನು ಕೇಳಿ, ಫಲಾಹಾರೇಶ್ವರನು ಮೌನಗೊಳ್ಳುವನು. ಇಂತಿರುವಾಗ, ಒಂದು ದಿನ ಮಲ್ಲಿಕಾರ್ಜುನನು ಶರಭಾಂಬೆಯ ಕನಸಿನಲ್ಲಿ ಬಂದು "ಪುತ್ರನನ್ನು, ಲೋಕೋದ್ಧಾರವನ್ನು ನೆನೆದು ಕಳುಹಿಸಿಕೊಡು" ಎಂದುಸಿರಿದಂತಾಗುವದು. ಇತ್ತ ಕೊಣ್ಣೂರಿನಲ್ಲಿ ತನ್ನ ಸತಿ ಪಾರ್ವತಿಯನೊಡಗೂಡಿ ನಿತ್ಯ ದಾಸೋಹಕಾಯಕ ನಡೆಸುತ್ತಿದ್ದ ಶಿವಪ್ಪಯ್ಯನು ದರ್ಶನಾರ್ಥವಾಗಿ ಬರುವನು. ಕೊಣ್ಣೂರ ಮಠಕ್ಕೆ ದಯಮಾಡಿಸಿ, ಸೇವೆಯ ಕೈಕೊಂಡು ನಾಮರಸ್ಯದ ದಿವ್ಯ ಬೋಧೆಯನ್ನು ಕೊಡೆಂದು ಫಲಾಹಾರೇಶ್ವರನಿಗೆ ಬಿನ್ನವಿಸುತ್ತಾನೆ. ನನ್ನ ಮನದ ಹಿರಿದಾಸೆ ಪೂರೈಸುವ ಸಮಯ ಬಂದಿತೆಂದು ಸ್ವಾಮಿ ಒಪ್ಪಿಗೆಯಿತ್ತನು. ಭಕ್ತರ ಕಲ್ಯಾಣಕ್ಕಾಗಿ ಹೊರಟುನಿಂತ ಯೋಗಿವರನನ್ನು ತಂದೆ-ತಾಯ್ಗಳು ಹರ್ಷದಿಂದ ಬೀಳ್ಕೊಡುವರು. ಶಿವಯೋಗಿಯು ಕೊಣ್ಣೂರಿಗೆ ಬಂದು, ಭಕ್ತರು ಚಿಂತಿಸಿದ ಫಲವೀಯುತ್ತ ಭಕ್ತ ಚಿಂತಾಮಣಿಯಾಗಿ ಕಾಲಕಳೆಯತೊಡಗಿದನು.

## ಹನ್ನೆರಡನೆಯ ಸಂಧಿ

ಕೊಣ್ಣೂರ ಮಠದಲ್ಲಿ ಬಾಲಯೋಗಿಯು ಜನನೀ-ಜನಕರ ಉಪಚಾರವನ್ನು ಮರೆಸುವಂತೆ ಆತಿಥ್ಯ ಹೊಂದುತ್ತಿರಲು, ಮಠದ ಶಿವಾಚಾರ್ಯನು ಶಾಶ್ವತದ ಶಿವಸುಖವ ನೀಡುವ ವಿಶ್ವಮಾನ್ಯ ವೀರಶೈವ ಧರ್ಮೋಪದೇಶ ಮಾಡಲು ಬಿನ್ನವಿಸುತ್ತಾನೆ. ವೀರಶೈವ ದರ್ಶನದ ಸಾರಸರ್ವಸ್ವವಾದ **ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲಗಳಲ್ಲಿ** ಮೊದಲನೆಯದಾಗಿ **ಪಂಚಾಚಾರವನ್ನು** ಬೋಧಿಸಲು ಗುರುಮೂರ್ತಿ ತೊಡಗುತ್ತಾನೆ. "ವೀರಶೈವವು ಶಿವಾಗಮಗಳ ಸರ್ವತತ್ವದ ಸಾರವಾಗಿಹುದು. ಇದಕ್ಕೆ ನೀತಿಯೇ ನೆಲೆಗಟ್ಟು, ನೈತಿಕ ತತ್ವ ವಿಚಾರಗಳನ್ನು ತಿಳಿ

ಸುವುದೇ **ಪಂಚಾಚಾರವು**. ದಯೆ, ಸಮತೆ ಮೊದಲಾದ ಸದ್ಗುಣಗಳೇ ನೀತಿಯು ತನುವು 'ದಯೆಯೇ ಧರ್ಮದ ಮೂಲ'ವೆಂದು ತಿಳಿದು, ಸುಖ-ದುಃಖಗಳನ್ನು ಸರ್ವರೊಡನೆ ಸಮನಾಗಿ ಪಡೆವುದೇ ಮಾನವ ಧರ್ಮ ನೀತಿ, ನೀತಿಯೇ ಸದಾ ಶಿವನು; ಆತನ ಪಂಚಮುಖಗಳೇ ಪಂಚಾಚಾರಗಳು. ವೀರಶೈವನು ಲಿಂಗಗುಣ ದಲ್ಲಿ ಸೇರುವದು **ಲಿಂಗಾಚಾರ**; ಧೀರರಿಗೊಪ್ಪುವ ನಡತೆಯೇ **ಸದಾಚಾರ**; ವಿಶ್ವ ದಲ್ಲೆಲ್ಲ ಶಿವನಾಕಾರಕಾಂಬುದೇ **ಶಿವಾಚಾರ**; ಶಿವಧರ್ಮಕ್ಕೆ ಹಾನಿಯೊದಗುವಾಗ ರಿಸುವದೇ **ಗಣಾಚಾರ**; ಮತ್ತು ಶಿವಭಕ್ತರ ಉಪಚಾರದಲ್ಲಿ ಕಿರಿತನವ ತೋರು ಅದನ್ನು ಎದುವದೇ **ಭೃತ್ಯಾಚಾರ**ವೆನಿಸುವದು. ಈ ಪಂಚಾಚಾರಗಳ ಒಂದೊಂದು ಆಚಾರವೂ ಷಟ್‌ಸ್ಥಲದ ಒಂದೊಂದು ಹಂತದಲ್ಲಿಯೂ ಆರುಮುಖವಾಗಿ ವ್ಯೆದೋ ರುವುದು. ಇಂತು ವ್ಯೆದೋರುವ ಪಂಚಾಚಾರಗಳನ್ನು ಭಕ್ತಿಯಿಂದ ಎಸಗಿ ಲಿಂಗಯೋಗ ಸಾಮ್ರಾಜ್ಯದಲ್ಲಿಪ್ಪುದೇ ವೀರಶೈವದ ಲಕ್ಷಣ"ವೆಂದು ಉಸುರುತ್ತಾನೆ.

## ಹದಿಮೂರನೆಯ ಸಂಧಿ

ಮೂರನೆಯ ದಿನ ಶಿವಮೂರ್ತಿಯು, ವೀರಶೈವದ ದೇಹದಂತಿರುವ **ಅಷ್ಟಾ ವರಣ** ವಿಚಾರವನ್ನು ಬೋಧಿಸುತ್ತಾನೆ. "ದೇಶದ ಧಾರ್ಮಿಕ ಮತಗಳಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕವೆಂದು ಇದ್ದೆರನಾಗಿವೆ. ಗುರು ಶಿಷ್ಯರಿಗೆ ಬೇಕಾ ಗಿರುವ ಗುಣಕರ್ಮವನ್ನು ವ್ಯಕ್ತಿಯಲ್ಲಿ ಅರಸುವದೇ ವೈಯಕ್ತಿಕ ಮತದ ಲಕ್ಷಣ ಸಾಮಾಜಿಕ ಮತದಲ್ಲಿ ಗುರು ಶಿಷ್ಯರನ್ನು ತಿಳಿಯುವ ರೀತಿಯೇ ಬೇರೆಯಾಗಿರು ವದು. ಇದರಲ್ಲಿ ದೀಕ್ಷಾಕಾಲಕ್ಕೆ ಆ ಗುಣಗಳೆಲ್ಲ ಶಿಷ್ಯನಾಗುವವನಿಗೆ ಬರುತ್ತವೆ. ಅವು ಮುಂದೆ ವಂಶಕ್ಕೂ ಉಂಟಾಗುವವು. ದೀಕ್ಷೆಗೆ ಧರ್ಮಾಧಿಕಾರಿಗಳು ಬೇಕು. ಇವನ್ನು ನಮ್ಮ ಗುರು, ಜಂಗಮರು ನಡೆಸುತ್ತ ಬಂದಿರುವರು. ವಂಶದಲ್ಲಿಹ ದೋಷದಿಂದ ಮತದಾಚಾರದ ಅವನತಿಯಾಗದಂತೆ ನೋಡಲು **ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಮಂತ್ರ**ವೆಂಬ ಅಷ್ಟಾವರಣಗಳ ರಕ್ಷಣೆಯಿದೆ.

ನಿತ್ಯದಲ್ಲಿ, ಪರಶಿವನ ವ್ಯೆಬೆಳಗೋ ಎಂಬಂತಿರುವ ಭಸ್ಮವನ್ನು ಧರಿಸಿ, ರುದ್ರಾಕ್ಷಿಗಳನ್ನು ತಳೆದು, ಶಿವನ ಮಂತ್ರವನ್ನು ಜಪಿಸುತ್ತ, ಗುರು, ಲಿಂಗ, ಜಂಗ ಮರ ಪೂಜೆಮಾಡುತ್ತ ಪಾದೋದಕ,ಪ್ರಸಾದಗಳನ್ನು ಪಡೆಯುವದೇ **ಅಷ್ಟಾವರಣ ವೆ**ನಿಸುವದು. ಗುರು, ಲಿಂಗ, ಜಂಗಮರೇ ಸರ್ವರಿಗೆ ಉಪಾಸ್ಯಗಳು; ಆ ಮೂರ್ತಿ ತ್ರಯದ ಪಾದೋದಕ, ಪ್ರಸಾದವೇ ಉಪಾಸನೆಯ ಫಲಗಳು; ಭಸ್ಮ, ರುದ್ರಾಕ್ಷಿ ಮಂತ್ರಗಳೇ ಈ ಉಪಾಸನೆಗೆ ಸಾಧನಗಳಾಗಿವೆ. ಮುಂದೆ ಈ ಅಷ್ಟಾವರಣಗಳೇ ಬಹಿರಂಗ, ಅಂತರಂಗವೆಂದು ಕವಲೊಡೆಯುವವು. ಪರಶಿವನೇ ಗುರು-ಲಿಂಗ ಜಂಗಮ ರೂಪನಾಗಿಹನು. ಗುರುವು ದೀಕ್ಷಾಮೂರ್ತಿ, ಲಿಂಗವು ಪೂಜಾಮೂರ್ತಿ,

ಜಂಗಮನು ಭೋಗಮೂರ್ತಿಯಾಗಿಹನು. ಷಟ್‌ಸ್ಥಲದ ಮಾರ್ಗದಲ್ಲಿ ಜಂಗಮನೇ ಲಿಂಗಮುಖನಾಗುವನು. ಆದ್ದರಿಂದ ಜಂಗಮನುಭೋಗೋಪಭೋಗವೇ ಲಿಂಗಭೋಗವಾಗುವದು. ಇಂತು ಮೂರ್ತಿತ್ರಯದಲ್ಲಿ ಜಂಗಮನಿಗೆ ಅಗ್ರಸ್ಥಾನವಿದೆ. ಗುರುವು ದೀಕ್ಷೆ, ಶಿಕ್ಷೆ, ಮೋಕ್ಷಗಳಿಗೆ ಕಾರಣನು. ಹರನು ಮುನಿದೊಡೆ ಗುರು ಕಾಯುವನು. ಕಾರಣ ಗುರುಭಕ್ತಿಯು ಶ್ರೇಷ್ಠವಾದುದು''ಎಂದು ಉಪದೇಶಿಸುತ್ತ ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ,ಪ್ರಸಾದ,ಮಂತ್ರಗಳ ಮಹಿಮೆಯ ಶಿವ ಕಥೆಗಳನ್ನು ವಿವರಿಸುತ್ತಾನೆ.

## ಹದಿನಾಲ್ಕನೆಯ ಸಂಧಿ

ವೀರಶೈವ ಧರ್ಮಾಂಬುಧಿಗೆ ಚಂದ್ರನಂತಿದ್ದ ಶಿವಯೋಗಿಯು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಷಟ್‌ಸ್ಥಲಗಳ ಸಾರಸರ್ವಸ್ವವನ್ನೇ ಇಂತೊರೆಯುತ್ತಾನೆ. "ಆಗಮಗಳಲ್ಲಿ ಷಟ್‌ಸ್ಥಲವನ್ನು ವಿವರಿಸುವಾಗ ಶಿವನಿಗೆ ಸ್ಥಲವೆಂಬ ಹೆಸರಿನಿಂದ ಸಂಬೋಧಿಸಿದ್ದಾರೆ. ಆ ಸ್ಥಲವಾಚಕ ಶಿವನೇ ಲಿಂಗ, ಅಂಗವೆಂದು ಎರಡು ರೂಪು ಧರಿಸುತ್ತಾನೆ. ಇದರಂತೆ ಶಿವನ ಚಿಚ್ಛಕ್ತಿಯು ಶಕ್ತಿ,ಭಕ್ತಿ ಎಂದು ಹೆಸರೊಡೆಯುವದು,ಲಿಂಗಾಂಗಗಳು ಪೂಜ್ಯ-ಪೂಜಕ ಭಾವದಲ್ಲಿ ಮೂರಾಗಿ, ಆರಾಗಿ ಕವಲೊಡೆಯುತ್ತವೆ. ಶಿವದೀಕ್ಷೆಯಿಂದ ಶುದ್ಧನಾದ ಜೀವನೇ ಅಂಗ,ಇಂತಪ್ಪ ಅಂಗನು, ಲಿಂಗವನ್ನು ಮೂರು ಶರೀರ ಮತ್ತು ಇಂದ್ರಿಯಗಳಲ್ಲಿಟ್ಟು ಪೂಜಿಸುತ್ತ ತಲ್ಲಿಂಗಮಯನಾದಾಗ, ಲಿಂಗವು ಮೂರಾಗಿ, ಆರಾಗಿ ಬೆಳಗುವದು. ಲಿಂಗವು ಇಷ್ಟ, ಪ್ರಾಣ, ಭಾವಲಿಂಗನಾಗಿ, ಅಂಗನು ತ್ಯಾಗಾಂಗ, ಭೋಗಾಂಗ, ಯೋಗಾಂಗವಾಗಿ ಮೂರೆಡೆಯಲ್ಲಿ ಲಿಂಗಗಳನ್ನು ಧರಿಸುತ್ತಾನೆ. ಈ ಮೊದಲಿನ ಮೂರು ಲಿಂಗಗಳು ಒಂದಕೆರಡಾಗಿ ಒಟ್ಟಿನಲ್ಲಿ ಆರಾಗುತ್ತವೆ. ಈ ಆರು ಲಿಂಗಗಳನ್ನು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಹೆಸರಿನಿಂದ,ಜ್ಞಾನಮಯವಾದ ಐದು ಇಂದ್ರಿಯಗಳಲ್ಲಿ ಒಂದೊಂದು ಮತ್ತು ಹೃದಯಾಂತರದೊಳೊಂದನ್ನು ಅಂಗನು ಧರಿಸುತ್ತಾನೆ. ಲಿಂಗಗತ ಶಕ್ತಿಯು ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳಾಗಿ ಅಂಗನ ಆರು ಸ್ಥಾನಗಳಲ್ಲಿ ನೆಲಿಸಿ, ಲಿಂಗಪೂಜಕನಾದ ಅಂಗನನ್ನು ಲಿಂಗಾಭಿಮುಖನನ್ನಾಗಿ ಮಾಡಿ, ಕೊನೆಗೆ ಲಿಂಗರೂಪಿಯನ್ನೇ ಮಾಡಲು ಕಾರಣವಾಗುವುದು. ಈ ಶಕ್ತಿಯೇ ಅಂಗಗತವಾಗಿ ಭಕ್ತಿಯೆನಿಸಿ ಸಮರಸ, ಆನಂದ, ಅನುಭವ,ಅವಧಾನ,ನಿಷ್ಠೆ, ಶ್ರದ್ಧೆ ಅಥವಾ ಸದ್ಭಕ್ತಿ ಎಂದು ಆರುದೆರನಾಗುವುದು. ಈ ಭಕ್ತಿಯೇ ಲಿಂಗಾಂಗಗಳ ಐಕ್ಯಕ್ಕೆ ಕಾರಣವಾಗುವುದು. ಈ ಷಟ್‌ಸ್ಥಲದಲ್ಲಿ ಮೊದಲು ಒಂದಾಗಿದ್ದ ಸ್ಥಲ, ಎರಡು, ಮೂರು, ಆರು, ಹದಿನೆಂಟು, ಮೂವತ್ತಾರಾಗಿ ನೂರೊಂದರಲ್ಲಿ ಕೊನೆಗೊಳ್ಳುವುದು. ಅನುಭವವು ಬೆಳೆದಂತೆ ಈ ಸ್ಥಲದ ಅರ್ಥ ಮತ್ತು ನಿಲುವು ಮನವರಿಕೆಯಾಗುವುದು.''

"ಇನ್ನು, ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಆತ್ಮವೆಂಬಿವು ಭಕ್ತಾದಿ ಸ್ಥಲಗಳ ಅಂಗಗಳಾಗಿವೆ. ನಾಶಿಕ, ನಾಲಿಗೆ, ನೇತ್ರ, ಚರ್ಮ, ಕಿವಿ, ಹೃದಯ ವೆಂಬಿವು ಷಟ್‌ಸ್ಥಲಗಳ ಮುಖಗಳಾಗಿವೆ ಚಿತ್ತ,ಬುದ್ಧಿ,ನಿರಹಂಕಾರ,ಸುಮನಸ್ಸು, ಸುಜ್ಞಾನ, ಸದ್ಭಾವಗಳು ಹಸ್ತಗಳಾಗಿವೆ. ಇವು ಅರ್ಪಣದ ಕೃತಿಗಳಿಗೆ ನೆರವಾ ಗುತ್ತವೆ. ಇಳೆಯ ಭೋಗ್ಯವಸ್ತುಗಳನ್ನು ಷಟ್‌ಸ್ಥಲವಿಶಾರದರು, ಗಂಧ, ರಸ, ರೂಪ,ಸಂಸ್ಪರ್ಶನ,ಶಬ್ದ,ತೃಪ್ತಿ ಎಂದು ಆರು ವಿಧವಾಗಿ ಹೇಳಿರುವರು. ಇಂತಿಪ್ಪ ಷಟ್‌ಸ್ಥಲದ ಆರುತನುವಿನಲ್ಲಿ ನಿಂದು, ಆರುವಿಧ ಭಕ್ತಿಯೊಳು, ಆರುಬಗೆಯ ಪದಾರ್ಥವನ್ನು,ಆರುಶಕ್ತಿಯ ಹೊಂದಿ, ಕಂಗೊಳಿಪ ಆರುಲಿಂಗಕ್ಕೆ,ಆರುಮುಖದಲ್ಲಿ ಆರುಹಸ್ತದಿಂದ ಕೊಟ್ಟುಕೊಳ್ಳುವುದು ಪ್ರಸಾದವದು ಇಂತು ಷಟ್‌ಸ್ಥಲದ ಮಾರ್ಗದಲ್ಲಿ ನಿತ್ಯವೂ ಲಿಂಗಭೋಗೋಪಭೋಗವನ್ನು ಅನುಭವಿಸಲು ಶಿವನೇ ತಾನಾಗುವನು.''

"ಗುರುವು ದೀಕ್ಷಾಕಾಲದಲ್ಲಿ ಉಪದೇಶಿಸಿದಂತೆ ಸತ್ಕಾಯಕದಿಂ ದುಡಿದುದನ್ನು ನನ್ನದೆಂಬ ಭಾವನೆ ಬಿಟ್ಟು, ಗುರು, ಲಿಂಗ, ಜಂಗಮ ಚರಣಕರ್ಪಿಸಿ, ಪ್ರಸಾದವ ಕೊಂಬುದೇ ಭಕ್ತಸ್ಥಲದ ಲಕ್ಷಣವು. ಗುರು,ಲಿಂಗ, ಜಂಗಮರು ಸಾಕ್ಷಾತ್ ಶಿವನ ಸ್ವರೂಪರೆಂದು ತಿಳಿದು, ಅವರಲ್ಲಿ ನಿಷ್ಠಾಭಕ್ತಿಯಿಂದಿದ್ದು ಆಚರಿಸುವುದೇ ಮಹೇಶ ಸ್ಥಲದ ಲಕ್ಷಣವು ತಾನು ಅನುಭವಿಸುವ ಪ್ರತಿಯೊಂದು ಪದಾರ್ಥವನ್ನು ಮೊದಲು ಲಿಂಗಕರ್ಪಿಸಿ, ಬಳಿಕ ಅದೆಲ್ಲವನ್ನೂ ಅವಧಾನ ಭಕ್ತಿಯಿಂದ ಲಿಂಗ ಪ್ರಸಾದ ರೂಪವಾಗಿ ಸ್ವಿಕರಿಸುವುದೇ ಪ್ರಸಾದಿ ಸ್ಥಲದ ಸ್ವರೂಪವು ಪ್ರಾಣೇಂದ್ರಿ ಯಾದಿಗಳಲ್ಲಿ ನಾನು, ನನ್ನದೆಂಬ ಮೋಹವನ್ನು ಬಿಟ್ಟು, ಎಲ್ಲವೂ ಕೇವಲ ಲಿಂಗ ರೂಪವಾದುದೆಂದು ತಿಳದು, ತದೇಕ ಚಿತ್ತನಾಗಿರುವುದೇ ಪ್ರಾಣಲಿಂಗಿಸ್ಥಲದ ಕುರುಹು. ಲಿಂಗ-ಪತಿ, ಅಂಗ-ಸತಿ ಎಂದು ತಿಳಿದು, ಐಹಿಕ ಸುಖವನ್ನು ತ್ಯಜಿಸಿ, ಆನಂದವನ್ನು ಅನುಭವಿಸುವುದೇ ಶರಣಸ್ಥಲದ ಲಕ್ಷಣ. ನಾನು ನೀನೆಂಬ ಭೇದ ವಳಿದು ಶಿವಾದ್ವೈತ ಭಾವದಿಂದ ಸಮರಸ ಭಕ್ತಿಯ ಆನಂದದೊಳು ಬೆರೆಯು ವುದೇ, ಕೊನೆಯದಾದ ಐಕ್ಯ ಸ್ಥಲದ ಹಿರಿಮೆಯಾಗಿದೆ.''

"ಇದೇ ಕ್ರಿಯೆಯ ವಿಶ್ರಾಂತಿ ಎನಿಸುವದು. ಇದುವೇ ಸಮ್ಯಜ್ಞಾನವೆನಿಸು ವದು ಅಂತೆಯೇ ಶಿವನು ನಾನೆಂಬ ಭಾವವು ಬೆಳಗುವುದು. ಆಗ ಅವನೇ ಶಿವಯೋಗಿಯಾಗುತ್ತಾನೆ. ಈ ಷಟ್‌ಸ್ಥಲಗಳಲ್ಲಿ ಮೊದಲಿನ ಮೂರುಸ್ಥಲಗಳು ಕ್ರಿಯಾತ್ಮಕವಾಗಿಯೂ, ಉಳಿದ ಮೂರು ಸ್ಥಲಗಳು ಜ್ಞಾನಾತ್ಮಕವಾಗಿದ್ದರೂ, ಕ್ರಿಯೆ ಜ್ಞಾನಗಳೆರಡೂ, ಆರೂ ಸ್ಥಲಗಳಲ್ಲಿ ಸಮಾವೇಶವಾಗುತ್ತವೆ. ಈ ಆರೂ ಸ್ಥಲಗಳಿಗೆ ಭಕ್ತಿಯೇ ಪ್ರಧಾನವಾಗಿದೆ. ಆತ್ಮದ ಶಕ್ತಿಯೇ ಭಕ್ತಿ; ಈ ಭಕ್ತಿಯ ಶಕ್ತಿಯಿಂದ ಮುಕ್ತಿ ಪದವಿ ದೊರಕುವುದೆಂದು'' ಆ ಪರಮ ಗುರುವರನು ಉಪ ದೇಶಿಸುತ್ತಾನೆ.

## ಹದಿನೈದನೆಯ ಸಂಧಿ

ವೀರಶೈವರ ಉಪಾಸ್ಯಮೂರ್ತಿಯ ಮೂರು ಕಣ್ಣೆನಿಸಿರ್ಪ ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲಗಳನ್ನು ಬೋಧಿಸಿ,ಕೊಣ್ಣೂರ ಭಕ್ತರ ನಡೆಯನ್ನು ತಿದ್ದಿ ಫಲಾಹಾರೇಶ್ವರನು ಲಿಂಗಾನಂದ ಸಾಮ್ರಾಜ್ಯದಲ್ಲಿ ಮೆರೆಯುತ್ತಲಿದ್ದನು. ಇಷ್ಟು ಹೊತ್ತಿಗೆ ಬೇಸಿಗೆ ಕಳೆದು ಮಳೆಗಾಲ ಪ್ರಾರಂಭವಾಯಿತು. ಪಾಪಿಗಳ ಪಾಪವನ್ನು ತೊಳೆಯುವ ಮಲಾಪಹಾರಿಣಿಯು ತುಂಬಿ ಹರಿಯತೊಡಗಿದಳು. ಇದನ್ನು ಕಂಡು ಸ್ವಾಮಿಯು, ಈ ನದೀ ತಟದಲ್ಲಿಯೇ ಒಂದು ಸ್ಥಳವನ್ನು ಹುಡುಕಿ, ಅಲ್ಲಿರುವೆನೆಂದು, ಕೂಡಿದ ಜನರಿಗೆ ತಿಳಿಸಿ, ಭಕ್ತನೋರ್ವನ ಕಂಬಳಿಯನ್ನು ನದಿಯಲ್ಲಿ ಎಸೆದು, ಅದರ ಮೇಲೆ ಕುಳಿತು ಸಾಗಿದನು. ಹೀಗೆ ಕೆಲ ಹೊತ್ತು ಕಳೆದ ಬಳಿಕ ಕೃಷಿಕನೋರ್ವನು ಕಣ್ಣಿಗೆ ಬೀಳುವನು. ಸ್ವಾಮಿಯು ಅವನನ್ನು ಕರೆದು, ನೀನು ಹೊಸಕೇರಿಯ ಕೃಷಿಕನಲ್ಲವೇ? ನಿನ್ನ ಹೆಸರು ಬಸವಪ್ಪ, ನಿನ್ನ ತೋಟದಲ್ಲಿ ಕೆಲ ದಿನವಿದ್ದು, ಮುಂದೆ ಸಾಗುವೆನೆಂದು ಉಸುರಲು,ಕೃಷಿಕನು ಅಚ್ಚರಿಗೊಂಡು, ಶಿವಯೋಗಿಯನ್ನು ತನ್ನ ತೋಟಕ್ಕೆ ಕರೆದೊಯ್ದು, ಆತನಿಗೆ ಎಲೆವನೆಯೊಂದನ್ನು ರಚಿಸುವನು. ಉನ್ನತ ಭಕ್ತಿ ಭಾವದಿಂದ ಆ ಒಕ್ಕಲಿಗನು ಮಾಡುವ ಸೇವೆಯನ್ನು ಸ್ವೀಕರಿಸುತ್ತ ಲಿಂಗಾನಂದವಲ್ಲಿರಲು, ಸುತ್ತಲಿನ ಜನರು ದರ್ಶನಾರ್ಥವಾಗಿ ಅಲ್ಲಿಗೆ ಬರತೊಡಗಿದರು. ಬಂದ ಭಕ್ತರಿಗೆ ಬಸವಪುರಾಣವನ್ನು ಬೋಧಿಸುತ್ತಲಿರಲು ಬಸವನ ತೋಟವು ಶಿವಭಕ್ತಿಯ ಕ್ಷೇತ್ರವಾಯಿತು. ಪುರಾಣ ಸಮಾಪ್ತಿಯ ಕಾಲಕ್ಕೆ ನಡೆಸಿದ ಗಣಾರಾಧನೆಯಲ್ಲಿ ಎಡೆಮಾಡಿದ ಪದಾರ್ಥಗಳೆಲ್ಲವು ಫಲವಾಗಿ ಪರಿಣಮಿಸಿದ ಲೀಲೆಯನ್ನು,ಕೂಡಿದ ಜನನೋಡಿ ಅಚ್ಚರಿಪಡುವರು. ಮೃಷ್ಟಾನ್ನ ಭೋಜನ ಮಾಡಲು ಆಗ್ರಹ ಪಡಿಸಿದ್ದನ್ನು ಕಂಡು, ಈ ಬಂಧನದಿ ನಾನಿಲ್ಲಿರಲಾರೆನೆಂದು ಯೋಗಿಯು ಹೊರಟು, ದಾರಿಯಲ್ಲಿ ಉರಿಯುವ ಸುಣ್ಣದ ಬಟ್ಟಿಯೊಂದರಲ್ಲಿ ನೇರಿದನು. ಒಕ್ಕಲಿಗ ಬಸವಪ್ಪ ಬೆನ್ನಟ್ಟಿ ಬಂದು,ಗುರುವನ್ನು ಕರೆದೊಯ್ಯುವಾಶೆಯಿಂದ, ಅದೇ ಬಟ್ಟಿಯಲ್ಲಿ ಹೊಕ್ಕನು. ಅಲ್ಲಿ ಗುರುವು ಸಿಗದಾದನು. ಕೆಲಹೊತ್ತಿನ ಮೇಲೆ, ಬಟ್ಟಿಯಿಂದ ಸುರಕ್ಷಿತವಾಗಿ ಹೊರಗೆ ಬಂದ ಬಸವಪ್ಪನನ್ನು ಜನರು ನೋಡಿ ಬೆರಗಾಗುವರು. ಅಲ್ಲಿಂದ ತೋಟಕ್ಕೆ ಬಂದು ಆ ಎಲೆವನೆಯಲ್ಲಿ ಗುರುಗಳ ಪಾದುಕೆಗಳನ್ನಿಟ್ಟು ಪೂಜಿಸುತ್ತಲಿದ್ದನು. ಬಟ್ಟಿಯೊಳು ಬಯಲಾದ ಯೋಗಿಯು ಕಾಕನೂರಿಗೆ ಬಂದು, ಕಾಕಾಂಬಿಕೆಯ ಗುಡಿಯಲ್ಲಿ ಮೈದೋರಿದನು. ತೋಟಿಗ ಬಸವಪ್ಪ, ಕಾಕನೂರಿಗೆ ಬಂದು, ಹಿಂದಿರುಗಿ ಬರಲು ಗುರುವಿಗೆ ಬಿನ್ನೈಸುವನು. ನೀನು ನೆನೆದ ಸಮಯದಲ್ಲಿ ನಿನ್ನ ಬಳಿಗೆ ಬರುವೆನೆಂದು, ಗುರುವು ಆತನಿಗೆ ಆಶ್ವಾಸನವಿತ್ತು ಕಳಿಸಿಕೊಡುವನು.

## ಹದಿನಾರನೆಯ ಸಂಧಿ

ಇಂತಿರುತ್ತಿರಲೊಂದು ದಿನ ಕಾಕಾಂಬಿಕೆಯು, ನೀನು ಶಿವನಪರಾವತಾರ, ನಾನು ನಿನ್ನಯ ಶಕ್ತಿರೂಪಿಣಿ, ಇಲ್ಲಿಯ ಭಕ್ತರನು ಪೊರೆವ ಕಾರ್ಯವನ್ನು ನನಗೆ

ಬಿಟ್ಟು,ಮುಂದಕ್ಕೆ ತೆರಳಬೇಕೆಂದು ಕೇಳುವಳು. ಅದಕ್ಕೊಪ್ಪಿ ಇನ್ನು ಈ ಊರಲ್ಲಿರೆನೆಂದು ಭಕ್ತರ ಮಧ್ಯದಿಂ ಫಲಾಹಾರೇಶನು ಮಾಯವಾಗುವನು. ಸ್ವಾಮಿಯು ಅದೃಶ್ಯನಾದ ಸ್ಥಳದಲ್ಲಿಯೇ, ಆ ಊರವರು ಕಟ್ಟೆಯನ್ನು ಕಟ್ಟಿಸಿ,ಅಲ್ಲಿ ಗುರುವಿನ ಕಲ್ಲು ಪಾದಗಳನ್ನು ಪ್ರತಿಷ್ಠಿಸಿ, ಇಂದಿಗೂ ಅವನ್ನು ಪೂಜೆ ಮಾಡುತ್ತಲಿದ್ದಾರೆ ಇತ್ತ ಸ್ವಾಮಿಯು ಮಲಾಪಹಾರಿಣೀ ನದಿಯ ತೀರದಲ್ಲಿ, ಶಿವಾರ್ಚನೆಗೆ ಉತ್ತಮವಾದೊಂದು ಸ್ಥಳವನ್ನು ಅರಳಿಕಟ್ಟೆಯ ಗ್ರಾಮದ ಬಳಿ ನಿರುಕಿಸಿ, ಅಲ್ಲಿರಲು ನಿರ್ಧರಿಸುತ್ತಾನೆ. ಅಲ್ಲಿ ಎಲೆವನೆಯೊಂದನ್ನು ಕಟ್ಟಿ, ಗುಪ್ತ ಸ್ಥಿತಿಯಲ್ಲಿ ಲಿಂಗಾರ್ಚನೆ ಮಾಡುತ್ತ, ದಿನಗಳೆಚ್ಚರವಿಲ್ಲದೇ ಲಿಂಗದಲ್ಲಿ ಧ್ಯಾನಾಸಕ್ತನಾಗುವನು ಸಮಾಧಿಸ್ಥನಾದ ಸ್ವಾಮಿಯ ಸುತ್ತ ಹುತ್ತುಗಳು ಬೆಳೆಯತೊಡಗಿದವು ಆ ಪವಿತ್ರ ಸ್ಥಾನದಲ್ಲಿ ಸಂಚರಿಸುವ ಕಾಡುಮೃಗಗಳು ತಮ್ಮ ವೈರತ್ವವನ್ನು ಮರೆತವು ಹಾವಿನ ಹೆಡೆಯಲ್ಲಿ ಮರಿಗಿಳಿಯು ಕುಳಿತಿತು; ಬಳಿಯಲ್ಲಿಯೇ ನವಿಲುಗಳು ಗಂಗೆದರಿ ನರ್ತಿಸತೊಡಗಿದವು; ಚಿಗರಿಗಳು ತೋಳನ ಭೀತಿಯನ್ನು ತೊರೆದು, ಕೆಳೆತನದಿಂದ ಕೂಡಿದವು; ಇಂತಪ್ಪ ಯೋಗಿಯ ತಪಸ್ಸು ಸಿದ್ಧಿ ಹೊಂದಿತು. ಆತನ ಚರಣ, ಕರ, ದೃಷ್ಟಿ, ಮನ, ವರವಚನವೆಂಬಿವು, ಲೋಕರಕ್ಷಣೆಗೆ ನೆರವನೀಯಲು ಪರುಷವಾದವು. ಮಾತು, ಮನಗಳಿಗೆ ನಿಲುಕದ ಚಿಜ್ಜ್ಯೋತಿಯು ಶಿವಯೋಗಿಯ ವದನದಲ್ಲಿ ಲಾಸ್ಯವಾಡತೊಡಗಿತು ಇಷ್ಟರಲ್ಲಿ ಕಾರ್ಗಾಲವು ಕಳೆದು, ಶರದೃತು ಆಗಮಿಸಿತು. ಸಮಾಧಿಯಿಂದ ಶಿವಯೋಗಿಯು ಎಚ್ಚತ್ತನು, ಬೆಳದಿಂಗಳ ಬೆಳಕಿನಲ್ಲಿ ಕಾನನದ ಸೌಂದರ್ಯವನ್ನು ಕಂಡು ಮಹಾನಂದ ಹೊಂದುವನು. ಈ ಪ್ರಶಾಂತ, ಮೋಹಕ ತಾಣದಲ್ಲಿ, ತನ್ನ ಗುರು ಮಲ್ಲಯ್ಯನ ಪಾದಪೂಜೆ ಮಾಡಬೇಕೆಂದು ಬಯಸಿ, ಆತನನ್ನು ನೆನೆಯುವನು. ಜಂಗಮ ವೇಷದಲ್ಲಿ ಮೈದೋರ್ದ ಮಲ್ಲಿಕಾರ್ಜುನನ ಪೂಜೆಗೈದು, ಹರನಬೇಕೆಂದು ಬೇಡಿಕೊಳ್ಳುವನು. ಭಕ್ತರ ಪೊರೆವಲ್ಲಿ, ನಿನಗೆ ಚರವರನ ಪರಶಕ್ತಿ ಬರುವದೆಂದು, ಮಲ್ಲಯ್ಯನು ವರದ ಹಸ್ತವನಿಟ್ಟು ಆಶೀರ್ವದಿಸುತ್ತಾನೆ.

## ಹದಿನೇಳನೆಯ ಸಂಧಿ

ಇತ್ತ, ಕಲೆ, ವಿದ್ಯೆ, ಕೃಷಿ, ಸಿರಿ, ಶಾಂತಿಗಳಿಗೆ ತವರೆನಿಸಿ, ನಾಡದೇವಿಯ ತಲೆಮಣಿಯಂತೆ ಸಿಂಗರವೆತ್ತು, ನರಗುಂದ ನಾಡು ಶೋಭಿಸುತ್ತಿದೆ ಅಲ್ಲಿಯ ನೃಪರ ವಂಶದ ಸೂರ್ಯನಂತೆ ದಾದಾಜಿ (ಅಪ್ಪಾಸಾಹೇಬ) ದೊರೆಯು ಅನುಗುಣಸತಿಯಿಂದೊಡಗೂಡಿ ಪ್ರಜಾಪಾಲನೆಯಲ್ಲಿ ತೊಡಗಿದ್ದಾನೆ. ಇಂತಿರಲು ಪೂರ್ವಜನ್ಮದ ಕರ್ಮದಿಂದ, ದೊರೆಗೆ ಮಹಾರೋಗ ಬಂದು ತಗಲುವದು ಪರಿಹಾರಕ್ಕಾಗಿ ನೀರಿನಂತೆ ಧನವನ್ನು ಸೂರೆಮಾಡಿದರೂ, ನೀರಿನಲ್ಲಿ ಹೋಮ ಮಾಡಿದಂತಾಗಿ, ರೋಗವು ದಿನ ದಿನಕ್ಕೆ ಪ್ರಬಲವಾಗುತ್ತ ಹೋಯಿತು. ಹಿಪ್ಪರಗಿ ಮಲ್ಲಯ್ಯನ ಭಕ್ತಿಮುಪ್ಪುರಿಯಲ್ಲಿದ್ದ, ಮುರಗೋಡಿನ ಚಿದಂಬರ ದೀಕ್ಷಿತನು

ರೋಗಕ್ಕೆ ಮದ್ದನೀಯುವನೆಂದು ತಿಳಿದು ದೊರೆ ಅಲ್ಲಿಗೆ ಬರುವನು. ದೊರೆಯು ಮೊರೆಯನ್ನು ಆಲಿಸಿ ದೀಕ್ಷಿತನು ಅರಳಿಕಟ್ಟೆಯ ಆಶ್ರಮದಲ್ಲಿರುವ ಫಲಾಹಾರೇಶನಿಂದ ನಿನ್ನ ರೋಗ ಪರಿಹಾರವಾಗುವದು, ಅಲ್ಲಿಗೆ ಹೋಗೆಂದು ಸೂಚಿಸುತ್ತಾನೆ. ಅರಸು ಫಲಾಹಾರೇಶ್ವರನ ಆಶ್ರಮಕ್ಕೆ ಬಂದು ದರ್ಶನ ಪಡೆಯುತ್ತಾನೆ. ತನ್ನ ರೋಗಕ್ಕೆ ಮದ್ದು ನೀಡಲು ಬಿನ್ನವಿಸುತ್ತಾನೆ. ನಾಡನಾಳುವ ನೃಪನು ಕಾಡಾಡಿ ಜೋಗಿಯ ಆಶ್ರಮಕ್ಕೆ ಬರುವದೆಂದರೆ ನಿನ್ನ ಪ್ರಜಾನುರಾಗದ ನಿದರ್ಶನವಿದೆಂದು ಯೋಗಿಯು ಆತನಿಗೆ ಉಚಿತ ಸತ್ಕಾರ ಮಾಡಿಸುತ್ತಾನೆ. ಮಹಿಮಾಶಾಲಿಗಳಾದ ದೀಕ್ಷಿತರು ನಿನ್ನ ರೋಗಕ್ಕೆ ತಾವೇ ಮದ್ದು ಕೊಡದೆ ನನ್ನ ಬಳಿಗೆ ಕಳಿಸಿದರೇ ಎಂದು ಮಂತ್ರೋದಕ ತುಂಬಿದ ಕಲಶವನ್ನು ರಾಜನಿಗಿತ್ತು, ಫಾಲಾಕ್ಷನನ್ನು ನೆನೆದು ಇದನ್ನು ಸೇವಿಸುತ್ತಿರೆಂದು ಆಶೀರ್ವದಿಸುವನು.

## ಹದಿನೆಂಟನೆಯ ಸಂಧಿ

ಶಿವಯೋಗಿಯಿಂದ ಮಂತ್ರೋದಕವನ್ನು ಪಡೆದು ಬಂದ ರಾಜನಿಗೆ, ಜಾತಿಯಿಂದ ನೀನು ಬ್ರಾಹ್ಮಣನಿದ್ದು ಓರ್ವ ಜೋಗಿಯ ಕರದ ಜಲವ ಕುಡಿಯುವುದು ಧರ್ಮವಿರುದ್ಧವೆನಿಸುವದೆಂದೂ, ಜೋಗಿಯಲ್ಲಿ ನಿನಗೆ ಅಷ್ಟೊಂದು ನಂಬುಗೆ ಇದ್ದಲ್ಲಿ ಆ ಜಲವನ್ನು ಮೈಗೆ ಸವರಿಕೊಳ್ಳಬಹುದೆಂದೂ ಕುಲಪುರೋಹಿತನು, ಅಭಿಪ್ರಾಯ ಪಡುವನು. ಅಂತೆಯೇ ರಾಜನು ತೀರ್ಥವನ್ನು ಮೈಗೆ ಸವರಿಕೊಳ್ಳುವನು. ಕೂಡಲೇ ಮೈಯೆಲ್ಲ ಉರಿಯತೊಡಗುವದು, ಶೈತ್ಯೋಪಚಾರದ ಯಾವ ವಿಧಾನವೂ ರಾಜನಿಗೆ ಸಮಾಧಾನ ಕೊಡದೇ ತಂಪಿನಿಂ ಬದಲು ಹೆಚ್ಚು ಉರಿ ಎನಿಸುತ್ತಿದೆ. ಆಗ ರಾಜನು ರಥವನ್ನೇರಿ ಚಿದಂಬರ ದೀಕ್ಷಿತರ ಬಳಿ ಬಂದು ನಡೆದುದನ್ನು ಉಸುರುವನು. ಅತಿವರ್ಣಾಶ್ರಮಿಯಾದ ಆ ಯೋಗಿಯು ಮಂತ್ರೋದಕವ ಕೊಟ್ಟುದೇ ನಿನ್ನ ಭಾಗ್ಯ. ಇಂತಿರುವಾಗ ಅದನ್ನು ದುರುಪಯೋಗ ಪಡಿಸಿ ಮದು ಮಹಾ ಪಾಪ. ಹೋಗು ಬೇಗನೇ ಆ ತೀರ್ಥವನ್ನು ಭಕ್ತಿಭಾವದಿಂದ ಸೇವಿಸು. ನಿನ್ನ ರೋಗ ಪರಿಹಾರವಾಗುವುದೆಂದು ಉಪದೇಶಿಸುವನು. ಮಂತ್ರೋದಕವನ್ನು ಭಕ್ತಿಯಿಂದ ಸೇವಿಸಿದ ರಾಜನ ಮೈಯೊಳಗಿನ ಉರಿಯು ನಂದಿತು. ದೇಹದ ಕಾಂತಿ ಹೆಚ್ಚಿತು, ರೋಗವು ದಿನ ದಿನಕ್ಕೆ ಬಯಲಾಗುತ್ತ ಹೋಯಿತು. ಆನಂತರ ದೊರೆಯು ಶಿವಯೋಗಿಯ ದರ್ಶನಕ್ಕೆ ಅರಳಿಕಟ್ಟೆಗೆ ಬಂದು ಅವರ ಪಾದಧೂಳಿಯನ್ನು ಮಸ್ತಕದಲ್ಲಿ ಹೊತ್ತು ಅವರನ್ನು ಕೊಂಡಾಡುವನು. ಮಹಾ ಮಹಿಮರೆ! ತಮಗಾಗಿ ಒಂದು ಮಠವನ್ನು ಕಟ್ಟಿಸುವೆ, ಇಲ್ಲಿಯೇ ನನ್ನ ರಾಜ್ಯದಲ್ಲಿದ್ದು ಭಕ್ತರನ್ನು ಪೊರೆಯಬೇಕಾಗಿ ನೃಪನು ಬಿನ್ನವಿಸುತ್ತಾನೆ. ಕೆಲದಿನಗಳಲ್ಲಿಯೇ ನೂತನರಚಿತ ಮಠದ ಮಂಗಲೋತ್ಸವವೂ ನಡೆಯುವದು. ಆ ಕಾಲಕ್ಕೆ ರಾಜನು ಭೂಮಿದಾನ ಶಾಸನವನ್ನು ಗುರುವರನ ಚರಣಕ್ಕರ್ಪಿಸುವನು. ಆಗ ಶ್ರೀಫಲಾಶನನು ರಾಜನೀತಿಯನ್ನುಪದೇಶಿಸಿ ದೊರೆಯನ್ನು ಹರಸುತ್ತಾನೆ.

## ಹತ್ತೊಂಭತ್ತನೆಯ ಸಂಧಿ

ಅರಳಿಕಟ್ಟಿ ಮಠವು ಶ್ರೀಫಲಾಶನನ ಮಹಾಮಹಿಮೆಗಳಿಂದ ಭಕ್ತರಯಾತ್ರಾ ಸ್ಥಲವಾಗಿ ಪರಿಣಮಿಸಿತು. ಒಂದು ದಿನ ಓರ್ವ ಮುಗ್ಧನು ತನ್ನ ಕರು ಮೊಲೆಯುಣ್ಣದೇ ಕೊರಗ ತೊಡಗಿದೆ, ಅದುಕಾರಣ ಹಾಲು ಕುಡಿಯುವ ಮದ್ದು ಕೊಡು ಎಂದು ಯೋಗಿಗೆ ಬೆಸಗೊಳ್ಳುತ್ತಾನೆ. ಆ ಕರು ದೊಡ್ಡದಾದ ಮೇಲೆ ಅದನ್ನು ಯೋಗಿಗೆ ಸಲ್ಲಿಸುವ ತನ್ನ ಮನೀಷೆಯನ್ನು ವ್ಯಕ್ತ ಪಡಿಸುತ್ತಾನೆ. ಅಂತಾಗಲೆಂದು ಗುರುವು ಆಶೀರ್ವದಿಸುತ್ತಾನೆ. ಅಂದಿನಿಂದ ಕರುವು ಹಾಲು ಕುಡಿದು ಬೆಳೆಯ ತೊಡುಗುತ್ತದೆ. ಇತ್ತ, ಸಾಲಾಪುರದ ಭಕ್ತರು ಬಂದು ಊರಿನಲ್ಲಿ ಸಿಹಿ ನೀರಿನ ಕೊರತೆ ಹೆಚ್ಚಾಗಿದೆ, ತಾವು ದಯಮಾಡಿಸಿ ಬಾವಿ ತೋಡುವ ಸ್ಥಳವನ್ನು ತೋರಿ ಕೃಪೆ ಮಾಡಿರೆಂದು ಬೇಡುತ್ತಾರೆ. ಶಿವಯೋಗಿಯು ಸಾಲಾಪುರಕ್ಕೆ ಬಂದು, ಸಮೀಪದಲ್ಲಿರುವ ಹಳ್ಳದ ತಡಿಯಲ್ಲಿ ಗಣಪರ್ವ ಮಾಡಿಸಲು ಊರವರಿಗೆ ಹೇಳುತ್ತಾನೆ. ಮನದ ಮುಡಿಯಿಂ ಭಕ್ತರೆಲ್ಲರೂ ಗಣಾರಾಧನೆ ನಡೆಸಲು ಸಿದ್ಧರಾಗಿ, ಹಳ್ಳದ ಬಳಿ ಹೆಡಗಿಗಳ ಹೊತ್ತು ತರುತ್ತಾರೆ. ಶ್ರೀಗುರುವು ಪಾದಚಾರಿಯಾಗಿ ಅಲ್ಲಿಗೆ ಆಗಮಿಸಿ ಹಳ್ಳದೊಂದೆಡೆ ಎರಡು ತೆಂಗಿನ ಕಾಯಿಗಳನ್ನು ಒಡಿಸಿ,—ಮುಂದೆ ಅಡಿಯಿಡಲು— ಗಂಗೆಯು ಹಳ್ಳದಿಂದುದ್ಭವಿಸಿ ಮಂದಗಾಮಿನಿಯಾಗಿ ಹರಿಯ ತೊಡಗಿದಳು ನೆರೆದ ಭಕ್ತಾವಳಿ ಜಯ ಜಯಕಾರದಿಂದ ಗಣಾರಾಧನೆ ಮುಗಿಸುತ್ತಾರೆ. ಇದಾದನಂತರ ಭೋಗದಲ್ಲಿ ಪಿರತಿ ತಳೆದು ಬಂದವರಿಗ ಯೋಗಿಯು ತ್ಯಾಗ, ಭೋಗ, ಸಮನ್ವಯ ತತ್ವದುಪದೇಶಗೈದು ಅವರ ಮನದ ಸಂಶಯವನ್ನು ದೂರಮಾಡುತ್ತಾನೆ.

## ಇಪ್ಪತ್ತನೆಯ ಸಂಧಿ

ಶ್ರೀಶಿವಯೋಗಿಯ ಕೃಪೆಯಿಂದ ಬೆಳೆದು ದೊಡ್ಡದಾದ ಬಿಳಿಯ ಬಸವನನ್ನು ಆ ಮುಗ್ಧನು ಯೋಗಿಗೆ ಒಪ್ಪಿಸುವನು ಭಕ್ತರ ಪೊರೆವ ಕಾಯಕವನ್ನು ಮುಂದುವರಿಸಲೋಸುಗ ಬಸವನೊಂದಿಗೆ ಸ್ವಾಮಿ ಪ್ರಯಾಣ ಬೆಳೆಸುತ್ತಾನೆ. ಕೆಲ ದೂರ ಹೋದ ಬಳಿಕ ಚಂದ್ರಗಿರಿಯ ಅಡವಿಯೊಳು ಬಸವನು ನಿಲ್ಲುವನು. ಮನ ಮೋಹಕ ನಿಸರ್ಗಸೌಂದರ್ಯ, ಸಮೀಪದಲ್ಲಿಯೇ ಪುಷ್ಕರಣಿ, ಪೂಪೊದರು, ಎಲೆವನೆಗಳು ಲಿಂಗಾರ್ಚನೆಗೆ ಆಹ್ವಾನವೀಯುತ್ತಲಿವೆ. ಇದೇ ಉತ್ತಮ ಸ್ಥಳವೆಂದು ಗುರುವು ನೆನೆದು ಲಿಂಗ ಧ್ಯಾನಾಸಕ್ತನಾಗುತ್ತಾನೆ. ದಿನಗಳೆದ ಬಳಿಕ ಅರಳಿಕಟ್ಟಿಯ ಯೋಗಿ ಇಲ್ಲಿ ಬಂದು ನೆಲಸಿಹನೆಂಬ ವಾರ್ತೆ ಜನರಿಗೆ ತಿಳಿಯುತ್ತದೆ ಉದುಪುಡಿಯ ಅಹಲ್ಯಾರಾಣಿಯು ಯೋಗಿಯ ದರ್ಶನ ಹೊಂದಿ ಕೆಲ ಕಾಲ ಆತನ ಕಂಟಲಿ ಬಸವನ ಸೇವೆಯಲ್ಲಿ ತೊಡಗುತ್ತಾಳೆ. ಆ ಬಳಿಕ, ಸಿಂಧೆ ಹೋಳಕರ ವಂಶದ ಲಕ್ಷ್ಮಣರಾವ ದೊರೆಯು ತೊರಗಲ್ಲು ನಾಡಿನಿಂದ ದರ್ಶನಾರ್ಥಿ

ಯಾಗಿ ಬರುತ್ತಾನೆ. ಶಿವಯೋಗಿಯನ್ನು ರಥದಲ್ಲಿ ತೊರಗಲ್ಲಿಗೆ ಕರೆದೊಯ್ದು ಸಂಭ್ರಮದ ಸೇವೆಯಲ್ಲಿ ತೊಡಗುತ್ತಾನೆ. ಆಗ ಯೋಗಿಯು ನಾಡಿನ ಜನರನ್ನು ಪರಿಪರಿಯಾಗಿ ಕಾಡುತ್ತಿರುವ ರಾಕ್ಷಸನ ಇರವನ್ನು ಕೇಳುತ್ತಾನೆ. ತಮಗೆ ತಿಳಿಯದ ತಾಣವಿದೆಯೇ ? ಎಂದು ಅರಸು ಬಿನ್ನವಿಸುತ್ತಾನೆ. "ರಾಜಾ ಚಿಂತೆಯನ್ನು ದೂರಮಾಡು, ಇಂದಿನ ರಾತ್ರಿ ಆ ಬ್ರಹ್ಮರಾಕ್ಷಸನು ಇಲ್ಲಿಗೇ ಬರುವಂತೆ ಮಾಡುವೆ''ನೆಂದು ಯೋಗಿಯು ಅಭಯ ವಚನವನ್ನೀಯುವನು. ಅಂದಿರುಳು ಶಿವಯೋಗಿ ಲಿಂಗಪೂಜಾ ನಿಷ್ಠನಾಗಿರಲು ರಕ್ಕಸನು ಬಂದು ಶರಣಾಗತನಾಗುವನು. ನೀನಾರೆಂಬ ಗುರುವಿನ ಪ್ರಶ್ನೆಗೆ ರಾಕ್ಷಸನು ''ಜಂಗಮನೋರ್ವನನ್ನು ನಿಂದಿಸಿ ಏಡಿಸಿದುದಕ್ಕೆ ನನಗೀ ಜನ್ಮ ದೊರೆಯಿತು. ಈ ತೊರಗಲ್ಲ ಅರಮನೆಗೆ ಶಿವಯೋಗಿಯೋರ್ವನು ಬರುವನು, ಆತನಿಂದ ನಿನ್ನ ಶಾಪವಿಮೋಚನವಾಗುವದೆಂದು ಆ ಜಂಗಮನು ನುಡಿದಿದ್ದನು." ಇದೋ ಶ್ರೀಶಿವಯೋಗಿಯೇ ನನ್ನ ಅನಂತ ಪ್ರಣಾಮಗಳು. ನನ್ನನ್ನು ರಾಕ್ಷಸಜನ್ಮದಿಂದ ರಕ್ಷಿಸೆಂದು ಮೊರೆಹೊಗುವನು. ಗುರುವಿನ ಅಮೃತ ಹಸ್ತಸ್ಪರ್ಶದಿಂದ ರಾಕ್ಷಸನು ಮುಕ್ತನಾಗುವನು. ಯೋಗಿಯ ಮಹಿಮೆಯನ್ನು ಕೊಂಡಾಡುತ್ತ ತೊರಗಲ್ಲ ಅರಸು ಮಠವೊಂದನ್ನು ಕಟ್ಟಿಸಿ ಅದಕ್ಕೆ ಭೂದಾನ ಕೊಡುತ್ತಾನೆ.

## ಇಪ್ಪತ್ತೊಂದನೆಯ ಸಂಧಿ

ಶ್ರೀಗುರುಮೂರ್ತಿಯು ತೊರಗಲ್ಲ ಮಠದಲ್ಲಿ ಕೆಲಕಾಲವಿದ್ದು ಅರಳಿಕಟ್ಟೆಗೆ ಆಗಮಿಸುವನು. ನರಗುಂದ ನೃಪೋತ್ತಮವಂಶದ ಬಾಬಾನಾಬ ಅರಸು ರಾಮದುರ್ಗದಲ್ಲಿದ್ದನು. ಯೋಗಿಯ ಸಂದರ್ಶನಕ್ಕಾಗಿ ಆತನು ಮನವೆಳಿಸಿ ಬರುವನು. ನೃಪನು ಚಿನ್ನದ ಛತ್ರ ಮೊದಲಾದ ಲಿಂಗಪೂಜಾ ಸಲಕರಣೆಗಳನ್ನು ಸ್ವಾಮಿಗೆ ಕಾಣಿಕೆಯಾಗಿ ಅರ್ಪಿಸುವನು. ಕೆಲ ದಿನದ ಮೇಲೆ ಆ ಚಿನ್ನದ ವಸ್ತುಗಳು ಕಳವಾಗುತ್ತವೆ. ಕದ್ದೊಯ್ದ ಕಳ್ಳರ ಕಣ್ಣುಗಳು ಕುರುಡಾಗಲು ಅವನ್ನು ಹಿಂದಿರುಗಿ ಸ್ವಾಮಿಗೆ ಕೊಡುತ್ತಾರೆ. ಒಂದು ದಿನ ಇರುಳಿನಲ್ಲಿ ಗುರು ಮಲ್ಲಯ್ಯನು ಕಾಣಿಸಿಕೊಂಡು "ಇನ್ನೊಂದು ಸ್ಥಾನದಲ್ಲಿ ನೀನು ಮಠವನ್ನು ಕಟ್ಟಿಸಿ ಅಲ್ಲಿ ನನಗೊಂದು ಗದ್ದುಗೆಯನ್ನು ರಚಿಸು'' ಎಂದು ಹೇಳಿದಂತಾಗುವದು. ಇಷ್ಟರಲ್ಲಿಯೇ ನರಗುಂದ ನೃಪನು ರಾಮದುರ್ಗ ದೊರೆಯೊಡನೆ ದರ್ಶನಕ್ಕೆ ಆಗಮಿಸುವನು. ಗುರುವು ಮಲ್ಲಯ್ಯನ ಆಜ್ಞೆಯನ್ನು ನೃಪರಿಗೆ ತಿಳಿಸುತ್ತಾನೆ. ಈರ್ವ ನೃಪರೂ ಆಜ್ಞೆ ಶಿರಸಾಮಾನ್ಯವೆಂದು ಒಪ್ಪುವರು. ಆದರೆ ಯಾವ ನಾಡಿನೊಳೆಂದು ತೊಡಕು ಬರುತ್ತದೆ. ಆಗ ಗುರುವರನು ಈ ನಮ್ಮ ಕಂಟಲೆ ಬಸವನು ಪಯಣದಲ್ಲಿ ಯಾವ ತಾಣದಲ್ಲಿ ಮಲಗುವನೋ ಅಲ್ಲಿಯೇ ಮಠವನ್ನು ನಿರ್ಮಿಸಿರೆಂದು ಹೇಳುತ್ತಾನೆ. ಬಸವನು ಮುಂದೆ, ಎಡ ಬಲದಲ್ಲಿ ನೃಪರು, ನಡುವೆ ಗುರುಮೂರ್ತಿ ಇಂತು ಸಂಭ್ರ

ಮದಿಂದ ಪಯಣ ಬೆಳೆಸುತ್ತಾರೆ. ಮಲಾಪಹಾರಿಣಿಯನ್ನು ದಾಟಿ ಅವರಾದಿ ಗ್ರಾಮಕ್ಕೆ ಬರುವಷ್ಟರಲ್ಲಿ ಬಸವನು ಆ ಊರ ತೆಂಕಣ ದಿಕ್ಕಿನ ಬನಕ್ಕೆ ಬಂದು ಅಲ್ಲಿ ಮಲಗುವನು. ಆ ಸ್ಥಳವಲ್ಲಿಯೇ ನೃಪರು ಉತ್ತರ-ದಕ್ಷಿಣ ದಿಕ್ಕುಗಳಿಗೆರಡು ದೊಡ್ಡ ಬಾಗಿಲುಗಳನ್ನಿಟ್ಟು ಮುಕ್ತಿರಮೆಯ ವಿಹಾರ ಮಂದಿರವೋ ಎಂಬಂತೆ ಮಠ ವನ್ನು ಕಟ್ಟಿಸಿದರು. ಆ ಮಠದ ಮಧ್ಯದಲ್ಲಿಯೇ ಗಿರಿ ಮಲ್ಲಿಕಾರ್ಜುನನಿಗೆ ನಲ್ಗದ್ದು ಗೆಯೊಂದನ್ನು ಸ್ಥಾಪನೆ ಮಾಡುವರು. ನವಮಠದ ಪ್ರವೇಶೋತ್ಸವವನ್ನು ಜರು ಗಿಸಿ ಹೊರಡಲುದ್ಯುಕ್ತರಾದ ಉಭಯ ನೃಪರಿಗೆ ಶಿವಯೋಗಿಯು ಮಂಗಲ ಬೆತ್ತಗ ಳೆರಡನ್ನು ಆಶೀರ್ವದಿಸುತ್ತಾನೆ.

## ಇಪ್ಪತ್ತೆರಡನೆಯ ಸಂಧಿ

ಅವರಾದಿಯ ಮಠದಲ್ಲಿ ನಲವಿನಿಂ ಇರುತ್ತಿರಲು ಧರ್ಮಣ್ಣನೆಂಬೋರ್ವ ಭಕ್ತ, ತ್ರಿಕರಣ ಪೂರ್ವಕವಾಗಿ ಗುರುಪುಂಗವನ ಸೇವೆಯಲ್ಲಿ ನಿಲ್ಲುವನು. ಸಮೀಪದಲ್ಲಿದ್ದ ಗೊಣ್ಣಾಗರದಲ್ಲಿ ಚಿದಂಬರ ದೀಕ್ಷಿತನು ಸೋಮಯಾಗ ಮಾಡಲು ಪ್ರಾರಂಭಿಸುವನು. ಆ ಯಾಗಕ್ಕಾಗಿ ಆಮಂತ್ರಿಸಲು ಬಂದ ದೀಕ್ಷಿತನ ಬಿನ್ನಹ ವನ್ನು ಮನ್ನಿಸಿ ಫಲಾಶನನು ಅಲ್ಲಿಗೆ ಬರುತ್ತಾನೆ. ಆಗಮಿಸಿದ ಗುರುವಿಗೆ ದೀಕ್ಷಿ ತನು ಮಣಿದು ಉಚಿತಾಸನದಲ್ಲಿ ಕುಳ್ಳಿರಿಸುವನು. ಈ ಯಾಗದಲ್ಲಿ ನನ್ನ ಕೆಲಸ ವೇನೆಂದು ಬೆಸಗೊಂಡ ಗುರುಮೂರ್ತಿಗೆ ಯಾಗವು ನಿರ್ವಿಘ್ನವಾಗಿ ಪೂರ್ಣಗೊ ಳ್ಳುವಂತೆ ಆಶೀರ್ವದಿಸುವದು. ಮತ್ತು ಯಾಗಕ್ಕೆ ಬಂದವರಿಗೆ ಹೂ ಹಣ್ಣುಗಳ ನ್ನಿತ್ತು ಆಶೀರ್ವದಿಸಬೇಕೆಂದು ಬೇಡುತ್ತಾನೆ. ಯಾಗವು ಮುಗಿದು, ಯೋಗಿಯು ಫಲಗಳನ್ನು ಆಶೀರ್ವದಿಸುತ್ತಿರುವಾಗ ಫಲದ ಪುಟ್ಟಿಯು ಬರಿದಾಗದೆ ಮೊದಲಿ ನಂತೆಯೇ ತುಂಬಿರುವದನ್ನು ಕಂಡು ಜನರು ವಿಸ್ಮಯಗೊಳ್ಳುತ್ತಾರೆ. ಇದು ಯಜ್ಞಪುರುಷನ ಲೀಲೆಯೆಂದು ಗುರುಮೂರ್ತಿಯು ಸೌಜನ್ಯದಿಂದ ನುಡಿಯು ತ್ತಾನೆ. ಯಾಗಕ್ಕೆ ಆಗಮಿಸಿದವರಲ್ಲಿ ಮಹಾಮಹಿಮ ಗರಗದ ಮಡಿವಾಳ ಸ್ವಾಮಿ ಗಳೂ ಇರುತ್ತಾರೆ ಶಿವಮೂರ್ತಿಯ ಈ ಲೀಲೆಯನ್ನು ಕಂಡು ಫಲಾಶನನ ಹೆಸ ರಿಗೆ ಈ ಲೀಲೆ ಒಪ್ಪುವಂತಿದೆಯೆಂದು ಹರುಷಿತರಾಗುವರು. ಯೋಗಿಯು ಅಲ್ಲಿಂದ ಅವರಾದಿಯ ಮಠಕ್ಕೆ ಬಂದು ದಾಸೋಹದಲ್ಲಿ ನಿರತನಾಗುತ್ತಾನೆ. ಕರಣಿಕ ರುದ್ರ ಪ್ಪನ ಬಿನ್ನಹವನ್ನು ಮನ್ನಿಸಿ ಅವನ ಮನೆಯಲ್ಲಿ ಲಿಂಗಾರ್ಚನೆ ಗೈದು ಆತನಿಗೆ ರಾಟಿ ಮತ್ತು ಕಿವಿಟೊಪ್ಪಿಗೆಯನ್ನು ಇತ್ತು ಹರಸುತ್ತಾನೆ. ಒಂದು ದಿನ ಗಣ ಸಮಾರಾಧನೆಯ ಸಮಯದಲ್ಲಿ ಗುರುವು ಲಿಂಗಾರ್ಚನೆಯನ್ನು ಮಾಡುತ್ತಿರುವಾಗ ಹಸ್ತವನ್ನೆತ್ತಿ "ಭಯ ಪಡಬೇಡಿರಿ. ತೊರೆಯು ಮಗನನ್ನು ಮುಳುಗಿಸದು" ಎಂಬ ನುಡಿ ಅವನಿಂದ ಹೊರಬೀಳುತ್ತದೆ. ಏನೆಂದು ತಿಳಿಯಲು ಭಕ್ತರು ಹಾತೊರೆಯು ತ್ತಿರುವಷ್ಟರಲ್ಲಿಯೇ, ಓರ್ವ ಮಹೇಶ್ವರನು ಪತ್ನಿ-ಪುತ್ರರೊಡಗೂಡಿ, ಅಲ್ಲಿಗೆ ಬರು

ವನು. ದಾರಿಯಲ್ಲಿ ಹೊಳೆಯಲ್ಲಿ ಮುಳುಗುತ್ತಿದ್ದ ಪುತ್ರನು ದಿವ್ಯ ಹಸ್ತವೊಂದರ ನೆರವಿನಿಂದ ಹೇಗೆ ಬದುಕಿದನೆಂಬ ವಿಷಯನ್ನು ಅವರಿಗೆ ತಿಳಿಸುತ್ತಾನೆ. ಈ ಪುತ್ರ ನನ್ನು ತಮ್ಮ ಸೇವೆಗಾಗಿ ಅರ್ಪಿಸಬೇಕೆಂದು ಬಂದಿರುವೆನೆಂಬ ತನ್ನಿಚ್ಛೆಯನ್ನು ಆತನು ಪ್ರಕಟಿಸುವನು ಶಿವಯೋಗಿಯು ಶಿವನ ಹೆಸರಿನ ಆ ಬಾಲಕನನ್ನು ಸ್ವೀಕರಿಸಿ ಭಾವೀ ಮಠಾಧಿಕಾರಿಯಾಗಲು ಯೋಗ್ಯನಿರುವನೆಂದು ಮುದದಿಂದ ಅವನನ್ನು ಹರಸುತ್ತಾನೆ.

## ಇಪ್ಪತ್ತು ಮೂರನೆಯ ಸಂಧಿ

ಶಿವ ಮರಿದೇವರು ಮಠದ ದಾಸೋಹ ಕಾಯಕ ಮೊದಲ್ಗೊಂಡು ಎಲ್ಲ ವನ್ನು ತೃಪ್ತಿಕರವಾಗಿ ನಡೆಸುತ್ತಿರುವದನ್ನು ಫಲಾಶನನು ನೋಡಿ, ಆನಂದಿಸಿ ತಾನು ದೇಶ ಸಂಚಾರಕ್ಕಾಗಿ ಪೊರಮಡುವನು. ಯೋಗಿವರನ ಸಂಚಾರ ಭಕ್ತ ರಿಗೆ ಸುಖದ ಸುಗ್ಗಿಯಾಗಿ ಪರಿಣಮಿಸಿತು. ಆತನು ಪಾದವಿಟ್ಟ ಪಳ್ಳಿ ಪಾವನ ವಾಯಿತು. ಶ್ರೀಶಿವಯೋಗಿಯು ನರಗುಂದಕ್ಕೆ ಆಗಮಿಸಲು ಅಲ್ಲಿಯ ದೊರೆಯು ಸಂಭ್ರಮದಿಂದ ಇದಿರುಗೊಂಡು ಕಾಣಿಕೆ ಸಲ್ಲಿಸುತ್ತಾನೆ. ಅಲ್ಲಿಂದ ತಡಹಾಳ ಕೊಂಗವಾಡ, ಸುರಕೋಡ, ಹದ್ಲಿ, ಹಡಗಲಿ, ಯಾವಗಲ್ಲು, ಬೆಳವಣಿಕಿ, ಮಲ್ಲಾ ಪೂರ ಬಾಚಲಪುರ, ಚೊಳಚಗುಡ್ಡಗಳ ಭಕ್ತರ ಸೇವೆಯನ್ನು ಕೈಕೊಂಡು, ಅವರಿಗೆ ಧರ್ಮೋಪದೇಶ ಮಾಡುತ್ತಾನೆ. ಮುಂದೆ ಬಾದಾಮಿ ಪ್ರಾಂತಕ್ಕೆ ಬಂದು ಬರ ಗಾಲ ಬಿದ್ದ ಆ ನಾಡಿಗೆ ಮಳೆಗರಿಸಿ ಪರಿಹಾರ ಮಾಡುತ್ತಾನೆ. ಯೋಗಿಯು ಗುಡ್ಡದ ಮಲ್ಲಾಪುರಕ್ಕೆ ಆಗಮಿಸಲು ಮಲ್ಲಯ್ಯ ಹೆಸರಿನ ತನ್ನ ಎತ್ತು ಪ್ರಾಣ ಬಿಡುತ್ತವೆ. ಅದಕ್ಕೆ ಗೈಯ್ದ ಸಮಾಧಿ ಎಡೆಯಲ್ಲಿ ದೇವತರುವಾಗಿ ಇಂದಿಗೂ ಒಂದು ಬಿಲ್ಪ ವೃಕ್ಷವು ಕಂಗೊಳಿಸುತ್ತದೆ ಶ್ರೀಫಲಾಶನಯೋಗಿ ಸಂಚಾರದಿಂದ ಹಿಂದಿರುಗಿ ಮಠಕ್ಕೆ ಆಗಮಿಸುತ್ತಾನೆ. ನೆರೆಹಳ್ಳಿಯ ಲಿಂಗಾಯತರು ಗುಡಿ ಯನ್ನು ಕಟ್ಟಿಸಿ ಲಿಂಗ ಪ್ರತಿಷ್ಠೆ ಮಾಡುವ ತಮ್ಮ ಮನೋಬಯಕೆಯನ್ನು ಸುರಿ 'ಇದು ಉಚಿತವೇ ?' ಎಂದು ಗುರುಮೂರ್ತಿಯನ್ನು ಕೇಳುವರು ಇಷ್ಟಲಿಂಗವನ್ನು ಬಿಟ್ಟು ಅನ್ಯ ದೈವತಗಳ ಉಪಾಸನೆ ಮಾಡುವದು ವೀರಶೈವರಿಗೆ ಸಲ್ಲದೆಂದು ಶರ ಣರು ಕಟ್ಟಾಜ್ಞೆ ಮಾಡಿರುವದೇನೋ ನಿಜವು. ಆದರೂ ಶಿವಲಿಂಗಗಳ ದರ್ಶನ ಸ್ತುತಿಗಳಿಂದ ದೋಷವಂಟದೆಂದು ಧರ್ಮ ಸೂಕ್ಷ್ಮವನ್ನು ಉಪದೇಶಿಸುತ್ತಾನೆ.

ಒಂದು ದಿನ ಫಲಾಶನಯೋಗಿಯು ನರಗುಂದ, ತೊರಗಲ್ಲು, ರಾಮದು ರ್ಗದ ರಾಜರನ್ನು ಬರಮಾಡಿಕೊಂಡು "ಭುವಿಯಲ್ಲಿ ನಾನು ಮಾಡುವ ಕಾರ್ಯ ಮುಗಿಯಿತು. ನನಗೆ ಗುರುವಿನ ಆಜ್ಞೆಯಾಗಿದೆ. ಕೆಲ ದಿನಗಳಲ್ಲಿಯೇ ನಾನು ಲಿಂಗದೊಳಡಗುವೆನು. ಆದ್ದರಿಂದ ಶಿವಮೂರ್ತಿಗೆ ನೀವೆಲ್ಲ ಸೇರಿ ಜಂಗಮ ಪಟ್ಟ ವನ್ನು ಕಟ್ಟಬೇಕೆಂದು" ತಿಳಿಸುತ್ತಾನೆ. ಎರಡು ಮಾತಿಲ್ಲದೇ ನೆರೆದವರೆಲ್ಲ ಒಪ್ಪು

ವರು ಶಿವಮೂರ್ತಿಯನ್ನು ಪೀಠದಲ್ಲಿ ಕೂಡ್ರಿಸಿ ಆಗಮೋಕ್ತ ವಿಧಿಗಳಿಂದ ಚರ ಪಟ್ಟಾಧಿಕಾರವನ್ನು ನೀಡಿ ಶಿವಯೋಗಿಯು ಆಶೀರ್ವದಿಸುತ್ತಾನೆ ಶ್ರೀಗುರುವು ದಾಸೋಹ ಮತ್ತು ಭಕ್ತರಕ್ಷಣ ಭಾರವನ್ನು ಶಿವಮೂರ್ತಿಗಿತ್ತು ಶಿವಯೋಗದ ರಹಸ್ಯವನ್ನು ಬೋಧಿಸಿ, ಲಿಂಗದೊಳಡಗುವ ದಿನವನ್ನು ಸೂಚಿಸಿ,ಸಮಾಧಿ ರಚನೆಗೆ ಆಜ್ಞೆಯನ್ನೀಯುವನು. ಗುರುವಿನಪ್ಪಣೆಯಂತೆ ಶಿವಮೂರ್ತಿ ಎಲ್ಲವನ್ನೂ ಸಿದ್ಧಗೊಳಿಸುತ್ತಾನೆ. ಕೊನೆಯಲ್ಲಿ ಫಲಾಶನಯೋಗಿಯು ಶಿಷ್ಯನಿಗೆ ಪರುಷಮಣಿಯಲ್ಲಿರುವ ದಿವ್ಯಶಕ್ತಿಯನ್ನು ದಯಪಾಲಿಸಿ ಶಾಲಿವಾಹನ ಶಕೆ ೧೭೫೭ ಮನ್ಮಥ ಸಂವತ್ಸರ ಫಾಲ್ಗುಣ ಬಹುಳ ಏಕಾದಶಿ ರವಿವಾರ ದಿವಸ ಮುದದಿಂದ ಲಿಂಗದೊಳಡಗಿದನು

## ಇಪ್ಪತ್ತುನಾಲ್ಕನೆಯ ಸಂಧಿ

ಅವರಾದಿ ಮಠದ ಎರಡನೆಯ ಗುರುವಾದ ಶಿವಮೂರ್ತಿಯು ಗುರುಸಮಾಧಿಯನ್ನು ನಿತ್ಯವೂ ಸಂಭ್ರಮದಿಂದ ಪೂಜೆ ಮಾಡುತ್ತ ಪ್ರತಿವರುಷ ಮಾರ್ಗಶಿರ ಪೂರ್ಣಿಮೆಯ ದಿವಸ ಅನ್ನಸಂತೃಪ್ತಿ, ಗುರುಮೂರ್ತಿಯ ರಥೋತ್ಸವ, ಪಂಡಿತರಿಂದ ವೀರಶೈವ ಧರ್ಮದುಪದೇಶವನ್ನು ಮಾಡಿಸುವ ಕಾರ್ಯದಲ್ಲಿ ನಿರತನಾದನು. ಗುರುವಿನಂತೆಯೇ ತಾನೂ ಫಲಾಶನ ವೃತ್ತಿಯಿಂದ ಜೀವಿಸುತ್ತ ದೇಶಪರ್ಯಟನ ಮಾಡಿ ಭಕ್ತರು ಆಶಿಸಿದುದನ್ನು ಕರುಣಿಸುತ್ತಿರುವನು ಒಂದು ಬಾರಿ ಹಂಚಿನಾಳ ಗ್ರಾಮಕ್ಕೆ ಬರುತ್ತಾನೆ ಊರಲ್ಲಿ ಮಾರಿಕಾ ಜೇನೆಯು ಪ್ರಾರಂಭವಾಗಿ ಗೌಡನು ರೋಗಗ್ರಸ್ತನಾಗಿರುತ್ತಾನೆ ಕಾರಣ ಊರ ಭಕ್ತರು ಸ್ವಾಮಿಗೆ ಊರನ್ನು ಪ್ರವೇಶಿಸಬೇಡಿರಿ. ಇಲ್ಲಿಯೇ ಕೆರೆಯ ಬಳಿ ಕುಟೀರವನ್ನು ರಚಿಸುತ್ತೇವೆಂದು ಹೇಳುತ್ತಾರೆ ಅವರ ಮಾತನ್ನು ಲೆಕ್ಕಿಸದೆ ಶಿವಮೂರ್ತಿಯು ಊರಲ್ಲಿ ಹೋಗಿ, ಗೌಡನಿಗೆ ಭಸ್ಮವನ್ನು ಲೇಪಿಸಿ ಅವನನ್ನು ಮರಣದಿಂದ ರಕ್ಷಿಸುತ್ತಾನೆ. ಅನಂತರ ಜೋಡುತೆಂಗುಗಳನ್ನು ತರಿಸುತ್ತ ಅವುಗಳನ್ನು ಆಶೀರ್ವದಿಸಿ ಊರವರಿಗೆ ಕೊಡುವನು. ಮಾರಿಕಾ ಬೇನೆಯು ಒಂದೆರಡು ದಿನಗಳಲ್ಲಿ ಇಲ್ಲದಾಗುವದು. ಗೌಡನು ತನ್ನ ಮನೆಯನ್ನು ಗುರುಮಠವನ್ನಾಗಿಸಿ ಹಾವುಗೆಗಳನ್ನಿಟ್ಟು ಪೂಜಿಸುತ್ತಾನೆ. ಒಂದು ದಿನ ನಿಜಾಮ ರಾಜ್ಯದ ಗೆಜ್ಜಲಗಟ್ಟೆಯ ಚೆನ್ನಪ್ಪ ದೇಸಾಯಿಯು ತನ್ನ ಸತಿಯನ್ನು ಕೂಡಿ ಯಾತ್ರೆಯನ್ನು ಮುಗಿಸಿಕೊಂಡು ಅಲ್ಲಿಗೆ ಬರುತ್ತಾನೆ. ದಾರಿಯಲ್ಲಿ ದೇಸಾಯಿಗೆ ಹಾವು ಕಡಿಯುತ್ತದೆ ದೃಷ್ಟಿ ಮೈಬಣ್ಣ ಕೆಟ್ಟು ಮೂಗು ಬಾಯಿಂದ ನೊರೆ ಹೊರಡುವದು. ಉಸಿರಾಟ ನಿಲ್ಲುವದು ಆಗ ನೆರೆದವರೆಲ್ಲ ಕೂಡಿ ದೇಸಾಯಿಯನ್ನು ಶಿವಮೂರ್ತಿಯ ಬಳಿಗೆ ತರುವರು. ಯೋಗಿಶಿವಮೂರ್ತಿಯು ಹಸ್ತಸ್ಪರ್ಶ ಮಾಡಿ, ಭಸ್ಮವನ್ನು ಧರಿಸಿ ಬದುಕಿಸುತ್ತಾನೆ. ನಿನ್ನ ಸತಿಯ, ಸದ್ವರ್ತನೆಯ ಬಲದಿಂದ ನೀನು ಬದುಕಿದೆಯೆಂದು ಸ್ವಾಮಿಯು ನುಡಿಯುತ್ತಾನೆ. ಹಂಚಿನಾಳದಿಂದ ಬ್ಯಾಹಟ್ಟಿಗೆ ಬಂದು ಶಿವಮೂರ್ತಿಯು ಅಲ್ಲಿಯ ಮಠದ ಮಹೇಶ್ವರನಿಗೆ ದ್ವಿಪುತ್ರ

ಸಂತಾನಕ್ಕೆ ಆಶೀರ್ವದಿಸಿ, ಅದರಲ್ಲಿ ಒಬ್ಬನನ್ನು ತಮ್ಮ ಸೇವೆಗೆ ಅರ್ಪಿಸಬೇಕೆಂದು ಕೇಳುತ್ತಾನೆ. ಮಹೇಶ್ವರನು ಒಪ್ಪುವನು, ಯೋಗಿಯು ಅಲ್ಲಿಂದ ಸೊಟಕನಾಳಕ್ಕೆ ಬಂದು ಅಕ್ಕಸಾಲಿಗನನ್ನು ಉದ್ಧರಿಸಿ ಸಿದ್ಧನಾಳಿಗೆ ತೆರಳಿ ಆ ಊರ ಗೌಡನನ್ನು ಹರಸಿ ಆತನ ಮನೆಯಲ್ಲಿ ಕೆಲಕಾಲ ನೆಲೆಸುವನು. ಮರಳಿ ಅವರಾದಿ ಮಠಕ್ಕೆ ಗುರುಮೂರ್ತಿ ಹೊರಟು ನಿಂತಾಗ, ಗೌಡನು ಭೂಮಿಯೊಂದನ್ನು ಕಾಣಿಕೆಯಾಗಿ ಅರ್ಪಿಸುತ್ತಾನೆ. ಗುರು ಮಠಕ್ಕೆ ಆಗಮಿಸುವ ಹೊತ್ತಿಗೆ ಬ್ಯಾಹಟ್ಟಿಯ ಮಹೇಶ್ವರನು ತನ್ನ ಪುತ್ರರೀರ್ವರನ್ನು ಕರೆತಂದು ಹಿರಿಯವನನ್ನು ಮಠದ ಸೇವೆಗೆಂದು ಸಲ್ಲಿಸುತ್ತಾನೆ. ಆ ಬಾಲಕನು ಗುರುವಿನ ಸೇವೆಯಲ್ಲಿ ತತ್ಪರನಾಗಿ ಬೆಳೆಯುತ್ತಾನೆ. ಗುರುವು ಆತನಿಗೆ ಅಡವಿಸ್ವಾಮಿಯೆಂದು ಹೆಸರಿಡುತ್ತಾನೆ. ಮಠದ ಕಾರ್ಯವೆಲ್ಲ ವನ್ನು ಅಡವಿಸ್ವಾಮಿಯು ತೃಪ್ತಿಕರವಾಗಿ ನಡೆಸತೊಡಗುವನು. ಇದನ್ನರಿತ ಗುರುವು ಆತನಿಗೆ ಪಟ್ಟಾಧಿಕಾರವನ್ನಿತ್ತು ನಿರ್ದಿಷ್ಟ ದಿನವಲ್ಲಿ ಲಿಂಗದೊಳೈಕ್ಯ ಹೊಂದುತ್ತಾನೆ.

## ಇಪ್ಪತ್ತೈದನೆಯ ಸಂಧಿ

ಅಡವಿಸ್ವಾಮಿಗಳಿಗೆ ದಿನದಿನಕ್ಕೆ ವಿರತಿಭಾವ ಹೆಚ್ಚುತ್ತಿರಲು ಮಠದಧಿಕಾರ ದಿಂದ ವಿಮುಕ್ತರಾಗಲು ಬಯಸಿ, ಮಾಹೇಶ್ವರಸುತನೋರ್ವನನ್ನು ಕರೆತಂದು ಆತನಿಗೆ ಶಿವನೆಂದು ಹೆಸರಿಟ್ಟು ಜಂಗಮಪಟ್ಟವನ್ನು ಕೊಡುತ್ತಾರೆ ಮುಂದೆ ಜನತಿಂಥಿಣಿಯ ಸಹವಾಸವನ್ನೇ ಬಿಟ್ಟು ಹಂಚಿನಾಳ ಮಠದಲ್ಲಿಯೇ ನೆಲೆಸುತ್ತಾನೆ. ಇತ್ತ ಶಿವಸ್ವಾಮಿಯು ಗುರುಪರಂಪರೆಯಿಂದ ಬಂದ ಮಠದ ಸತ್ಕಾರ್ಯಗಳನ್ನೆಲ್ಲ ವನ್ನು ನಡೆಸುತ್ತಲಿರುವನು. ಸ್ವಲ್ಪ ಕಾಲದಲ್ಲಿಯೇ ಶಿವಸ್ವಾಮಿಯು ತನ್ನ ಮಹಿಮೆಯಿಂದ ಪ್ರಸಿದ್ಧಿ ಹೊಂದುವನು. ಆ ಕಾಲಕ್ಕೆ ಮಳೆಹೋಗಿ ಬರಗಾಲ ಕಾಲಿಡುವದೆಂದು ಬೆದರಿ ನಾಡವರು ಸ್ವಾಮಿಯ ಬಳಿಗೆ ಬರುತ್ತಾರೆ. ಸ್ವಾಮಿಯು ಮಠದಾದಿ ಕರ್ತೃವಿನ ಗದ್ದುಗೆಯ ಬಳಿ ಕುಳಿತು ಪಂಚಾಕ್ಷರೀ ಮಂತ್ರವನ್ನು ಜಪಿಸಲು ಪ್ರಾರಂಭಿಸುವನು. ದಿನದ ಕೊನೆಯಾಗುವದರೊಳಗೆ ಅಮೃತ ವೃಷ್ಟಿಯು ಸುರಿಯುತ್ತದೆ. ಇಂತಿರಲೊಂದು ದಿನ ನಿಜಲಿಂಗ ಪೂಜೆಯ ಕಾಲಕ್ಕೆ ಶಿವ ಸ್ವಾಮಿಯು ಲಿಂಗದಲ್ಲಿ ಬೆರೆಯುತ್ತಾನೆ. ಹಂಚಿನಾಳ ಮಠದಲ್ಲಿದ್ದ ಅಡವಿಸ್ವಾಮಿ ಗಳು ಅವರಾದಿ ಮಠಕ್ಕೆ ಬಂದು ದಿನದ ದಾಸೋಹ, ಧರ್ಮಬೋಧೆಗಳ ಕಾಯಕ ದಲ್ಲಿ ತೊಡಗುತ್ತಾರೆ. ಕಾಲಾನುಕ್ರಮದಲ್ಲಿ ಸಂಚಾರಾರ್ಥವಾಗಿ ಅಡವಿಸ್ವಾಮಿ ಗಳು ಮೆಣಸಿಗಿ ಗ್ರಾಮಕ್ಕೆ ಆಗಮಿಸುವರು. ಅಲ್ಲಿಯ ಮಹೇಶ್ವರ ತೋಟಪ್ಪಯ್ಯ ನವರನ್ನು ಕಂಡು, ನಿಮ್ಮೀರ್ವ ಪುತ್ರರಲ್ಲಿ ಚಿಕ್ಕವನನ್ನು ಮಠದ ಅಧಿಕಾರಕ್ಕೆ ಕೊಡಬೆಕೇಂದು ಕೇಳುವರು. ಆಗ ತೋಟಪ್ಪಯ್ಯನವರು ಭಕ್ತಿಯಿಂದ ಪುತ್ರರೀರ್ವ ರನ್ನೂ ಕರೆತಂದು ಗುರುವಿನ ಅಡಿಗೆ ನಮಸ್ಕರಿಸುತ್ತಾರೆ. ಅವರಲ್ಲಿ ಚಿಕ್ಕವನನ್ನು ಕರೆದು ಆತನ ಶಿರದಲ್ಲಿ ಹಸ್ತವನ್ನಿಟ್ಟು, ಈತನು ಜಂಗಮಪದಕ್ಕೆ ತಕ್ಕವನೆಂದು

ಹರಸುತ್ತಾರೆ. ಇಂದಿನ ಅವರಾದಿಮಠದ ಅಧ್ಯಕ್ಷರಾದ ಶ್ರೀ ಮ. ನಿ. ಪ್ರ. ಸಂಗಮೇಶ್ವರ ಸ್ವಾಮಿಗಳೇ ಈ ಬಾಲಕರಾಗಿದ್ದಾರೆ. ಶ್ರೀಸಂಗಮೇಶ್ವರರು ಅವರಾದಿ ಮಠಕ್ಕೆ ಬಂದ ಮೇಲೆ, ಗುರುವಿನ ಸೇವೆಯ ಮಧುವನ್ನೀಂಟುತ್ತ ಮಠದ ಮರಿದೇವರಾಗಿ ಎಲ್ಲ ಕಾರ್ಯವನ್ನು ಸಾಂಗವಾಗಿ ನಡೆಸತೊಡಗಿದರು. ಶುಭ ದಿವಸವೊಂದರಲ್ಲಿ ಅಡವಿಸ್ವಾಮಿಗಳು ಸಂಗಮೇಶ್ವರ ಸ್ವಾಮಿಗಳಿಗೆ ಗುರುಚರರ ಸಮ್ಮುಖದಲ್ಲಿ ತಕ್ಕ ವಿಧಿಯಿಂದ ಚರಸಂಸ್ಕಾರವನ್ನು ಮಾಡಿಸಿ, ಲಿಂಗಾಂಗ ಸಾಮರಸ್ಯವನ್ನು ಬೋಧಿಸಿ, ಪರಮಜಂಗಮ ಪಟ್ಟವನ್ನು ಕರುಣಿಸುತ್ತಾರೆ. ಪ್ರಭುದೇವರಂತಿರ್ದ ಗುರುವರಗೆ ಭಕ್ತಿಯೊಳು ಬಸವನಂತಿರುವ ಸಂಗಮೇಶ್ವರರು ತೃಪ್ತಿಕರವಾದ ಸೇವೆಯನ್ನೆಸಗು ತ್ತಿರ್ದರು ಇಂತಿರಲು ಒಂದು ದಿನ ಅಡವಿಸ್ವಾಮಿಗಳು ಲಿಂಗಧ್ಯಾನಾಸಕ್ತರಾಗಿ ಅದರಲ್ಲಿಯೇ ಬಯಲಾಗುತ್ತಾರೆ. ಇದೀಗ ಸಂಗಮೇಶ್ವರರು ಸದ್ಗುರು ಪರಂಪರೆ ಯಿಂದ ನಡೆದು ಬಂದ ಭಕ್ತರಕ್ಷಣ, ದಾಸೋಹಗಳ ಕಾಯಕವನ್ನು ಮುಂದುವರಿ ಸಿದ್ದಾರೆ. ಮಠದಾದಿ ಗುರುವಿನ ರಥೋತ್ಸವ ಕಾಲಕ್ಕೆ ಅನ್ನಸಂತೃಪ್ತಿ ಮಾಡುತ್ತ ವಿದ್ವಜ್ಜನರ ಸಭೆಗಳನ್ನು ಕೂಡಿಸಿ ತನ್ಮೂಲಕ ಶಿವಾನುಭವ, ಧಾರ್ಮಿಕಬೋಧೆ ಯನ್ನು ಪ್ರಸಾರ ಮಾಡುತ್ತಲಿರುವರು. ಇಷ್ಟೆಲ್ಲ ಕಾರ್ಯವನ್ನು ಗಿರಿಜಾಪತಿಯೇ ಮಾಡಿಸುತ್ತಿರುವನೆಂಬ ಭಾವನೆಯನ್ನು ತಾಳ್ದು, ಭಕ್ತರ ಕಣ್ಮಣಿಯಾಗಿ ಅವರಾದಿ ಮಠದಲ್ಲಿ ಇಂದಿಗೂ ಮೆರೆಯುತ್ತಿರುವರು.

ಬಳ್ಳಾರಿ ಪುರಮಂಡಲದ ಏಳುಬೆಂಚಿ ಗ್ರಾಮದ ಗುರುಮಠದ ನೀಲಾಂ ಬಿಕಾ ನಯನಾರ್ಯ ದಂಪತಿಗಳ ಪುತ್ರ ಬಳ್ಳಾರಿಯ ವೀರಶೈವ ಮಹಾವಿದ್ಯಾಲ ಯದ ಕನ್ನಡ ಪ್ರಾಧ್ಯಾಪಕ, ನಾಗೇಶ ಈ ಕೃತಿಯನ್ನು ವಿರಚಿಸಿದನು. ಶಾಲಿ ವಾಹನ ಶಕೆ ೧೮೭೨ ವಿಕೃತಿ ನಾಮ ಸಂವತ್ಸರದ ಮಾರ್ಗಶಿರ ಬಹುಳ ೧೧ನೆಯ ದಿನದಂದು ಈ ಕೃತಿರಚನೆ ಮುಗಿದುದು.

ಪುರಾಣವೇನೋ ಮುಗಿಯಿತು. ಆದರೆ ಈ ಸತ್‌ಕಥೆಗಳನ್ನು ಕೇಳುವ ಪುಣ್ಯ ಮಾತ್ರ ಮುಗಿಯದು. ಫಲಾಶನಸ್ವಾಮಿಮಠದ ಲೋಕೋಪಕಾರದ ಕಾರ್ಯ ಮುಗಿಯದು. ಜಗದ ಸೃಷ್ಟಿ ಇರುವವರೆಗೆ ಅದು ಸಾಗಿಯೇ ಸಾಗುತ್ತದೆ.

**— ಶುಭಂ-ಮಂಗಲಂ —**

**— ಎಂ ಜಿ. ವಿರೂಪಾಕ್ಷನ್.**



|| ಓಂ ||

॥ ಶ್ರೀ ಗುರುಮಲ್ಲಿಕಾರ್ಜುನಾಯನಮಃ ॥

—: ಶ್ರೀ ಅವರಾದಿ ಮಹಾಕ್ಷೇತ್ರದ :—

# ಶ್ರೀ ಫಲಾಹಾರಶಿವಯೋಗೀಶ್ವರಪುರಾಣವು

## ಮಂಗಳಾಚರಣಸಂಧಿ

( ಭಾಮಿನೀ ಷಟ್ಪದಿ )

ಶ್ರೀಶಮುಖ್ಯಾಮರವಿನುತ ಗಿರಿ ।
ಜೇಶನೇ ಶಿವನೇ ಫಲಾಹಾ ।
ರೇಶನೆಂಬೊಳ್ಪಿಸರಜಂಗಮರೂಪಮಂ ಧರಿಸಿ ||
ತೋಷದಿಂ ನೀನಾವ ಭಕ್ತರ ।
ಪೋಷಿಸಿದೆಯೋ ಅವರೊಳಿರ್ದಾ ।
ದಾಸಭಾವವನೆಮಗೆ ಕರುಣಿಪುದೆಂದು ನುತಿಸುವೆನು ||೧||

ಶಿವನೆ ನೀಂ ಗುರುರೂಪದಿಂದಂ ।
ಶಿವಮನುವನುಪದೇಶಿಸುತೆ ಯಿ ।
ಷ್ಟವ ಕೊಡುವ ಶಿವಲಿಂಗರೂಪದೆ ಪೂಜೆಗೊಳ್ಳುತಲಿ ||
ಭವವ ನೀಗುವ ಜಂಗಮದ ರೂ ।
ಪವ ಧರಿಸಿ ಪೊರೆವಾ ತ್ರಿವಿಧ ರೂ ।
ಪವನೆ ಪೂಜಿಪ ಭಕ್ತಿಯನು ಕೃಪೆಮಾಡು ನಮಗೊಲಿದು ||೨||

ಆವ ಭಕ್ತಿಯ ಮಹಿಮೆಯಿಂದಂ ।
ಭಾವಜಾರಿಯನೊಲಿಸಿದೆಯೊ ನೀ ।
ನಾ ವಿಮಳತರ ಭಕ್ತಿರೂಪದೆ ಮಾತೆ ಗಿರಿಜಾತೇ ||
ಆವಗಂ ನೆಲಸುವುದು ನಮ್ಮಯ ।
ಭಾವದೊಳು ನೀನೆಂದು ಪದರಾ ।
ಜೀವಯುಗಮಂ ಭಜಿಪೆನಿದ ಕರುಣಿಪುದು ಶಂಕರಿಯೇ ||೩||

ಭುವಿಯವರು ಪರಮಾತ್ಮನಳ್ತಿಯ ।
ಕುವರನಾವನನರ್ಚನಾದಿಯ ।
ವಿವಿಧ ರೂಪದೆ ಸತ್ಕರಿಸಿ ಮೊದಲಾಬಳಿಕೆ ಕೃತಿಯೊಳ್ ||
ತವೆ ತೊಡಗಿ ತೊಡಕಿಲ್ಲದದ ಮುಗಿ ।
ಸುವರೊ ತಾವಾ ಗಣಪನೆನ್ನ ಯ ।
ಕವನಕೆಡರಡಸದವೊಲೀಗೆ ನವೀನ ಶೈಲಿಯನು ||೪||

ಭೋಗದೊಡಲೊಳೆ ಶಿವಸುಸೌಖ್ಯದ ।
ಭೋಗವನು ವರವೀರಶೈವಶಿ ।
ವಾಗಮದ ಮಾರ್ಗದೊಳು ನೀಡುವ ದೀಕ್ಷೆಯನು ಗೈವಾ ।
ಶ್ರೀಗುರೂತ್ತಮರಂಘ್ರಿಪದ್ಮಪ ।
ರಾಗವೆನ್ನಂಗಕ್ಕೆ ಭಸಿತವು ।
ದಾಗಿ ಬೆಳಗಲಿ ಸಂತತಂ ತಾನೆಂದು ಬಯಸುವೆನು ॥ ೫ ॥

ದಿಟ್ಟಯನು ಮೇಣ್ ವಾಯುಮುನಗಳ ।
ಕಷ್ಟವಿಲ್ಲದೆ ಸಿಲಿಸಿ ದುಃಖದ ।
ಹುಟ್ಟನಡಗಿಪ ದಿವ್ಯ ತತ್ವಮಿದೆಂದು ಕರುಣದೊಳು ॥
ಶ್ರೇಷ್ಠಗುರು ಮತ್ಕರಸರೋಜಕೆ ।
ಕೊಟ್ಟ ಪರಮಾನಂದವಾರಿಧಿ ।
ಯಿಷ್ಟಲಿಂಗವನಡಿಗಡಿಗೆ ನೆನೆಯುವೆನು ಭಕ್ತಿಯೊಳು ॥ ೬ ॥

ಗುರುವಿನುಪದೇಶದೊಳು ಸಲೆ ಪಡೆ ।
ದಿರುವ ತಿಳಿನಡೆಯಂತೆ ನಡೆಯು ।
ತ್ತಿರುವ ಸರ್ವರ ವೀರಶೈವರ ಧರ್ಮತತ್ವಗಳಾ ॥
ನೆರೆ ಪರೀಕ್ಷಿಸಿ ಕೊರತೆಯಿರೆಯದ ।
ಸರಿಗೊಳಿಸಿ ಚರಿಸುತೆ ಸಮಾಜೋ ।
ದ್ಧರಣಪರನಾಗಿರುವ ಜಂಗಮನೀಗೆ ಮಂಗಳವಾ ॥ ೭ ॥

ಆರ ಧರ್ಮದೊಳಿಲ್ಲದಮಳವಿ ।
ಚಾರಪೂರ್ಣತೆಯಿಂದೆ ಲೋಕೋ ।
ದ್ಧಾರವೆಸಗುವ ಶಕ್ತಿವೈಶಿಷ್ಟ್ಯದೊಳು ಕಂಗೊಳಿಪಾ ॥
ವೀರಶೈವಸಮಾಜಧರ್ಮಾ ।
ಧಾರದಷ್ಟಾವರಣಗಳ ನಾಂ ।
ಭೂರಿ ಮುದದಿಂ ನುತಿಪೆನಾತ್ಮೋನ್ನತಿಯ ಸಾಧನೆಗೇ ॥ ೮ ॥

ಕ್ರೂರಹಿಂಸಾದಿಗಳ ದುರಿತವಿ ।
ಚಾರಮಂ ದೂರಿರಿಸಿ ದಯೆಯೇ ।
ಸಾರತರ ಧರ್ಮಕ್ಕೆ ಮೂಲಾಧಾರಮೆಂದೊರೆವಾ ॥
ವೀರಶೈವದ ನೀತಿ ವೃಕ್ಷದ ।
ಬೇರುಗಳೆ ತಾವಾದ ಪಂಚಾ ।
ಚಾರಗಳ್ ಮತ್ಪ್ರಾಣಪಂಚಕವಾಗಿ ಶೋಭಿಸಲಿ । ॥ ೯ ॥

ಭಕ್ತಿಯದು ತನ್ನಾತ್ಮಗತ ಶಿವ ।
ಶಕ್ತಿಯದರ ವಿಕಾಸವೇ ಪರ ।
ಮುಕ್ತಿಯೆಂಬನುಪಮ ಸುಸಿದ್ಧಾಂತದೊಳು ರಾಜಿಸುವಾ ॥
ಭಕ್ತಮಾಹೇಶಾದಿಷಟ್ಸ್ಥಲ ।
ಯುಕ್ತತಾತ್ವಿಕಶಾಸ್ತ್ರದೊಳಗನು ।
ರಕ್ತಿ ವರ್ಧಿಸುತಿರಲಿ ಗುರುಜಂಗಮರ ಕರುಣದೊಳು ॥೧೦॥

ಅರಿವೊಡಾ ಶಿವಭಕ್ತರಿಂದಂ ।
ಹಿರಿಯರಿಲ್ಲವು ನೋಡೆ ನನ್ನಿಂ ।
ಕಿರಿಯರಿಲ್ಲೆಂಬನುಳಭೃತ್ಯಾಚಾರದಿಂ ನಡೆದು ॥
ಧರೆಯೊಳಾ ವರವೀರಶೈವದ ।
ಹಿರಿಮೆಯನು ನೆಲೆಗೊಳಿಸಿ ಮೆರೆದಾ ।
ನಿರುಪಮನ ಬಸವೇಶ್ವರನ ಭೃತ್ಯತೆಯು ನಮಗಿರ್ಕೇ ॥೧೧॥

ವಿರತಿವಲ್ಲಭನಲ್ಲಮಪ್ರಭು ।
ವರವಿನಾಣ್ಮನು ಚೆನ್ನಬಸವೇ ।
ಶ್ವರನು ಕಣ್ಣೆರಡಾಗಿ ಶಿವಶರಣರ್ಗೆ ಮೆರೆಯುತ್ತಾ ॥
ಧರೆಯ ಪಾವನಗೈದರೆಂಬುದ ।
ನೆರೆ ನೆನೆದು ಮದ್ಹೃದಯ ಪೀಠದೊ ।
ಳಿರಿಸಿ ಭಜಿಸುವೆನಾವಗಂ ತನ್ಮೂರ್ತಿಯುಗ್ಮವನು ॥೧೨॥

ಮೂರು ದೀಕ್ಷೆಯನೆಸಗಿ ಶಿಷ್ಯರ ।
ಮೂರು ಮಲಗಳ ಕಳೆಯುತವರಾ ।
ಮೂರೊಡಲೊಳಂ ಮೂರು ಲಿಂಗವ ನೆಲೆಗೊಳಿಸಿ ಪೊರೆವಾ ॥
ವೀರಶೈವಗುರೂತ್ತಮರ ಭವ ।
ದೂರಪಂಚಾಚಾರ್ಯರಂಘ್ರಿಪ ।
ಯೋರುಹಂಗಳು ಬೆಳಗುತಿರಲೆನ್ನೆದೆಗೊಳದೆ ನಿರುತಂ ॥೧೩॥

ಎನಿತೊ ಬಗೆಯಿಂದಿರ್ಪ ಯೋಗಗ ।
ಳನಿತು ಶಿವಯೋಗಕ್ಕೆ ಸಮವ ।
ಲ್ಲೆನಿಪ ತತ್ವವನಲ್ಲಮಪ್ರಭುವಿಂದೆ ಸಲೆತಿಳಿದು ॥
ಮನದ ಮೈಲಿಗೆಗಳೆದು ದಿಟ್ಟಿಯ ।
ನನುಗೊಳಿಸಿ ಕರದಿಷ್ಟಲಿಂಗದೊ ।
ಳನಘನಾದಾ ಸಿದ್ಧರಾಮನ ಚರಣಗಳ ನೆನೆವೇಂ ॥೧೪॥

ಮಡಿವ ಗಂಡನ ಕೈವಿಡಿಯದೆಯೆ ।
ನ್ಮೃಡನೆ ನಿಜಪತಿಯೆಂದು ನಂಬಿ ।
ತ್ತಡಿಗಡಿಗೆ ಭಾವದೊಳಗೊಡಮೂಡುವ ತದೀಶ್ವರಗೇ ॥
ಒಡಲನರ್ಪಿಸಿ ನಿತ್ಯಸೌಖ್ಯವ ।
ಪಡೆದೆಸೆವ ಮಾದೇವಿಯಕ್ಕಗ ।
ಳಡಿಗೆರಗಿ ಬೇಡುವೆನು ಶಿವನನು ಮೆಚ್ಚಿಸುವ ಬಗೆಯಾ ॥೧೫॥

ವೀರಶೈವವೆ ವಿಶ್ವಧರ್ಮದ ।
ಸಾರವೆಂಬುದ ತಮ್ಮ ಸತ್ಯಾ ।
ಚಾರದಿಂ ತೋರಿಸಿದರಾವ ದಯಾಘನರು ನಮಗೇ ॥
ಮಾರಹರಪದಪದ್ಮಭೃಂಗಾ ।
ಕಾರರಾ ಶಿವಶರಣರಂಸ್ಮರಿಸು ।
ವಾರಿಜಗಳನುದಿನಮೊಳನ್ನೆದೆಗೊಳದೆ ಶೋಭಿಸಲಿ ॥೧೬॥

ಹೇಯಮಲ್ಲದ ವೃತ್ತಿಯಿಂದಂ ।
ನ್ಯಾಯದಿಂ ದುಡಿದುದನು ತಾಂ ಸ್ವತ ।
ಸೀಯ ಗುರುಚರಲಿಂಗಕರ್ಪಿಸಿ ತತ್ಪ್ರಸಾದದೊಳು ॥
ಕಾಯುವಳಿಯದೆ ಮುಕ್ತರಾಗುತೆ ।
ಕಾಯಕವ ಕೈಲಾಸವಾಗಿಸಿ ।
ದಾ ಯಮೀಂದ್ರರ ಶಿವಶರಣರಡಿಮೂಳಿ ನಮಗಿರ್ಕೇ ॥೧೭॥

ಏಕೆ ಬಹುಜನ್ಮಗಳನೆತ್ತುವು ।
ದೇಕಜನ್ಮದೆ ಮುಕ್ತಿಯಂ ಕೊಡು ।
ವಾ ಕೃಪೆಯಶಿವಲಿಂಗಮಂ ಧರಿಸೆಂದು ಘೋಷಿಸುವಾ ॥
ಲೋಕವಿಶ್ರುತವೀರಶೈವದ ।
ನೇಕಜೀವನ್ಮುಕ್ತರಡಿಯುವ ।
ಲೋಕನದ ಭಾಗ್ಯಮದೆ ಸಾಕೆನ್ನಖಿಲಜೀವನವೇ ॥೧೮॥

ಪುರುಷರಂತಿರೆ ತಾವು ಧರಿಸಿದ ।
ಪರಮಲಿಂಗದ ಪೂಜಿಸುವ ಸಿರಿ ।
ಮೆರೆಯೆ ತಲ್ಲಿಂಗಾಂಗನಮರಸಸೌಖ್ಯಮಂ ಪಡೆದು ॥
ಇರದು ಪೆಣ್ತನವಾತ್ಮಗೆಂಬುದ ।
ನೊರೆವ ಸುವಿದಿತವೀರಶೈವದ ।
ಶರಣೆಯರ ಶಿಶುವಾಗಿ ಬೇಡುವೆನವರ ಪರಕೆಗಳಾ ॥೧೯॥

ಶಿವಶರಣರಾತ್ಮಾನುಭವದಿಂ ।
ಶಿವನನೊಲಿಸಿದ ಬಗೆಗಳಂ ನಿಜ ।
ಕವನಮಣಿದರ್ಪಣದೆ ತೋರಿಸಿ ಭಕ್ತನಿವಹಕ್ಕೇ ॥
ಶಿವನ ಕೃಪೆ ದೊರೆವಂತೆ ಮಾಡಿದ ।
ಶಿವಕವಿಗಳೆನಗೀಗೆ ಶಿವಮಯ ।
ಕವಿತೆಗಳ ಸುಧೆಯುಂಡು ಜನ್ಮವ ಕಳೆವ ಭಾಗ್ಯವನು ॥೨೦॥

ತನ್ನ ಕವನಹಿಮಾದ್ರಿಯಿಂದು ।
ತ್ಪನ್ನಳಾದಾ ಭಕ್ತಿಗಂಗೆಯೊ ।
ಳುನ್ನತದ ಪಾವನತೆಯೊಂದುತೆ ಶಿವನ ಸಿರಿಯಡಿಗೇ ॥
ತನ್ನನರ್ಪಿಸಿ ಮುಕ್ತಿವನಿತಾ ।
ಹೃನ್ನಳಿನರವಿಯಾದ ಹರಿಹರ ।
ನೆನ್ನ ವಾಣಿಗೆ ಕೊಡುಗೆ ಭಕ್ತಿಸುಧಾರಸದ ಸವಿಯಾ ॥೨೧॥

ನಿರುಪಮನ ಸಂಸ್ಕೃತಸುವಿದ್ಯಾ ।
ಪರಮಗುರುವಿನ ಕೊಂಗವಾಡದ ।
ಹಿರಿಯಮಠದಾ ವೀರಭದ್ರಸಮಾಖ್ಯಪಂಡಿತನ ॥
ಚರಣಕಮಲವ ನೆನೆನೆನೆದು ನಾಂ ।
ವಿರಚಿಸುವೆನೀ ಕೃತಿಯ ರಚನೆಯು ।
ಸರಸವಾಗುವುದೆಂಬ ನಂಬುಗೆ ಬೆಂಬಿಡಿದ ಕತದಿಂ ॥೨೨॥

ಇಂತು ಪೂಜ್ಯರನಖಿಳರನು ನಲ ।
ವಾಂತು ನುತಿಸಿದ ಬಳಿಕೆ ಮಹಿಮಾ ।
ಕ್ರಾಂತಮಹಿತಪುರಾಣವಿದ ರಚಿಸಲ್ಕೆ ನಲ್ಪರಕೇ ॥
ಎಂತು ದೊರೆದುದು ನನಗದಾವ ಸು ।
ಶಾಂತಗುರುಗಳಿನೆಂಬುದನು ಸಲೆ ।
ನಾಂ ತಿಳಿಸಲೆಳಸುವೆನು ಸಂತರಿಗೊಂದು ಶುಭದಿನದೇ ॥೨೩॥

ಕಂಗೊಳಿಸುವವರಾದಿ(೧)ಮಠದೊಳ್ ।
ಮಂಗಳಾಕರರಾಗಿ ಬೆಳಗುವ ।
ಸಂಗಮೇಶ್ವರನಾಮದ ಸ್ವಾಮಿಗಳನುಜ್ಞೆಯೊಳು ॥
ತುಂಗಗುಣಿ ಶಿವಶಾಸ್ತ್ರಿ ಮತ್ಸಖ ।
ಪುಂಗವನನೊಡಗೊಂಡು ಪೋದೆನು ।
ಜಂಗಮೋತ್ತಮರವರ ಸಿರಿಯಡಿದಾವರೆಯ ಬಳಿಗೇ ॥೨೪॥

(೧) ಅವರಾದಿ ಎಂಬುವುದು ಬೆಳಗಾಂವ ಜಿಲ್ಹಾ ರಾಮದುರ್ಗ ತಾಲೂಕಿಗೆ ಸೇರಿದ ಒಂದು ಊರು.

ಪೋದುದಾಗಳೆ ದೂರಗಮನದೊ ।
ಳಾದ ಕಡುಬಳಲಿಕೆಯು ತನ್ನಹಿ ।
ಮೋದಯದ ಮಠದೊಡೆಯರಾ ಶ್ರೀಪಾದದರ್ಶನದೇ ॥
ಆ ದಯಾಘನರಲ್ಲಿ ಪಡೆದಾ ।
ಸಾದರದ ದಿವ್ಯಪ್ರಸಾದದೊ ।
ಳಾದ ವರಸುಖದಿರವ ಬಣ್ಣಿಸಲಿರವು ಶಬ್ದಗಳು ॥೨೫॥

ಮೋದದಿಂ ಸ್ವಾಮಿಗಳು ಬಳಿಕವ ।
ರಾದಿಯೆಂಬೀ ಕ್ಷೇತ್ರದೊಳ್ ಮಠ ।
ವಾದುದಾದಿಯಮದ್ಗುರೂತ್ತಮರಿಂದೆ ಪೂರ್ವದೊಳು ॥
ಆ ದಯಾಮಯರದ್ಭುತದ ಮಹಿ ।
ಮೋದಯದ ಚರಿತೆಯನು ಬರೆಯಿಸ ।
ಲಾದುದೀಶಪ್ರೇರಣೆಯು ನಮ್ಮಂತರಂಗದೊಳು ॥೨೬॥

ಇದು ನಿಮಿತ್ತಂ ಚರಿತೆಯದ ಬರೆ ।
ವುದಕೆ ನಿನ್ನನು ಕರೆಯಿಸಿದುದಿ ।
ನ್ನಿದರ ಮಾಳ್ಕೆಯೊಳನ್ಯ ಮಹಿಮರ ಮಹಿತಲೀಲೆಗಳಾ ॥
ಪದುಳದಿಂರಚಿಸುವ ಸುಶಕ್ತಿಯ ।
ದೊದಗಿದಧಿಕಾಯುಷ್ಯವಾಗಲಿ ।
ಚದುರನೇ ನಿನಗಾ ಫಲಾಹಾರೇಶ್ವರನ ಕೃಪೆಯಿಂ ॥೨೭॥

ಇಂತು ಕಿರುನಗೆವೆರೆಯೆ ಕರುಣಾ ।
ಸ್ವಾಂತದಿಂದೊಡಮೂಡಿಸಿದ ನಿ ।
ಶ್ಚಿಂತಮೂರ್ತಿಗಳಾ ಪರಕೆಯನೆ ಮಸ್ತಕದೊಳಾಂತು ॥
ನಾಂ ತೊಡಗಿದೆನು ಬರೆಯಲಿದನೆ ।
ನ್ನಂತರಂಗದೆ ಜಾನಿಸುತೆ ಶಿವ ।
ಶಾಂತತೇಜದ ತತ್ಫಲಾಹಾರೇಶಪದಯುಗವಾ ॥೨೮॥

ಪುಣ್ಯಗಂಗೆಯ ತುಂಬಿರಿಸಿದಾ ।
ಮಂಣಕಳಸವು ಪೂಜ್ಯಮಪ್ಪಂ ।
ತಿನ್ನು ತದ್ಗುರುವರರ ಚರಿತಾಮೃತವ ತುಂಬಿಸಿದಾ ॥
ನನ್ನ ಕರ್ಕಶವಿರಸಶಬ್ದೋ ।
ತ್ಪನ್ನ ಕವನದ ಪಾತ್ರೆಯಿದು ವರ ।
ಪುಣ್ಯಹೃದಯರ್ಗಾವಗಂ ಪೂಜಾರ್ಹಮೆನಿಸಿರಲಿ ॥೨೯॥

ಇದು ಸುಭಕ್ತಿಜ್ಞಾನವೈರಾ ।
ಗ್ಯದ ಫಲಾಹಾರೇಶ್ವರನ ಮಹಿ ।
ಮದ ಪುರಾಣವು ರಸಿಕಸಂಕುಲಕರ್ಣಭೂಷಣವು ॥
ಇದು ಸುಭಕ್ತಿಪ್ರಿಯರು ತಾವ- ।
ಭ್ಯುದಯನಿಶ್ರೇಯಸ್ಸುಗಳ ಪಡೆ ।
ವುದಕೆ ಸಾಧನವೆಂಬುದನು ನಂಬಿರಲಿ ಸಂತತವು ॥೩೦॥

ಆವ ಜಂಗಮನಾ ಸಮಾಧಿಯ ।
ಸೇವೆ ಗೈಯುತ್ತಿದುವರೆಗೆ ವರ ।
ಭಾವಿಕರು ಮನದಿಷ್ಟಸಿದ್ಧಿಯ ಪಡೆದು ಸುಖಿಸುವರೋ ॥
ಆ ವಿಮಳಶಿವಯೋಗಸಿದ್ಧನ ।
ಪಾವನದ ಚರಿತವಿದು ಶಿವಭ ।
ಕ್ತಾವಳಿಗೆ ಪಾರಾಯಣದ ಸದ್ಗ್ರಂಥವಾಗಿರಲಿ ॥೩೧॥

ಅದರೊಳೀ ಸಚ್ಚರಿತೆಯನು ಬರೆ ।
ವೋದುವೊರೆವಾಲಿಸುವಸಜ್ಜನ ।
ಕಾ ದಯಾವಾರಿಧಿ ಫಲಾಶನಯೋಗಿಪುಂಗವನು ॥
ಮೆದಿನೀಸ್ತುತ ನತಿಸುತಪ್ರಿಯ ।
ಸೋದರಾರೋಗ್ಯಾಯುರೈಶ್ವ ।
ರ್ಯಾದಿಗಳನೊಲಿದೀವನಾವಗಮಧಿಕಮೋದದೊಳು ॥೩೨॥

**॥ ಮುಗಿದುದು ॥**



ಓಂ ಶಿವಯೋಗೀಶಾಯನಮಃ

# ಒಂದನೆಯ ಸಂಧಿ

**ಸೂಚನೆ:**- ಪುಣ್ಯಪುರುಷರನೇಕರಿಗೆ ತಾಂ ।
ಮಾನ್ಯಜನ್ಮವನಿತ್ತು ವಿಶ್ರುತ ।
ಕನ್ನಡದ ನಾಡಿಂತು ಬಣ್ಣನೆವೆತ್ತು ರಂಜಿಸಿತು ॥

ಲೋಕಗಳ್ ಲಿಂಗಮಯವೆಂಬುದ ।
ಲೋಕದವರಳ್ತಿಯೊಳು ತಾವವ ।
ಲೋಕಿಸುತ್ತದ ಲಿಂಗಭಕ್ತಿಯೊಳೆಸೆಯಲೆಂದಜನು ॥
ಶ್ರೀಕರದಲಿಂಗಾಕೃತಿಯೊಳೀ ।
ಲೋಕಮಂ ರಚಿಸಿದನೊ ಎನೆ ಭೂ ।
ಲೋಕವಿದು ಗೋಲಾಕೃತಿಯೊಳೆಸೆಯುವುದು ಜಗವರಿಯೇ ॥೧॥

ಜಗದ ಜೀವನ ರಂಗಮಧ್ಯದೆ ।
ಬಗೆಬಗೆಯ ನಡೆನುಡಿಯುಡಿಗೆಗಳ ।
ಸೊಗಸಿನಿಂ ಶೋಭಿಸುವ ಬಹುವಿಧಜೀವನಟರುಗಳಾ ॥
ಬಗೆ ಸೆಳೆಯೆ ಕುಣಿಸುವನು ನಿರುತಂ ।
ನಗಜೆಯಾಣ್ಮನು ಸೂತ್ರಧಾರನು ।
ಬಗೆವಡೀ ಜಗದಮಿತನಾಟಕಕಥೆಗೆ ಕೊನೆಯುಂಟೇ ॥೨॥

ಇಂತು ಕುಣಿಯುವಸರ್ವಜೀವಿಗ ।
ಳಂತರಂಗದ ಶುದ್ಧಿಯಂ ತಾ ।
ವಾಂತು ತಮ್ಮಯ ಸೂತ್ರಧಾರನ ಶಿವನ ಕೃಪೆವಡೆದು ॥
ಶಾಂತಮಯರಾಗುವುದ ಬೋಧಿಪ ।
ಸಂತರಿಗೆ ತವರಾಗಿ ಧರಣೀ ।
ಕಾಂತೆಯಂತಃಪುರದವೋಲ್ ಮೆರೆಯುವುದು ಭಾರತವು ॥೩॥

ಮೂರು ದಿಶೆಗಂ ತನಗೆ ವಾರಿಧಿ ।
ಮೇರೆಯಾಗಿರಲುತ್ತರದ ದಿಶೆ ।
ಗಾ ರಜತಧವಳಂ ಹಿಮಾಲಯಭೂಧರಂ ಬೆಳಗೇ ॥
ಸಾರತರ ಗಂಗಾದಿನದಿಗಳ ।
ಚಾರುಗಿರಿವನಪತ್ತನಂಗಳ ।
ಭೂರಿ ಶೋಭೆಯನಾಂತು ಬಗೆ ಸೆಳೆಯುವುದು ಭಾರತವು ॥೪॥

## ಒಂದನೆಯ ಸಂಧಿ

ಇದು ಪುರಾತನಕಾಲದಿಂ ಸ ।
ತ್ಯದ ಸನಾತನಧರ್ಮದಾಶ್ರಯ ।
ವಿದು ಸದಾ ಪರಮಾತ್ಮತತ್ವವಿಮರ್ಶನದ ಬೀಡು ||
ಇದು ಸುಸಂಸ್ಕೃತಿಗಿಕ್ಕೆ ಕಲೆಗಳ ।
ಸದನವಧಿಕಪರಾಕ್ರಮದ ನೆಲೆ ।
ಯಿದು ಸಕಲಸಂಪದದ ನಿಲಯವು ಭರತಭೂತಲವು ||೫||

ಇದು ಮತಸ್ಥಾಪಕರ ತಾಯ್ಮನೆ ।
ಯಿದು ಮಹಾಋಷಿಕವಿಬುಧರಿಗೆಡೆ ।
ಯಿದು ಪರಾಕ್ರಮಭೂಷಣರ ಭೂಮಿಪರ ಜಸದಿರವು ||
ಇದು ಜಗಕೆ ತಾಂ ಮಾರ್ಗದರ್ಶಕ ।
ವಿದು ಸುಜೀವನಶಾಂತಿದಾಯಕ ।
ವಿದು ನಿಜಂ ನಿಜವೆಂದು ಭರತೋರ್ವಿಯನು ಬಣ್ಣಿಪರು ||೬||

ಪರಮಪುರುಷರ ಪಡೆದೆಸೆಯುವಾ ।
ಭರತಮಾತೆಯು ಭಕ್ತಿದೇವಿಗೆ ।
ವಿರಚಿಸಿದ ನಲ್ಗುಡಿಯೆನಿಪ ಕರ್ಣಾಟಕಾವನಿಯು ||
ಮೆರೆಯುವುದು ಗಿರಿವನನದೀಭಾ ।
ಸುರಪುರಗ್ರಾಮಾದಿಗಳಿಗಾ ।
ಗರವೆನಿಸಿ ತದ್ಭರತಭೂಮಿಯ ದಕ್ಷಿಣಾಶೆಯೊಳು ||೭||

ಹೃದಯವೆಳೆಯುವ ಪ್ರಕೃತಿಸೌಂದ ।
ರ್ಯದೊಳು ಚಿನ್ನದಗಣಿಗಳಾ ಸಂ ।
ಪದದೊಳಂ ಪಲವೆಡೆಯ ಜಲಪಾತದ ಸುಕೀರ್ತಿಯೊಳಂ ||
ಉದಿತಚಂದನವನಗಳಿಂ ಸಂ ।
ಮುದವ ನೀಡುವ ಗುಣದೊಳುರುವಂ ।
ಶದ ನೆಗಳ್ತೆಯೊಳೆಸೆಯುವಳು ಕನ್ನಡದ ಭೂದೇವಿ ||೮||

ಮೆರೆವ ಮೈಸೂರಿಳೆಯ ಕಾಡಿನ ।
ಕರಿಗಳುಂ ಭೀಮಾತಟದ ವರ ।
ತುರಗಗಳು ಮಲೆನಾಡತೇಗದಮರದ ತೇರುಗುಳು ||
ತರುಣಕನ್ನಡಿಗರ ಪದಾತಿಗ ।
ಳರಿಯೆ ಕನ್ನಡನಾಡದೇವಿಯೊ ।
ಳಿರುವ ಚತುರಂಗದ ಮಹಾಬಲದಂತೆ ರಾಜಿಪವು ||೯||

ಇತ್ತು ಸುಮಧುರಜೀವನವ(೧) ಸಲ ।
ಹುತ್ತೆ ಜನತೆಯು ಜಸವಡೆದ ಸ ।
ದ್ವೃತ್ತಕನ್ನಡನೃಪರ ವರಗುಣವಿದನು ಪೊರ್ದುತ್ತೇ ॥
ಪೆತ್ತು ಪೆರ್ದೊರೆ(೨)ವೆಸರ ಸಲೆ ಪರಿ ।
ಯುತ್ತಿಹವು ಕೃಷ್ಣಾದಿನದಿಗಳು ।
ಬಿತ್ತರದ ಕರ್ಣಾಟಕದ ಭೂತಲದೊಳನವರತಂ ॥೧೦॥

ಪಾಂಡುಸುತರಜ್ಞಾತವಾಸವ ।
ಕಂಡು ಹಿಡಿಯುವ ಕೌರವೇಂದ್ರನ ।
ದಂಡು ಹೂಡಿದ ಗೋಗ್ರಹಣಯುದ್ಧದೊಳು ವಿಜಯವನು ॥
ಪಾಂಡವರಿಗೊಲಿದಿತ್ತ ಕನ್ನಡ ।
ಗಂಡುಮೆಟ್ಟಿಂಬೊಳ್ವೆಸರನೊಳ ।
ಕೊಂಡು ಮೆರೆಯುವುದೆಮ್ಮ ಕರ್ಣಾಟಕದ ರಾಷ್ಟ್ರವಿದು ॥೧೧॥

ಕಟ್ಟಿ ಕಡಲನು ರಕ್ಕಸರ ಬೆ ।
ನ್ನಟ್ಟಿ ರಾಮನ ಕೈಗೆ ಗೆಲುವನು ।
ಕೊಟ್ಟ ಮಾರುತಿಮುಖ್ಯಕನ್ನಡವೀರಪುಂಗವರು ॥
ಮೊಟ್ಟಮೊದಲಿನ ಶೌರ್ಯಧೈರ್ಯದ ।
ಗಟ್ಟಿಗಳು ತಾವಾಗಿ ನಮ್ಮ ।
ಹುಟ್ಟುನಾಡೊಳು ನಟ್ಟಿಹರು ಬೆಳ್ಜಸದ ಕಂಬವನು ॥೧೨॥

ನಾಡಿನೇಳ್ಗೆಗೆ ಪಗೆಗಳನು ಹತಿ ।
ಮಾಡಿ ಮಡಿದಾ ಕಲಿತನವನೊಡ ।
ಮೂಡಿಸಿದ ಕನ್ನಡಜನಾಂಗದ ವೀರಗಲ್ಲುಗಳು ॥
ನಾಡಿನಗಲದೊಳೆಸೆವವವುಗಳ ।
ನೋಡಿದಿಂದಿನ ತರುಣರೆದೆಯೊಳು ।
ಮೂಡುವುದು ಹೊಸಹುರುಪು ತಮ್ಮಾ ಪೂರ್ವಜರ ನೆನೆದು ॥೧೩॥

ಧೀರಪತಿಗಳಿಗಕ್ಷತೆಯ ಕೊ ।
ಟ್ಟಾರತಿಯನೆತ್ತುತ್ತೆ ಬೀಳ್ಕೊಡ ।
ಲಾ ರಮಣರರಿಶಿರಗಡಿದು ಕದನದೊಳು ಕಡೆಗಳಿದು ॥
ಏರೆ ಸಗ್ಗವ ನಲವಿನಿಂ ಚಿತೆ ।
ಏರುತವರನು ಸೇರಿದೆಮ್ಮಯ ।
ವೀರಸತಿಯರ ಕಲ್ಗಳೆಸೆವವು ನಾಡಿನಗಲದೊಳು ॥೧೪॥

---
(೧) ಜೀವನ–ಉಪಜೀವಿಕೆ-ನೀರು। (೨) ಪೆರ್ದೊರೆ–ದೊಡ್ಡಅರಸು-ದೊಡ್ಡಹೊಳೆ ।

ನಿರಶನವ್ರತವೆಸಗಿ ದೇವ ।
ಸ್ಮರಣೆಯಿಂದಂತದೊಳು ತನುವಂ ।
ತೊರೆದ ನಿರುಪಮಧರ್ಮವೀರರ ನಿಷದಿಗಲ್ಲುಗಳು ॥
ಮೆರೆಯುತಂ ನಾಡಿನೊಳು ಹಿರಿಯರ ।
ಪರಮಧರ್ಮಪ್ರೇಮಮಂ ಬಿ ।
ತ್ತರದೆ ಮುಂದಿನ ಪೀಳಿಗೆಗೆ ಪೇಳುವುವು ದಿನದಿನದೇ ॥೧೫॥

ಮೆಲ್ಲಿತಾಗಿಹಮೇಣದೊಳು ಮನ ।
ದಲ್ಲಿ ಬಗೆದಂತೆಸಗುವಂತಿರೆ ।
ಕಲ್ಲಿನೊಳು ವಿಧವಿಧದಚಿತ್ರವ ಕೆತ್ತಿ ಕಟ್ಟಿದರ್ಾ ॥
ಸಲ್ಲಲಿತನವಮಂದಿರಗಳಿಗೆ ।
ಯಲ್ಲಿ ಕನ್ನಡಶಿಲ್ಪಕಲೆಗೆಣೆ ।
ಯಿಲ್ಲವೆಂದೊರೆಯುವುವು ನಿರುತಂ ನಾಡಿನಗಲದೊಳು ॥೧೬॥

ಶಾತವಾಹನರುಂ ಕದಂಬರು ।
ನೀತಿನಿಪುಣರು ಗಂಗರುಂ ವಿ ।
ಖ್ಯಾತರೆನಿಸಿದ ರಾಷ್ಟ್ರಕೂಟಚಳೂಕ್ಯಹೊಯ್ಸಳರು ॥
ಭೂತಲಸ್ತುತ ವಿಜಯನಗರದ ।
ಸಾತಿಶಯವಿಕ್ರಮದ ನೃಪರುಂ ।
ಪೂತಧರ್ಮಪ್ರಿಯರೆನಿಪ ಮೈಸೂರಭೂಭುಜರು ॥೧೭॥

ವಿಲಸಿತದ ವರವೀರಶೈವವ ।
ನೆಲದೆ ಪೆರ್ಚಿಸಿ ಜಸವನೊಂದಿದ ।
ಕೆಳದಿ ಕೊಡಗು ಸ್ವಾದಿ ಯಿಕ್ಕೇರಿಗಳ ಭೂವರರು ॥
ಕಲಿಗಳಾ ಕಿತ್ತೂರ ನೃಪರುಂ ।
ಬೆಳವಡಿಯ ಪೆಸರಾಂತಭೂಪರು ।
ತಿಳಿವೊಡಿನ್ನೆಗಮರಸುಗೈಯುವ ಪುಂಗನೂರವರು ॥೧೮॥

ಇವರೆ ಮೊದಲಾಗಿರ್ದ ವಸುಧಾ ।
ಧವರ ರಕ್ಷಣೆಗೊಂಡ ಕನ್ನಡ ।
ಭುವಿಯೊಡತಿಯಾ ಪೂರ್ವದಿತಿಹಾಸದ ಸುಕೀರ್ತಿಯನು ॥
ಕವಿ ಬುಧರು ಕಲಿಗಳು ಸುಭಕ್ತರು ।
ಶಿವಶರಣಾಚಾರ್ಯರುಂ ನವ ।
ನವಕಲಾವಿದರಾದಿಯಾದವರ್ಕೈದೆ ಬೆಳಗಿದರು ॥೧೯॥

ಒರೆವೆನೇನಿನ್ನ ಥಣಿಪೊಳಲಿನ ।
**ಮುರಘ**ನಾಮಕಯೋಗಿಚಂದ್ರಂ ।
ಸುರುಚಿರದ ಬಿದರಿಯ **ಕುಮಾರ**ಸುನಾಮ ಯೋಗಿವರಂ॥
ಮೆರೆವ ಮುಳಗುಂದದ **ಮಹಾಂತೇ** ।
**ಶ್ವರ**ನುಮಿನ್ನಿಳಕಲ್ಲನಗರದ ।
ಪರಮಪೂಜ್ಯ**ಮಹಾಂತ**ಶಿವಯೋಗಾಧಿನಾಯಕನು ॥೨೦॥

ಕಂತುಹರನಾ ಶಲಿವಡಿಯ **ಗುರು** ।
**ಶಾಂತ**ನಾಮಸ್ವಾಮಿಯುಂ ನಿ ।
ಶ್ಚಿಂತನೆನಿಸಿದ ಹೂಲಿಯಾ ಗುರು**ಸಂಗಮೇಶ್ವ**ರನು ॥
ಶಾಂತಮನನರಬಾವಿಪೊಳಲ**ಮ** ।
**ಹಾಂತ**ನಾಮಸ್ವಾಮಿ ದಾನದ ।
ನಂತಕೀರ್ತಿಯನಾಂತೆಸೆವ ಸಿರಸಂಗಿ **ಲಿಂಗ**ವಿಭು ॥೨೧॥

ಹಾನಗಲ್ಲ **ಕುಮಾರ** ಶಿವಯೋ ।
ಗಾನುಭವಿಯುಂ **ಘನಮಠಾರ್ಯಂ** ।
ಜ್ಞಾನನಿಧಿಯಾ **ಸರ್ಪಭೂಷಣ**ಯೋಗಿಪುಂಗವನು ॥
ಭೂನುತದ ಬಳ್ಳಾರಿಯಾ ವರ ।
ದಾನಿ **ಕರಡೀಶ್ವ**ರನು ತದ್ಗುರು ।
ಭಾನು**ಮರಿಯೋಗೀಂದ್ರನುಂ**ಕುಡತನಿಯ**ನಯನಾರ್ಯಂ**॥೨೨॥

ಈಶಸಮನರಬಾವಿ **ದುರುದುಂ** ।
**ಡೇಶನಾ** ಬಿಳ್ಳೂರ **ಗುರುಬಸ** ।
**ವೇಶ**ನಿನ್ನಂಕಲಿಗಿ**ಯಡವಿಸ್ವಾಮಿ** ಕೊಣ್ಣೂರಾ ॥
ದೋಷಹರ **ಕೆಂಪಾರ್ಯ**ಗುರು ನಿಡ ।
ಸೂಸಿ **ಶಿವಲಿಂಗೇಂದ್ರ**ನಥಣಿಗ ।
ಧೀಶನಾದಾ **ಮರುಳಸಿದ್ಧಸ್ವಾಮಿ** ಯತಿವರನು ॥೨೩॥

ಗರಗದಾ **ಮಡಿವಾಳ** ಯೋಗೀ ।
ಶ್ವರವರಂ ಹೊಸಹಳ್ಳಿ ಮಹಿಮಾ ।
ಪುರುಷನೆಂದೆನಿಸಿರ್ದ **ಬೂದಿಸ್ವಾಮಿ** ಹಾವೇರೀ ॥
ವಿರತಿಯಾಣ್ಮಂ **ಶಿವಬಸವ** ಸ ।
ದ್ಗುರುವರಂ **ಮೇಣ್** ಹಾಳಕೇರಿಯ ।
ಪರಮಪಾವನ**ನನ್ನದಾನೀಶ್ವ**ರಚರೋತ್ತಮನು ॥೨೪॥

ಮೆರೆಯುವೆಮ್ಮಿಗನೂರ **ಜಡೆಯಾ** ।
ವಿರತಿಯಾಣ್ಮನನಂತಪುರದಾ ।
**ಕರಿಬಸವ** ಚರಮೂರ್ತಿ ಗದುಗಿನ **ಕರಿಬಸವ** ಯಮಿಯೂ ||
ಸ್ಫುರಿಪ ಡಂಬಳ **ದರ್ಧನಾರೀ** ।
**ಶ್ವರನು** ಬಾಚಿನಹಳ್ಳಿ ಮಹಿಮಾ ।
ಕರ **ಮಹಾಂತಸ್ವಾಮಿ** ಕೊಪ್ಪಳ **ಗವಿಯಸಿದ್ಧ** ವಿಭೂ ||೨೫||

ಸುರುಚಿರದ ಹುಬ್ಬಳ್ಳಿ ಪುರದಾ ।
ದುರಿತಹರ **ಗುರುಸಿದ್ಧ** ಯೋಗಿನಿ ।
ಕರವರಂ ಸಾವಳಿಗಿ **ಶಿವಲಿಂಗಾ**ಖ್ಯಚರಪತಿಯು ||
ಮೆರೆವ ಕಮತಿಗಿ ಹೊಳಿಯ **ಹುಚ್ಚೇ** ।
**ಶ್ವರನು**ಮಾ ಸವದತ್ತಿ ಪೊಳಲಾ ।
ವಿರತವರ**ನಪ್ಪಯ್ಯ**ನೆಂಬ ಸ್ವಾಮಿಯುಂ ಬಳಿಕೇ ||೨೬||

ಕಾಮಹರನಾದಣ್ಣಿಗೇರಿ ।
ಸ್ವಾಮಿ**ಯೀಶ್ವರ**ನಾಮಕಂ ಜಿತ ।
ಕಾಮನೆನಿಸಿದ ತಿಪ್ಪೆಕೊಪ್ಪದ **ಮೂಕ**ಯತಿಪತಿಯು ||
ಭೂಮಹಿತ ಮಹಿಮೆಗಳ ತೋರು ।
ತ್ತಾ **ಮಹಾಲಿಂಗಾ**ಭಿಧಾನ ।
ಸ್ವಾಮಿ ತನ್ನಯ ಪೆಸರ ಪೊಳಲೊಳ್ ನೆಲಸಿ ಬೆಳಗಿದನು ||೨೭||

ವಿಲಸಿತದ ಸೊಲ್ಲಾಪುರದೆ ಸಲೆ ।
ನೆಲಸಿದಾ **ವೀರೇಶ** ಶರಣಂ ।
ಬಳಿಕೆ ವಾರದ **ಚೆನ್ನಬಸವ**ಸುನಾಮಕಂ ಶರಣಂ ||
ಕಲುಬುರುಗಿಯಾ **ಶರಣಬಸವಂ** ।
ತಿಳಿಯೆ ಕೊಣ್ಣೂರಿನ **ಶಿವಾರ್ಯ**ಂ ।
ಮಲರಹಿತನೆನಿಸಿರ್ದ ಬಾಗಿಲಕೋಟೆ**ಮಲ್ಲಾರ್ಯ**ಂ ||೨೮||

ಕೆಳದಿ ನಗರದ ಪಟ್ಟದಾ ಗುರು ।
ತಿಲಕ **ರೇವಣಸಿದ್ಧನು**ಂ ನಿ ।
ರ್ಮಳ ಕಲಾದಿಗಿ ಪಟ್ಟದಾ **ಗುರುಲಿಂಗ** ಸದ್ವಿಭು ತಾಂ ||
ಬಳಿಕೆ ಸಿಗ್ಗಾವಿಯ ಸುಪಟ್ಟದೆ ।
ಬೆಳಗುತಿರ್ದ **ಮಹಾಂತ** ಗುರುವುಂ ।
ಕಳೆಯನಾಂತುತ್ತೂರ **ಶಿವಲಿಂಗಾಖ್ಯ** ಶಿವಶರಣಂ ||೨೯||

ಎರಡನೆಯ ಪ್ರಭುವೆನಿಸಿ ಭಕ್ತರ ।
ಪೊರೆವ ಜಂಗಮಮೂರ್ತಿಯೆಡೆಯೂ ।
ರೆರೆಯನಾದಾ **ಸಿದ್ಧಲಿಂಗೇಶ್ವರನು** ಕನ್ನಡದಾ ॥
ಸರಳ ವಚನದೆ ಸರ್ವಶಾಸ್ತ್ರದ ।
ತಿರುಳ ವಿರಚಿಸಿಕೊಟ್ಟು ಕನ್ನಡಿ ।
ಗರ ನುತಿಗೆ ಪೊಕ್ಕಾದ **ನಿಜಗುಣಯೋಗಿ**ಪುಂಗವನು ॥೩೦॥

ರಸೆಯೊಳೊಪ್ಪುವ ಬಂಧನಾಳಿನ ।
**ವೃಷಭಲಿಂಗಸ್ವಾಮಿ** ಮತ್ತಂ ।
ಬಸವಮುಖ್ಯಪ್ರಮಥರಾ ಸತ್ಸಂಪ್ರದಾಯವನು ॥
ವಸುಧೆಯವರಿಗೆ ವಿಸ್ತರಿಸಿ ನ ।
ಲ್ಜಸವಡೆದು ಮೈಲಾರ ನಗರಿಯೊ ।
ಳೆಸೆಯುತಿರ್ದಾ **ಬಸವಲಿಂಗ**ಸುನಾಮ ಶಿವಶರಣಂ ॥೩೧॥

ಇನ್ನು ಸಿರಲೇಕಣ್ಣನಾ ಬಸ ।
ವಣ್ಣನೇ ಮೊದಲಾಗಿರುವ ಮು ।
ಕ್ಕಣ್ಣನಳ್ತಿಯ ಶರಣರೆಂಬುಜ್ವಲಿಪ ರತ್ನಗಳ ॥
ತನ್ನೊಡಲಕಡಲಿಂದೆ ಪುಟ್ಟಿಸಿ ।
ಪುಣ್ಯಕೀರ್ತಿಯ ಪಡೆದು ವಿಶ್ವಕೆ ।
ಮಾನ್ಯಳಾಗೆಸೆಯುವಳು ಕನ್ನಡಭೂಮಹಾಮಾತೆ ॥೩೨॥

ಅನುಭವದ ಗಣಿಯಿಂದೆ ತೆಗೆದಿ ।
ರ್ಪನಘವಚನಗಳೆಂಬ ರನ್ನಗ ।
ಳನು ಮನೋಮುದದಿಂದೆ ಶರಣರು ಸರ್ವಕನ್ನಡದಾ ।
ಜನರಿಗಾತ್ಮೋನ್ನತಿಯ ರಕ್ಷಾ ।
ಮಣಿಗಳಂ ಮಾಡಿರ್ಪರಿನ್ನೀ ।
ಜನಪದದ ವರಪುಣ್ಯವೇಂ ಘನವೋ ಧರಾತಲದೇ ॥೩೩॥

ಆದಿ ಪಂಪಾದಿಗಳ ರಸಮಯ ।
ವಾದ ಕಬ್ಬದ ಹೊಳೆಗಳಿಗೆ ನೆಲೆ ।
ಯಾದ ಕನ್ನಡ ವಾಙ್ಮಯಕ್ಷೇತ್ರದೆ ಹರೀಶ್ವರನಾ ॥
ಸ್ವಾದುಕವಿತಾಭಕ್ತಿಗಂಗಾ ।
ಹ್ರಾದಿನಿಯು ಹರಿಯುತ್ತೆ ಕನ್ನಡ ।
**ಮೇದಿನಿಯನೆ** ಪವಿತ್ರವೆಸಗುವುದೆಮ್ಮ ಪುಣ್ಯದೊಳು ॥೩೪॥

ಜನನದಿಂ ಕೊನೆವರೆಗೆ ದೇಹದೊ ।
ಳನವರತಮಾತ್ಮಸ್ವರೂಪದ ।
ಘನಪದದ ಶಿವಲಿಂಗಮಂ ಧರಿಸುವ ಸುಭಾಗ್ಯವಿದು ||
ಎನಿತೊ ಜನ್ಮದ ಪುಣ್ಯದಿಂದಂ ।
ಜನಿಸಿತೆಂದಾನಂದಪರವಶ ।
ರೆನಿಸಿದಗಣಿತ ಭಕ್ತರಿಗೆ ನೆಲೆಯಾದುದೀನಾಡು || ೩೫ ||

ಪಳ್ಳಿಗಳೊಳಂ ಪಟ್ಟಣಗಳೊಳ ।
ಗೆಲ್ಲಿನೊಡಿದೊಡಾವಗಂ ಪಣೆ ।
ಯಲ್ಲಿ ಭಸಿತವು ಕಂಠದೊಳ್ ಶಿವಲಿಂಗಧಾರಣವು ||
ಇಲ್ಲದವರೇ ಇಲ್ಲವೆಂಬೀ ।
ಸೊಲ್ಲೆ ಕರ್ಣಾಟಕದ ಜನಪದ ।
ದಲ್ಲಿ ಕಾಲಿಟ್ಟವರ ಬಾಯಿಂ ಬರುವುದನವರತಂ || ೩೬ ||

ತನುಮನೋಧನವಿತ್ತು ನಿರ್ವಂ ।
ಚನೆಯೊಳಾ ಗುರುಲಿಂಗಜಂಗಮ ।
ಕನಘಪಾದಾಂಬುಪ್ರಸಾದವ ಪಡೆಯುತವರಿಂದೆ ||
ಜನನಮರಣಾದಿಗಳ ಭಯಮಂ ।
ಗಣಿಸದೆಯೆ ಶಿವಸುಖಮಯದ ಜೀ ।
ವನದೆ ಭಕ್ತರು ಶೋಭಿಪರು ತತ್ಪುಣ್ಯಭೂಮಿಯೊಳು || ೩೭ ||

ಇಂತು ಭಾರತಭೂರಮೆಯ ಸೀ ।
ಮಂತರತ್ನದ ಶೋಭೆಯಂ ತಾ ।
ನಾಂತು ಬೆಳಗುವ ಕನ್ನಡದ ಧರೆ ಕಾಲಕಾಲದೊಳು ||
ಸಂತರಿಗೆ ಸದ್ಭಕ್ತರಿಗೆ ನಿ ।
ಶ್ಚಿಂತಶಿವಯೋಗೀಂದ್ರರಾದಿಯ ।
ನಂತಮಹಿಮರ್ಗಿತ್ತು ಜನ್ಮವ ಜಸದೊಳೆಸೆಯುವುದು || ೩೮ ||

**|| ಮುಗಿದುದು || ಒಟ್ಟು ಪದಗಳು || ೭೦ ||**



॥ ಓಂ ಚಿತ್ಕಲಾಸ್ವರೂಪಿಣೇನಮಃ ॥

# ಎರಡನೆಯ ಸಂಧಿ

**ಸೂಚನೆ:—** ಈಶರೂಪನು ತತ್ಫಲಾಹಾ ।
ರೇಶನೊಲಿಯುತಸೂಟಿ (೧) ವೆಸರಾ ।
ಭಾಸುರಗ್ರಾಮದ ಮಹೇಶ್ವರರಲ್ಲಿ ಜನಿಸಿದನು ॥

ಬಿತ್ತರದ ಕರ್ಣಾಟಕಾವನಿ ।
ಗುತ್ತರದ ಭಾಗದೊಳಗೆಸೆಯುವು ।
ದುತ್ತಮರ ವಾಸದೊಳಸೂಟಿಯ ಪೆಸರ ಗ್ರಾಮವದು ॥
ಚಿತ್ತಜಾರಿಸಮರ್ಚನಾದಿ ಸು ।
ಕೃತ್ಯದಿಂದಂ ಜನರ ಜೀವನ ।
ವೃತ್ತಿ ಸುಖಶಾಂತಿಗಳ ಬೀಡೆನಿಸಿರ್ಪುದಾ ನೆಲೆಯೊಳ್ ॥ ೧ ॥

ವೀರಶೈವರ ಧರ್ಮಗುರುಸಂ ।
ಸ್ಕಾರಕರ್ತೃಗಳಾಗಿ ರಾಜಿಪ ।
ವೀರಮಾಹೇಶ್ವರರ ಮಠವಾ ಊರ ಮಧ್ಯದೊಳು ॥
ಮಾರಹರವರಭಕ್ತಿತತ್ವದ ।
ಸಾರಮಂ ಬೋಧಿಸುವ ಗುರುಗಳ ।
ಚಾರುತರ ಶಾಲೆಯದೆನಿಸಿ ಬೆಳ್ಗಸದೊಳೆಸೆಯುವುದು ॥ ೨ ॥

ಆ ಮಠದ ವರವಂಶವಾರಿಧಿ ।
ಸೋಮನೆನಿಸಿದ ಮಲ್ಲಿಕಾರ್ಜುನ ।
ನಾಮದಾ ಗುರುಪುಂಗವನು ಶರಭಾಂಬೆಯೆಂದೆಸೆವಾ ॥
ಪ್ರೇಮಮೂರ್ತಿ ಸುಪತ್ನಿಯೊಡನಾ ।
ಗ್ರಾಮದಖಿಳಜನರ್ಗೆ ಜೀವ ।
ಸ್ವಾಮಿಯಾಗೊಪ್ಪಿದನು ನವದಾಂಪತ್ಯಧರ್ಮದೊಳು ॥ ೩ ॥

ಆ ಮಹೇಶ್ವರ ದಂಪತಿಗಳ ।
ಪ್ರೇಮಮಯ ಜೀವಿತಮುದಾತ್ಮ ।
ಸ್ವಾಮಿಯೆನಿಸಿರ್ದಿಷ್ಟಲಿಂಗದುಪಾಸನಾಕ್ರಮದಿಂ ॥
ಕಾಮವಿಷಯಕಸೌಖ್ಯಮಂ ನಿ ।
ಸ್ಸೀಮ ಶಿವಮಯ ಸುಖಮನಾಗಿಸು ।
ವಾ ಮಹತ್ವವ ಪರ್ಬಿಸಿದುದೂರೊಳಗೆ ಕೆಲದಿನದೇ ॥ ೪ ॥

---

(೧) ಅಸೂಟ ಎಂಬುವುದು ಧಾರವಾಡ ಜಿಲ್ಹಾ ರೋಣ ತಾಲೂಕಿಗೆ ಸೇರಿದ ಒಂದು ಊರು.

ಅಂಗದಿಂದ್ರಿಯವರ್ಗವವರೊಳ್ ।
ಲಿಂಗಮುಖವಾಗಿರ್ದ ಕತದಿಂ ।
ದಂಗಭೋಗಮೆ ಲಿಂಗಭೋಗಮದಾಗಿ ಪರಿಣಮಿಸೆ ॥
ಮಂಗಳಾಕರರಾಗಿ ಗೌರೀ ।
ಸಂಗಮೇಶ್ವರರಾಗಿ ಭಕ್ತರ ।
ಕಂಗಳುತ್ಸವಮೂರ್ತಿಗಳೆ ತಾವಾದರೇನೊರೆವೇಂ ||೫||

ಪರಮಪಾತಿವ್ರತ್ಯದೊಂದಾ ।
ಚರಣೆ ಶರಭಾಂಬಿಕೆಗೆ ಸಲ್ವುದು ।
ಪರವನಿತೆಯರ್ಗಾಗದೆಂಬಂತಾ ಸತೀಮಣಿಯು ॥
ಧರಿಪ ನಿಜಲಿಂಗಕ್ಕೆ ಪತಿಯೇ ।
ಹರಣವೆಂದರಿದಾತ್ಮವಲ್ಲಭ ।
ಚರಣಸೇವೆಗೆ ಸಲ್ಲಿಸಿರ್ದಳು ತನುಮನಂಗಳನು ||೬||

ಇಂತಿರುವ ತದ್ದಂಪತಿಗಳಿಗೆ ।
ಸಂತತಿಯ ಫಲವಿಲ್ಲದಿರೆ ತ ।
ಚ್ಚಿಂತೆಗೊಳಗಾಗಿರ್ದ ಶರಭಾಂಬಿಕೆಯದೊಂದಿರುಳೊಳ್ ॥
ಕಾಂತನಡಿದಾವರೆಗೆ ನಮಿಸಿದ ।
ನಂತರದೊಳೀ ತೆರದೊಳುಸುರಿದ ।
ಳಂತರಂಗದೊಳಡಗಿದಾ ಪುತ್ರಾಭಿಲಾಷೆಯನು ||೭||

ಪತಿಯೆ ನಿನ್ನ ಕೃಪಾಜಲದೆ ಪೋ ।
ಷಿತಮೆನಿಪ್ಪೆನ್ನಾತ್ಮವಲ್ಲರಿ ।
ಸುತಸುಮಂಗಳ ತಳೆಯುತಾವೋದವನು ನಿಮಗೀಯೇ ॥
ಕ್ಷಿತಿಯೊಳೊಗೆದುದು ಸಾರ್ಥಕಮದೀ ।
ಸ್ಥಿತಿಯು ನನಗಿನ್ನೆಂದಿಗಪ್ಪುದೊ ।
ನುತಚರಿತ್ರನೆ ಪೇಳಿ ಪರಿಹರಿಸೆನ್ನ ಚಿಂತೆಯನು ||೮||

ನಂಜುಗೊರಲನ ಕರುಣದಿಂದಂ ।
ಸಂಜನಿಸಿದಾ ತಾಯ್ತನದೆ ಸಲೆ ।
ರಂಜಿಸುವ ಪುಣ್ಯಾಂಗನೆಯರಿದಿರಲ್ಲಿ ಪೋಗಲ್ಕೇ ॥
ನಂಜಿನಂದದೆ ತನುವ ಸುಡುವೀ ।
ಬಂಜೆತನವನು ಪಡೆದಿರುವ ನಾ ।
ನಂಜಿ ತಲೆ ತಗ್ಗಿಸುವ ದುಸ್ಥಿತಿಯೆಂದು ಪೋಗುವುದು ||೯||

ಕೆಟ್ಟವಲ್ಲದ ನಡೆನುಡಿಗಳಿಂ ।
ಕೊಟ್ಟವರ ಕೊಂಡವರ ಮನೆಗಳಿ ।
ಗಿಟ್ಟು ಕೀರ್ತಿಯ ಕಲಶಮಂ ಪೆಸರಾಂತಪೆಣ್ಗಳೊಳಂ ॥
ಪುಟ್ಟದಿರೆ ತನುಜಾತರವರಾ ।
ಹೊಟ್ಟೆ ಪಾಪದ ಮೊಟ್ಟೆ ಯೆಂದೇ ।
ಕೊಟ್ಟ ಕೊಂಡವರುಭಯರುಂ ನಿಂದಿಸದೆ ಬಿಡರಲ್ತೇಂ ॥೧೦॥

ಮಕ್ಕಳಿಲ್ಲದವರ್ಗೆ ದುರ್ಗತಿ ।
ಯಕ್ಕುಮೆಂಬುದ ಕೇಳೆ ಕಿವಿಯ ।
ಲ್ಲಿಕ್ಕಿ ಶೂಲವ ತಿವಿದ ಮಾಳ್ಕೆಯ ಬಾಧೆಯುಂಟಾಗಿ ॥
ಉಕ್ಕುವನುಪಮ ದುಃಖದಿಂ ಮಿಗೆ ।
ಬಿಕ್ಕಿಯಳುವಂತಾಗೆ ಮಿಳ್ತುವ ।
ತೆಕ್ಕೆಗೊಳ್ಳದೆ ಲೇಸಸಿಪ ಮತಿಮೋರುವುದು ನನಗೇ ॥೧೧॥

ಎಂದು ತಾಸಿಂತೊರೆವಸಿತರೊಳೆ ।
ಬಂದು ಕಣ್ಣೀರ್ ಕೊರಳು ನಡುಕವ ।
ನೊಂದಿ ಮುಂದಿನ ಮಾತ ಸಿಲ್ಲಿಸೆ ಮೌನಮಂ ತಳೆದಾ ॥
ಸುಂದರಾಂಗಿಯ ಕೈಯ ಪಿಡಿಯುತೆ ।
ಕಂದಿದಾನನವೀಕ್ಷಿಸುತ್ತಿಂ ।
ತೆಂದು ಬೋಧಿಸತೊಡಗಿದನು ತನ್ಮಲ್ಲಿಕಾರ್ಜುನನು ॥೧೨॥

ಮುದದ ಮದುವೆಯದಾದ ದಿನದಿಂ ।
ದಿದುವರೆಗೆ ಲಿಂಗಾಂಗಿವರಧ ।
ರ್ಮದ ಸುಖಾಂಬುಧಿಯಲ್ಲಿ ಮುಳುಗಿದ ನಿನಗಮೊಬಗೆಯಿಂ ॥
ಒದಗಿತೇ ಚಿಂತೆಯಿದು ನನಗಿದ ।
ವೊದಲೆ ತಿಳಿಸದೆಯೊಳಗೊಳಗೆ ಕೂ ।
ಳ್ಗುದಿಯ ಕುದಿಯುತ್ತಿರ್ದುದುಚಿತವೆ ಚದುರೆ ಸೀನಾಗಿ ॥೧೩॥

ಆವ ಜನ್ಮದ ಫಲವೊ ಪುಟ್ಟಿದೆ ।
ವೀ ವಿಮಳತರ ವೀರಶೈವದೆ ।
ಭಾವಿಸಿದ ಬಯಕೆಗಳನೀಯುವ ದೇವರೇ ನಮ್ಮಾ ॥
ಭಾವ ಮಾನಸ ಕರಗಳೊಳ್ ತಾ ।
ನಾವಗಂ ನೆಲಸಿವನು ಕೃಪೆಯಿಂ ।
ಭಾವಸತ್ಪ್ರಾಣೇಷ್ಟಲಿಂಗಸುರೂಪಮಂ ಧರಿಸಿ ॥೧೪॥

ವನಿತೆ ಕೇಳ್ ಲಿಂಗಮಯವಾಗಿಸೆ ।
ತನುವ ಸಾರ್ಥಕವುಪ್ಪುದದು ತ ।
ತ್ತನುಜರಂ ಪಡೆವುದರೊಳಲ್ಲವು ವೀರಶೈವರ್ಗೆ ॥
ಜನನಿಯುಂ ಜನಕಂ ಸುಪತಿಯುಂ ।
ತನುಜಮಿತ್ರಾದಿಗಳುಮೆನಿಸು ।
ತ್ತನುದಿನಂ ಕರದಿಷ್ಟಲಿಂಗವು ನಲವನೀಯುವುದು ॥೧೫॥

ಲಿಂಗಮಂ ಧರಿಸಿರ್ದ ವನಿತೆಯ ।
ರಂಗವದು ವಂಧ್ಯಾದಿದೋಷವೆ ।
ಭಂಗವಡೆಯದು ಮಂಗಳಾಕರಮಾಗಿರುವುದೆಂಬಾ ॥
ಇಂಗಿತವ ತಿಳಿಯದೆಯೆ ಚಿಂತಾ ।
ಸಂಗದಿಂ ಕಂಗೆಟ್ಟುದೇಕೆಲೆ ।
ಮಂಗಳಾಂಗಿಯೆ ಬಿಡು ಮನದ ಮುಗುಡವನು ಕಡು ಜವದೇ ॥೧೬॥

ಮರಣವಾದಬಳಿಕ್ಕೆ ಸುತರಾ ।
ಚರಿಪ ಪೈತೃಕ ಕರ್ಮದಿಂದಂ ।
ಬರದು ದುರ್ಗತಿ ಪಿತೃಕುಲಕ್ಕೆಂದೊರೆಯೆ ಪರಮತವು ॥
ತೊರೆದು ತನುಜರ ಹಂಗನಾತ್ಮಾ ।
ಚರಣೆಯಿಂ ಲಿಂಗಾಂಗಸಮರಸ ।
ವರಸುಖವನಿಹದಲ್ಲಿ ಪಡೆಯೆಂಬುವುದು ಶಿವಮತವು ॥೧೭॥

ಆದೊಡಂ ಗುರುವಂಶವಿದು ಕೊನೆ ।
ಯಾದುವೆಮ್ಮಿಂದೆನಿಸದುದಕೆ ಸು ।
ತೋದಯವನೆಳಸುವುದು ಸಮುಚಿತಮಾದುದಿದಕಾಗಿ ॥
ಖೇದಗೊಳ್ಳುವುದೇಕೆ ಬೇಡಿದು ।
ದಾದರದೆ ಕೊಡುವಿಷ್ಟಲಿಂಗವ ।
ಮೋದದಿಂ ಪೂಜಿಸುತೆ ಪಡೆ ನಿನ್ನಿಷ್ಟಸಿದ್ಧಿಯನು ॥೧೮॥

ಎಂದೊರೆದ ಪತಿಯಂಘ್ರಿಗೆರಗುತೆ ।
ನಂದನನ ಪಡೆವಾಶೆ ಸಿದ್ಧಿಸಿ ।
ತಿಂದು ನಿಮ್ಮಯ ರೂಪದಿಂ ತಲ್ಲಿಂಗಮೂರ್ತಿಯೆ ತಾಂ ॥
ಬಂದು ನನಗೊಲಿದಿಂತು ಪರಸಿದ ।
ನೆಂದು ನಂಬಿದೆನಿನ್ನು ಮನಸಿಗೆ ।
ತಂದುಕೊಳ್ಳೆನು ಪುತ್ರಚಿಂತೆಯನೆಂದಳಾ ಸಾಧ್ವೀ ॥೧೯॥

ಬಳಿಕೆ ಭಕ್ತಿಸುಧಾಸರೋವರ ।
ದೊಳಗೆ ವಿಹರಿಪ ಹಂಸಮಿಧುನದ ।
ಚೆಲುವನೊಂದಿದ ದಂಪತಿಗಳವರಿಷ್ಟಲಿಂಗವನು ॥
ಸಲೆ ಸಮರ್ಚಿಸಿ ಪಾಡಿ ಪೊಗಳುತೆ ।
ನಲಿದು ತತ್ತೀರ್ಥಪ್ರಸಾದವ ।
ಕೊಳುತೆ ಬೇಡಿದರೀ ಬಗೆಯ ತನುಭವನ ಜನನವನು ॥೨೦॥

ಆವುದನು ಭಾವಿಸಿದೊಡವರೊಳ್ ।
ದೇವರೊಲಿಯುತೆ ತೋರ್ಪನೆಂಬನು ।
ಭಾವಿಗಳ ಮತವಿಡಿದ ಜೀವಿಗಳೆಲ್ಲರನು ಪೊರೆವಾ ॥
ಭೂವಿದಿತ ಮಹಿಮೆಯ ಸುಪುತ್ರನ ।
ನೀವ ಕೃಪೆದೋರುವುದು ನಮಗೆಲೆ ।
ದೇವದೇವನೆ ಭಕ್ತರಿಷ್ಟಪ್ರದನೆ ಶಂಕರನೇ ॥೨೧॥

ಕರಸರೋಜದ ಲಿಂಗಮೂರ್ತಿಯು ।
ಪರಮಭಕ್ತಿಯೊಳಿಂತು ಬೇಡು ।
ತ್ತಿರೆ ತದೀಶ್ವರನವರಿಗೊಲಿಯುತೆ ಕೆಲದಿನಕೆ ತನ್ನಾ ॥
ಪರತರದ ಚಿತ್ಕಳೆಯನಾ ಶಿವ ।
ಶರಣೆ ಶರಭಾಂಬಿಕೆಯ ಗರ್ಭದ ।
ಸುರುಚಿರದ ಗುಡಿಯೊಳ್ ಪ್ರತಿಷ್ಠೆಯ ಗೈದನೇನೊರೆವೆಂ ॥೨೨॥

ಒಳಗೆ ಲೋಕದ ಗುರುವಿರುವುದನು ।
ತಿಳಿಸುವಂತಿರೆ ಪುಣ್ಯವನಿತೆಯು ।
ಬಳೆವ ತೆಳ್ಪಸಿರ್ಪೈದೆ ತಳೆದುದು ತಾಂ ಗುರುತ್ವವನು ॥
ವಿಲಸಿತಾಂಗದೆ ಬೆಳ್ಪಳಗು ಮಿಗೆ ।
ಪೊಳೆದುದಾಕೆಯ ತ್ವಕ್ಕಿನೊಳೆ ಸಲೆ ।
ನೆಲಸಿರುವ ಚರಲಿಂಗದೊಳ್ ಲೇಪಿಸಿದ ಭೂತಿಯೆನೇ ॥೨೩॥

ಕಿರಿಯ ಮಗುವಾಗಿರ್ದೊಡೇನದು ।
ಪರಮಗುರು ತದಕ್ಷರಮುಂ ಪೊ ।
ತ್ತಿರುವ ಕತದಿಂದೀಸ್ಥಿತಿಯು ಸಮನಿಸಿದುದೆಂಬಂತೇ ॥
ಗುರುಸತಿಗೆ ಬೇಸರವು ನುಡಿಯೊಳ್ ।
ನಿರುಕಿಸುವ ಕಣ್ಗಳೊಳಗಲಸತೆ ।
ಚರಿಸುವುದರೊಳ್ ಮಂದತೆಯುಮೊಡಮೂಡಿದುದು ಬಳಿಕೇ ॥೨೪॥

ವರಲಲಾಟದೆ ಭಸಿತಮಂ ಮೇಣ್ ।
ಕೊರಳೊಳೈದೆ ಶಿವಾಕ್ಷಮಾಲೆಯ ।
ಕರದೆ ಲಿಂಗನ ಮನದೆ ಮಂತ್ರವ ಧರಿಸಿ ಗುರುಚರರಾ ॥
ಪರಮ ಪಾದಾಂಬುಪ್ರಸಾದವ ।
ಹರಿಸದಿಂ ತಾಂ ಕೊಳ್ವ ಬಯಕೆಯಿ ।
ಹಿರಿದೆನಿಸಿತಿನ್ನುಳಿದ ವಸ್ತುಗಳಾಶೆ ಬರಿದಾಯ್ತು ॥೨೫॥

ತುಂಬಿದಿಂದುವ ನಗುವ ಶಿವಕಳೆ ।
ದುಂಬಿದರ್ಭಕನೊಗೆವ ಮುದಮಂ ।
ತುಂಬಿ ಶರಭಾಂಬಿಕೆಯ ವಿಕಸಿತಮಾನಸಾಂಬುಜದೇ ॥
ತುಂಬಿದುದು ನವಮಾಸವೈಸಲೆ ।
ತುಂಬೆ ಸುಖವಾರಿಯದು ನಿಜಸತಿ ।
ಯಂ ಬಿಡದೆ ನಿರುಕಿಸುವ ತನ್ಮಾಹೇಶ್ವರನ ಕಣ್ಣೊಳ್ ॥೨೬॥

ಪುಟ್ಟಿದನು ಶಂಕರನ ತೇಜದ ।
ಗಟ್ಟಿಯಂತಿರ್ಪಾತ್ಮಜನು ಬೆ ।
ನ್ನಟ್ಟಿ ಬಂದಿರೆ ಶುಭಮುಹೂರ್ತವು ನೆರೆದ ವೃದ್ಧೆಯರು ॥
ನಟ್ಟ ದಿಟ್ಟಿಯೊಳಾ ಮಗುವ ಬಗೆ ।
ಮುಟ್ಟಿ ಪರಿಕಿಸಿ ತಾಯ ಪುಣ್ಯದ ।
ಹೊಟ್ಟೆಗಡಲಿನ ಮಾಣಿಕವಿದೆಂದೊಲಿದು ಪರಸುತಿರೆ ॥೨೭॥

ಜನಿಸಿದರ್ಭಕನಿಂದೆ ತಾಯ್ತನ ।
ವೆನಗೆ ಜನಿಸಿದುದೆಂದು ಮಿಗೆ ಸಂ ।
ಜನಿಪ ನಲವಿನ ಕಡಲೊಳೀಸಾಡುತ್ತೆ ಶರಭಾಂಬೇ ॥
ಮಿನುಗುವೀಶ್ವರತೇಜದಾ ವರ ।
ತನಯನಂ ಪರಿಕಿಸುವ ಕಣ್ಣೊಳ್ ।
ಜನಿಸಿ ಸುಖಜಲವೀಕ್ಷಿಸುತೆ ತಣಿವುದಕೆ ತಡೆಯಾಯ್ತು ॥೨೮॥

ಶಿವಮುಹೂರ್ತದೆ ಶಿವನ ಕೃಪೆಯಿಂ ।
ಶಿವನ ತೇಜದ ತನುಭವನು ಸಂ ।
ಭವಿಸೆ ಪರಮಾನಂದಪರವಶನಾದ ತತ್ಪಿತನಾ ॥
ಶಿವಮಯದ ಕಣ್ಮನಗಳೊಳಮು ।
ದ್ಭವಿಸುತಾತ್ಮಜನಮಳಮೂರ್ತಿಯು ।
ಶಿವನ ಕೀರ್ತಿಯ ಪಾಡಿ ಕುಣಿದಾಡಿಸಿದುದಾತನನು ॥೨೯॥

ಇದು ಮಠದ ಪೂರ್ವಜರು ಸಲೆ ಮಾ ।
ಡಿದ ಶಿವಾರ್ಚನೆಗಾದ ಫಲವಿ ।
ನ್ನಿದು ಸುಪುಣ್ಯದಸೂಟಿಯೂರವರಮರಭೂರುಹವು ॥
ಇದು ಪಡೆದ ತಾಯ್ತಂದೆಗಳ ಲಿಂ ।
ಗದ ಮಹಾಕಳೆಯೆಂದು ಕೊಂಡಾ ।
ಡಿದರು ಶಿಶುತೇಜದೊಳಗಚ್ಚರಿಗೊಂಡ ಗುರುಜನರು ॥೩೦॥

ಶಿವಗುಣರ್ ಜನನೀಜನಕರಾ ।
ಶಿವನ ತೇಜೋನಿಧಿಯ ಮಾಳ್ಕೆಯ ।
ಕುವರನಿಗೆ ಶಿವಲಿಂಗಧಾರಣಮುಖ್ಯಸಂಸ್ಕೃತಿಯಾ ॥
ತವೆ ರಚಿಸಿ ಶಿವನೆಂಬ ಶುಭನಾ ।
ಮವನೆ ನಲವಿಂದಿಟ್ಟರೀ ಲೋ ।
ಕವನೆ ಶಿವಮಯವಾಗಿಸಲಿ ಸುತನೆಂಬ ಹರಕೆಯೊಳು ॥೩೧॥

ಮಂಗಳಾಕರೆ ಮಾತೆ ಬಳಿಕೆ ಸು ।
ಮಂಗಲೆಯರೊಡಗೂಡಿ ತದ್ಭ್ರುವ ।
ಯಂಗಮದ ತನುಭವನ ಮಣಿದೊಟ್ಟಿಲೊಳು ಮಲಗಿಸುವಾ ॥
ಮಂಗಳೋತ್ಸವದಲ್ಲಿ ತೊಡಗೆ ಮ ।
ಹಾಂಗಣವು ಕಿರಿದಾಯ್ತು ನೆರೆವ ಜ ।
ನಂಗಳಿಗ ಹಿರಿದಾಯ್ತು ಮಂಗಳವಾದ್ಯಗಳ ರವವು ॥೩೨॥

ಜೋ ಮನೋಹರ ಭಾಗ್ಯನಿಧಿಯೇ ।
ಜೋ ಮುದಂಬುಧಿಪೂರ್ಣಶಶಿಯೇ ।
ಜೋ ಮಹಿತಪಿತೃಮಲ್ಲಿಕಾರ್ಜುನಕುಲನಭೋರವಿಯೇ ॥
ಜೋ ಮಹಾದೇವಾವತಾರವೆ ।
ಜೋ ಮಹಾಗುರುಚರರ ರೂಪವೆ ।
ಜೋ ಮಠದ ಮಾಣಿಕವೆ ಮಗುವೇ ಭಕ್ತಸುರತರುವೇ ॥೩೩॥

ಎಂದು ತೂಗುತೆ ತೊಟ್ಟಿಲವ ನಲ ।
ವಿಂದೆ ತತ್ಕಾರ್ಯವನು ಮುಗಿಸಿದ ।
ಸುಂದರಾಂಗಿಯರೆಲ್ಲರನು ಸತ್ಕರಿಸಿ ಕಳುಹುತ್ತೇ ॥
ತಂದೆ ತಾಯ್ಗಳ್ ಬಳಿಕೆ ತಮ್ಮಾ ।
ನಂದಕಂದವೆ ಆದ ಪುಣ್ಯದ ।
ನಂದನನ ಕಾಪಾಡುತಿರ್ದರು ಕಣ್ಣ ಕಾವಲಿಯಿಂ ॥೩೪॥

ಮಲೆಗೊಡುವ ಮೈದೊಳೆವ ಮಣಿದೊ ।
ಟ್ಟಿಲೊಳು ಮೆಲ್ಪಾಸುಗಳ ಪಾಸುವ ।
ಮಲಗಿಸುವ ನಲವೇರಿ ತೂಗುವ ಪಾಡಿ ಜೋಗುಳವಾ ॥
ಮಲಗೆ ಮಗು ನಗೆಮೊಗವ ನೋಡುತೆ ।
ನಿಲುವ ಶರಭಾಂಬಿಕೆಗೆ ತಾಂ ಮನೆ ।
ಗೆಲಸಗಳ ನೆನಪಾಗದೆನಿತೋ ಪೊತ್ತು ಗಮಿಸಿದೊಡಂ ॥೩೫॥

ಜನನಿಯೆದೆ ತಳಿರ್ವಾಸಿನೊಳ್ ತ ।
ಜ್ಜನಕನೊಳ್ದೊಡೆ ಗದ್ದುಗೆಯೊಳಂ ।
ನನಗೆ ತನಗೆಂದೆತ್ತಿಕೊಳ್ವರ ತೋಳತೊಟ್ಟಿಲೊಳಂ ॥
ದಿನದಿನಕ್ಕೆಳೆವೆರೆಯವೋಲ್ ವ ।
ರ್ಧನವನೊಂದುತ್ತೀಕ್ಷಿಪರ ಕ ।
ಣ್ಮನಕೆ ತಣ್ಪೆಳಗಿತ್ತು ತಣಿವೀಯುವನು ಗುರುಸುತನು ॥೩೬॥

ಜೊಲ್ಲಿನಭಿಷೇಕವನೆಸಗಿ ನಗೆ ।
ಮಲ್ಲಿಗೆಗಳನು ಮುಡಿಸಿ ಸಲೆ ಸುಲಿ ।
ಪಲ್ಲಿನಕ್ಷತೆಯಿಟ್ಟು ತೊವಲಿನ ನುಡಿಯ ನುತಿಗೈದು ॥
ಉಲ್ಲಸಿತ ತನುಭವನು ದಿನದಿನ ।
ದಲ್ಲಿ ತಾಯ್ಗೀ ತೆರದ ಪೂಜೆಯ ।
ಸಲ್ಲಿಸಲು ಮೋದಾಬ್ಧಿಯೊಳು ಮುಳುಗುವಳು ತಜ್ಜನನೀ ॥೩೭॥

ಮಾನ್ಯಚರಿತರ ಕೀರ್ತಿಯಂತೆ ಸು ।
ಪುಣ್ಯಹೃದಯರ ದಾನದಂತಿರೆ ।
ನನ್ನಿನಡೆನುಡಿಯುಳ್ಳವರ ಮಂದಿರದ ಸಿರಿಯಂತೇ ॥
ತನ್ನ ಭಕ್ತರ ಮೇಲಿರುವ ಶಿವ ।
ನುನ್ನತದ ದಯೆಯಂತೆ ನಲ್ಮೆಯ ।
ರನ್ನವಾ ಶಿಶು ಬೆಳೆಯುತಿರ್ದುದಸೂಟಿಮಠದೊಳಗೇ ॥೩೮॥

**॥ ಮುಗಿದುದು ॥ ಒಟ್ಟು ಪದಗಳು ॥೧೦೮॥**



॥ ಓಂ ಶ್ರೀಗುರುರೇವಣಸಿದ್ಧಾಯನಮಃ ॥

# ಮೂರನೆಯ ಸಂಧಿ



**ಸೂಚನೆ:—** ಬಾಲಲೀಲೆಯೊಳಾಂತು ತಾಂ ಗೋ ।
ಪಾಲನವ ನಿಜಲಿಂಗಪೂಜಾ ।
ಲೋಲನಾದನು ಶಿವಸುನಾಮದೊಳೆಸೆಯುವಾ ಸ್ವಾಮಿ ॥

ಗುರುಮಠಕ್ಕತಿಭಕ್ತಿಯಿಂದೈ ।
ತರುವ ಭಕ್ತಜನರ್ಗೆ ನಿಜಗುರು ।
ವರಸುತನ ಶೈಶವದ ಲೀಲೆಯ ನೆರೆ ನಿರೀಕ್ಷಿಸುತೇ ॥
ಹರಿಸದಿಂ ಪರವಶತೆಯೊವಗಲು ।
ಗುರುವೊರೆವ ಶಿವಲೀಲೆಗಳ ಸ ।
ಚ್ಚರಿತಕುರೆ ಕಿವಿಗೊಡಲು ಮರೆಯುವರವರು ದಿನದಿನದೇ ॥೧॥

ಮನೆಗೆಲಸದೊಳ್ ತಂದೆ ತಾಯ್ಗ ।
ಳ್ಗನಿತೊ ತಡೆಯಾಗಿಸುವ ತನುಭವ ।
ನನುದಿನಮೊಳವರಾಚರಿಪ ಲಿಂಗಾರ್ಚನದ ಪರಿಯಾ ॥
ಎಸಿತುಮಲುಗದ ದಿಟ್ಟಿಯಿಂ ನೆ ।
ಟ್ಟನೆ ನಿರೀಕ್ಷಿಸುತವರ ಮಾಳ್ಕೆಯೊ ।
ಳನಘಪೂಜೆಗೆ ತೊಡಗಿ ಪಡೆದರ್ಗೀವನಚ್ಚರಿಯಾ ॥೨॥

ಜನನಿ ಶರಭಾಂಬಿಕೆಯು ಲಿಂಗದೆ ।
ಮನವ ನಿಲಿಸಿರೆ ಲಿಂಗಮಧ್ಯದೆ ।
ತನುಭವನ ನಗೆಮೊಗದ ತೇಜವೆ ತನ್ನ ಕಣ್ದುಂಬಿ ॥
ಮಿನುಗೆ ಶಂಭುವೆ ಮಗನ ರೂಪದೆ ।
ಜನಿಸಿದನೊ ತನಗೆಂಬ ಶಂಕೆಗೆ ।
ಮನಗೊಡುತ್ತದನೊರೆಯೆ ಕೇಳಿದ ತತ್ಪತಿಯು ಬಳಿಕೇ ॥೩॥

ಕರಕಮಲಲಸದಿಷ್ಟಲಿಂಗವ ।
ನೆರೆ ಭಜಿಸಿ ಮಗನಾಗು ನನಗೆಂ ।
ದೆರೆದ ಶರಣೆಗೆ ಬಿಜ್ಜಮಾದೇವಿಗೆ ತದೀಶ್ವರನು ॥
ಕರುಣದಿಂ ಶಿಶುರೂಪವಾಂತಾ ।
ಪರಮಭಕ್ತೆಯ ತೊಡೆಯ.ತೊಟ್ಟಿಲೊ ।
ಳೊರಗಿ ಸುತಸುಖವಿತ್ತನೆಂದೊರೆಯುವಿನಮದ ಕೇಳಿ ॥೪॥

ನನಗಮಾ ಕರುಣಾಳು ಶಂಭುವು ।
ತನುಜನಾಗಿರವೇಳ್ಕು ಮಲ್ಲದೊ ।
ಡೆನಗೆ ಸುತರೂಪದೊಳು ತೋರನು ಲಿಂಗದೊಳಗೆಂದು ॥
ಮನದೆ ನಂಬುಗೆಗೊಂಡಳಾ ಗುರು ।
ಜನನಿ ಯಾಕೆಯ ನಂಬುಗೆಯು ಪುಸಿ ।
ಯೆನಿಪುದೇಂ ಶಿವಚಿತ್ಕಳೆಯೆ ತತ್ತನಯನಾದುದರಿಂ ॥೫॥

ಅಣ್ಣ ಬಾ ಮುಕ್ಕಣ್ಣ ಬಾ ಬಸ ।
ವಣ್ಣ ಬಾ ಹುಣ್ಣುವೆಯ ಸಸಿ ಬಾ ।
ಕಣ್ಣ ಪುಣ್ಯದ ಮೂರ್ತಿಬಾರೈ ಚೆನ್ನಿಗನೆ ಬಾರಾ ॥
ನನ್ನಿ ನಲ್ಮೆಯ ತವರೆ ಬಾರೈ ।
ನನ್ನ ತೊಡೆ ನಲ್ಗದ್ದುಗೆಯನೇ ।
ರಿನ್ನೆನುತೆ ನಿಜಮಾತೆ ಕರತಾಡನದೆ ಕರೆಯುತಿರೇ ॥೬॥

ಆಡೆ ಹಣೆಯೊಳಗರಳೆಲೆಯು ತೂ ।
ಗಾಡೆ ಕಿವಿಯೊಳ್ ಕುಂಡಲಂಗಳ್ ।
ಮಾಡುತಿರೆ ಸಪಿಸರವ ಕಾಲ್ಗೆಜ್ಜೆಗಳು ನಗೆಮೊಗದೇ ॥
ನೋಡಿ ಕುಣಿಯುತೆ ಬರಲು ಮಗು ಮುದ ।
ಗೂಡಿ ಬರಸೆಳೆದಪ್ಪಿ ಮುದ್ದಿಸಿ ।
ನೀಡುವಳು ತೊಡೆಗದ್ದುಗೆಯನಾ ಸುತಮಹೇಶ್ವರಗೇ ॥೭॥

ಇಂತು ವರ್ಷಚತುಷ್ಟಯದ ಪ ।
ರ್ಯಂತರಂ ತದ್ಬಾಲಲೀಲಾ ।
ನಂತಸುಖಶರಧಿಯೊಳಗೀನಾಡುತ್ತೆ ಪಡೆವವರು ॥
ಕಂತುರಿಪುವಂ ಮೊದಲಿನಿಂ ಮಿಗಿ ।
ಲಾಂತಭಕ್ತಿಯೊಳರ್ಚಿಸುತೆ ನಿ ।
ಶ್ಚಿಂತರಾದರು ಭಕ್ತಚಿಂತಾಮಣಿಗಳವರುಗಳು ॥೮॥

ಶಿವನೊಲುಮೆಯಿಂ ವಿಮಳವಿದ್ಯಾ ।
ನಿವಹಮುಮನೆಳೆದೀಯುವೋಂಕಾ ।
ರವಿಲಸಿತದ ಷಡಕ್ಷರವನೈದನೆಯ ವರ್ಷದೊಳು ॥
ಶಿವಸಮಾಖ್ಯಸುತಂಗೆ ಬರೆದೋ ।
ದುವುದ ಕಲಿಸುತೆ ವಿದ್ಯೆಗಾರಂ ।
ಭವ ನೆಗಳ್ದರ್ ತಂದೆ ತಾಯ್ಗಳದೊಂದು ಶುಭದಿನದೇ ॥೯॥

ಆದರದೆ ನಿಜಪಾಠವನು ತಾ ।
ನೋದಲೊರ್ಮೆಯೆ ಬಳಿಕೆ ಹೃದ್ಗತ ।
ವಾದುವೆಂದದನೊಪ್ಪಿಸುತ್ತಿರೆ ಬಾಲಗುರುವರನು ॥
ಓದುವೋರಗೆಯೊಳ್ಗವರರುಂ ।
ಓದಿಸುವ ಜಾಣೋಜರುಂ ಬುಧ ।
ರಾದ ತದ್ಗ್ರಾಮದವರುಂ ವಿಸ್ಮಯವನೊಂದಿದರು ॥೧೦॥

ಪಡೆದವರ ಕಡುಮುದದೊಡನೆ ತ ।
ನ್ನೊಡನೆ ಕಲಿವರ ನೇಹದೊಡನುರೆ ।
ಸಡಗರದೆ ಬೋಧಿಸುವ ಗುರುಗಳ ವಿಸ್ಮಯಗಳೊಡನೇ ॥
ಪಡೆದ ಸದ್ವಿನಯಾದಿ ಗುಣಗಳ ।
ಗಡಣದೊಡನಾ ಸುತನ ವಿದ್ಯೆಯು ।
ನಡೆ ಬಳೆದು ತದ್ಭಕ್ತಜನಹೃದಯಾಬ್ಜವರಳಿಸಿತು ॥೧೧॥

ಕನ್ನಡದ ಭಾಷೆಯೊಳೆ ಬೇಕಾ ।
ದುನ್ನತದ ವಿದ್ಯೆಗಳನೆಲ್ಲವ ।
ಮಾನ್ಯನಾದಾ ಬಾಲನೊಂದೆರಡಬ್ದದೊಳೆ ಕಲಿತು ॥
ಕನ್ನಡದ ಭಾರತಿಯು ರನ್ನದ ।
ಕನ್ನಡಿಯೆ ತಾನಾಗೆ ಭಕ್ತರು ।
ಧನ್ಯತೆಯ ನೊಂದಿದರು ಜಾಣ್ಮೆಗೆ ತಮ್ಮ ಗುರುಸುತನಾ ॥೧೨॥

ಕಳೆದು ಮೂರು ಮಲಂಗಳನು ಶಿವ ।
ಕಳೆಯ ವಿಕಸಿತಗೊಳಿಪ ದೀಕ್ಷೆಯ ।
ನಲವಿನಿಂ ಗುರುಜನರು ಮಾಡಿಸೆ ವಿಹಿತ ಕಾಲದೊಳು ॥
ಹೊಳೆದನಾ ಸುಕುಮಾರನೊರ್ಮೆಗ ।
ದಳೆದ ಗುಹನಂತರಿವೊಡಾರು ।
ಸ್ಥಲದ ಷಡ್ವಿಧಭಕ್ತಿಮಾತೆಯರಣುಗನಾದುದರಿಂ ॥೧೩॥

ಏನೊರೆವೆನಸಮಾನದೀಕ್ಷಾ ।
ಶಾಣದಿಂ ಸಂಸ್ಕರಿಸಿದಾ ಗುರು ।
ಸೂನುವೆಂಬ ಸುರತ್ನದದ್ಭುತ ತೇಜದುನ್ನತಿಯಾ ॥
ಕಾಣಲೊಡನಾತನ ಮನೋಹರ ।
ದಾನನವ ತತ್ಪಾದಭಕ್ತಿಗ ।
ಧೀನರಾಗುತೆ ನಮಿಸಿ ನುತಿಸುತೆ ನಿಲ್ವರೂರವರು ॥೧೪॥

ಭಕ್ತಿಮಾತೆಗಧೀನನಾಗಿ ಗು ।
ರೂಕ್ತಿಯಂತೆ ಶಿವಾರ್ಚನೆಯನನು ।
ರಕ್ತಿ ಮಿಗೆ ಮಾಳ್ಪೊಂದು ಕಜ್ಜಕೆ ಮಾರಿ ಮಾನಸವಾ ।
ರಕ್ತಿಯಿಲ್ಲದೆ ಲೋಕಸುಖದೊಳು ।
ಮುಕ್ತಿರಮೆಯೊಡಗೂಡುವಧಿಕಾ ।
ಸಕ್ತಿಯಿಂ ಶಿವಯೋಗಶಕ್ತಿಯ ಪಡೆಯ ತೊಡಗಿದನು ||೧೫||

ದಿನದಿನದ ಪೂಜಾಸಮಯದೊಳ್ ।
ಮನಕೆ ಶಾಂತಿಯನೀವ ನಿರ್ಜನ ।
ವನದೆಡೆಗಳಿಗೆ ಪೋಗಿ ಮಜ್ಜನಮುಖ್ಯಕೃತಿಗೈದು ॥
ಅನುಗುಣಾಸನದಲ್ಲಿ ಕುಳ್ಳಿ ।
ರ್ದನಘಲಿಂಗಾರ್ಚನೆಯ ನೆನಗುವ ।
ಘನಸುಖದೆ ಮುಳುಗುತ್ತೆ ಮರೆವನು ಭೋಜನಾದಿಗಳ ||೧೬||

ಗುರುಸುತಾತ್ಮ ಕ್ಷೇತ್ರದೊಳಗಂ ।
ಕುರಿಸಿದಾ ಶಿವಭಕ್ತಿವಲ್ಲರಿ ।
ಯೆರೆದ ಲಿಂಗೋಪಾಸನಾಮೃತದಿಂ ದಿನಕ್ರಮದೇ ॥
ನೆರೆ ಬೆಳೆದು ಪಲ್ಲವಿಸಿ ಭಕ್ತೋ ।
ತ್ಕರದ ತಣಿವಾನಂದಗಂಧವ ।
ಧರಿಸಿದಾಶೀರ್ವಾದಸುಮಗಳ ತಳೆಯ ತೊಡಗಿದುದು ||೧೭||

ಮೆಲ್ಲಮೆಲ್ಲನೆ ಬೇಡಿದುದ ಕೊಡ ।
ಬಲ್ಲ ಶಕ್ತಿಯು ತಮ್ಮ ಗುರುಸುತ ।
ನಲ್ಲಿ ಮೂಡಿಮುದರಿದ ಭಕ್ತರು ತಮ್ಮ ಮನೆಗಳಿಗೇ ॥
ಉಲ್ಲಸಿತಮನರಾಗಿ ಕರೆದೊ ।
ಯ್ದಲ್ಲಿ ಪೂಜಿಸಿ ಬೇಡಿ ಬಯಸಿದು ।
ದೆಲ್ಲವನು ಪಡೆವೊಂದು ರೂಢಿಯದಾದುದೂರೊಳಗೇ ||೧೮||

ಇರನು ಮಠದೊಳಗಿತ್ತ ವಸನವ ।
ಧರಿಸನೂಟಕೆ ಕರೆಯೆ ಜನನಿಯು ।
ಬರದೆ ತದ್ಗ್ರಾಮದ ಜನಂಗಳ ಮನೆಗಳೊಳವೊಕ್ಕು ॥
ಕರಕೆ ಸಿಕ್ಕ ಸುವಸ್ತುಗಳ ಕೊಂ ।
ಡೆರೆದವರ್ಗೀಯುತ್ತೆ ನಗೆಯಿಂ ।
ಚರಿಸುವೊಂದಾಟದೊಳೆ ಕಾಲವ ಕಳೆವನಾಸುತನು ||೧೯||

ಬಾಲಶಿವಯೋಗಿಯ ಮನೋಹರ ।
ಲೀಲೆಗಳನಚ್ಚರಿಯೊಳೀಕ್ಷಿಪ ।
ಕಾಲದೊಳು ಮನೆಗೆಲಸಗಳ ಮರೆಯುತ್ತಲೂರವರು ॥
ಶೂಲಧರನವತಾರವೀ ಮಹಿ ।
ಮಾಲಯನೊಳಾಯ್ತೆಂದು ನಂಬು ।
ತ್ತೋಲಗಿಸಿ ಪೊಗಳುತಿರೆ ದಿನದಿನದಲ್ಲಿ ತಾಂ ಬಳಿಕೇ ॥೨೦॥

ನೆರೆದ ಹನ್ನೊಂದನೆಯ ವರ್ಷದ ।
ಹರೆಯದೊಳು ತದ್ಗುರುಕುಮಾರನು ।
ಧರಿಸಿ ವಿರತಿಯ ಮನಗೊಡದೆ ತಾನಾವ ಕಾರ್ಯದೊಳಂ ॥
ತುರುವ ಕಾಯುವ ಕಾಯಕದೆ ಬಗೆ ।
ಯಿರಿಸೆ ಪಡೆದವರೂರುಜನರುಂ ।
ಗುರುಪದಕ್ಕಧಿಕಾರಿಗಿದು ಸರಿಯಲ್ಲವೆಂದೆರೆಯೇ ॥೨೧॥

ಭೂತಪತಿತನುತೇಜವೆಂಬ ॥
ಖ್ಯಾತಿಪಡೆಯುತೆ ಸರ್ವಜೀವರ ।
ಭೂತಮುಖ್ಯಭಯಂಗಳನು ಕಳೆಯುತ್ತೆ ಧರಿಪರ್ಗೇ
ಭೂತಿದಾಯಕಮೆನಿಸಿ ಮೆರೆವ ವಿ ।
ಭೂತಿಗೈಸಲೆ ಜನ್ಮವಿತ್ತ ಪ್ರ ।
ನೀತೆಯಾ ಗೊಮಾತೆಯಾಕೆಯ ಸೇವೆಯೇಂ ಕಿರಿದೇ ॥೨೨॥

ಭರತಭೂತಲದಲ್ಲಿ ಪಾವನ ।
ತರಮುನೀಶ್ವರರುಂ ಮಹಿತ ಭೂ ।
ವರರೆ ಮೊದಲಾಗಿರ್ಪವರು ಗೋಸೇವೆಯಂಗೈದು ॥
ನೆರೆಪಡೆದರಿಷ್ಟಾರ್ಥವೆಂಬಾ ।
ಚರಿತೆಗಳ ಕೇಳ್ದರಿದ ನಿಮಗಿದು ।
ಸರಿಯೆನಿಸದೆಂದೊಪ್ಪಿಸುತೆ ಸರ್ವರನು ಗುರುಸುತನು ॥೨೩॥

ತನಗೆ ಕಾಯಕವಾಗೆ ಗೋರ ।
ಕ್ಷಣವೆ ಮಠದಲ್ಲಿರ್ಪ ತುರುವಿಂ ।
ಡನಿತನೊಡಗೊಂಡಡವಿಗೈತಂದಲ್ಲಿ ಹಸುರಾಗಿ ॥
ಮಿನುಗುತಿರ್ಪೆಳೆವುಲ್ಲ ಮೇಯಿಸಿ ।
ತಣಿಯೆ ಸವಿನೀರ್ಗುಡಿಸಿ ತಣ್ಣೆಳ ।
ಲಿನೊಳು ಮಲಗಿಸಿ ಮೈಯನುಜ್ಜುವ ಕಜ್ಜವನು ಮುಗಿಸಿ ॥೨೪॥

ತಿಳಿಗೊಳದೆ ಮಜ್ಜನವಗೈಯು ।
ತ್ತಲರ್ದ ಪೊಸಪೂವಾಯ್ದು ಬಾಲಕ ।
ನೆಲೆವನೆಯೊಳೊಂದರೊಳು ಕುಳಿತು ಶಿವಾರ್ಚನೆಯ ನೆಸಗಿ ॥
ನಿಲಿಸಿ ಕರಪೀಠನ್ನ ಲಿಂಗಮೊ ।
ಳಲುಗದಂತಿರೆ ದಿಟ್ಟಿಯನು ತಾಂ ।
ತಳೆದು ವರಲಿಂಗಾಂಗಯೋಗದ ಸಮರಸದ ಸುಖವಾ ॥೨೫॥

ಗಳಿತಮಾದೊಡಮೆನಿತೊ ಕಾಲಂ ।
ಚಲಿಸದಂತೆಯೆ ಕುಳಿತುಬಿಟ್ಟಿರೆ ।
ಬಳಿಕೆ ಮಲಗಿದ ತುರುಗಳೆದ್ದೈತರುತಮೆಲೆವನೆಯಾ ॥
ಬಳಸಿ ನಲ್ಬನಿಗೈದು ತಮ್ಮಯ ।
ಕೆಳೆಯನಂ ಕಡುನೇಹ ದಿಟ್ಟಿಯೊ ।
ಳೆಳೆಯಲಾ ಸಮಯದೊಳು ಯೋಗಸಮಾಧಿಯುಳಿಯುವನು ॥೨೬॥

ಎಳೆತನದೊಳೇ ಸಿದ್ಧಿಸಿದ ನಿ ।
ಶ್ಚಲದ ಶಿವಯೋಗದ ಸುಸೌಖ್ಯದೆ ।
ಪುಳಕಿತಾಂಗನು ಗುರುಸುತನು ಗೋವುಗಳನೊಡಗೊಂಡು ॥
ನಿಳಯಕೈತರುವನಿತರೊಳು ಕ ।
ತ್ತಲೆಯು ಕವಿವುದ ಕಂಡು ನೀಂ ತುರು ।
ಗಳನು ಕಾವುದು ಬೇಡ ಸಾಕಿನ್ನೆಂದು ಶರಭಾಂಬೇ ॥೨೭॥

ಬಗೆಬಗೆಯ ಸವಿನುಡಿಗಳಿಂದಂ ।
ಮಗನ ಮೈದಡವುತ್ತೆ ತಿಳುಪಲು ।
ನಗೆಯೊಳಾ ಶಿವಮೂರ್ತಿ ತಾಯಡಿದಾವರೆಗೆ ನಮಿಸಿ ॥
ಮುಗಿದ ಕೈಗಳೊಳಮ್ಮ ಕತ್ತಲೆ ।
ಯೊಗೆವುದಕೆ ಮೊದಲೈತರುವೆನೀ ।
ಬಗೆಯ ದುಗುಡವಿದೇಕೆ ಕೇಳ್ ನಾಂ ಗೈವ ಪೂಜೆಯೊಳು ॥೨೮॥

ಮಿಗೆ ಸುಸೌಖ್ಯಮದಾಗೆ ನಾಂ ಪಗ ।
ಲಗಲದೊಳು ಜಾನದೊಳು ಕುಳಿತೆನು ।
ನಗಜೆಯಾಣ್ಮನ ರೂಪು ಕಣ್ಣೊಳೆ ಕಟ್ಟಿದುದರಿಂದೇ ॥
ಸೊಗಮೆನಿಸುವುದು ವನದೊಳೆನಗೈ ।
ಮೊಗನ ಪೂಜೆಯು ತಾಯೆ ಕರುಣದೊ ।
ಳಗಲಿಸದಿರೀ ತುರುಗಳನು ರಕ್ಷಿಸುವ ಕೃತಿಯಿಂದೇ ॥೨೯॥

ಇಂತು ಬೇಡಿದ ಮಗನ ತಿಳಿನುಡಿ ।
ಗೆಂತೊ ಸಂತಸವಾಂತು ದಿನದಿನ ।
ದಂತೆ ಜನನಿಯು ಕಳಿಸುತಿರೆ ಗೋರಕ್ಷಣದ ನೆವದೇ ॥
ಅಂತಕಾಂತಕನರ್ಚನೆಯ ನಲ ।
ವಾಂತು ಮಾಡುವ ಕೃತಿಗೆ ಸಲಿಸಿದ ।
ನಂತರಂಗವನೇನೊರೆವೆನಾ ಬಾಲಕನ ಪರಿಯಾ ॥೩೦॥

ದಿನದಿನದ ಲಿಂಗಾರ್ಚನೆಯು ಹಿರಿ ।
ದೆನಿಸೆ ತತ್ಫಲವಾಗಿ ತನ್ನ ಯ ।
ತನುವಿನೊಳಗಲ್ಲದೆಯೆ ಮನದೊಳ್ ದೃಷ್ಟಿಮಧ್ಯದೊಳಂ ॥
ಮಿನುಗತೊಡಗಿರಲಿಷ್ಟಲಿಂಗಮ ।
ದನುಪಮಗೆ ಗುರುಸುತಗೆ ನಮಸಿಸಿ ।
ತನುಭವವು ಶಿವಲಿಂಗಮಯವೀ ಸಕಲಜಗವೆಂದು ॥೩೧॥

ಬಳಸಿರುವ ತರುವಿಂಡಿನೊಳ್ ವನ ।
ದೊಳಗೆಸೆವ ಗಿಡುಬಳ್ಳಿ ಪೊದೆಯೊಳ್ ।
ಸುಳಿವ ಮೃಗಖಗಕುಲದೊಳಂ ಶಿವಲಿಂಗರೂಪಮದೇ ॥
ಹೊಳೆದುದಾ ಮಹಿಮಾತ್ಮ ಬಾಲಂ ।
ಗೆಳೆವರೆಯದೊಳೆ ನೋಡೆ ಶಿವಚಿ ।
ತ್ಕಳೆಯೆ ವ್ಯೈವೆತ್ತವನೊಳಿಂತಾಗುವುದಿದಸವಳವೇಂ ॥೩೨॥

ಬರದೆ ದಿನದಿನದಂತೆ ವನದ ।
ಲ್ಲಿರುತಮೊಂದಿರುಳಲ್ಲಿ ತಾಂ ಪುರ ।
ಹರಸಮರ್ಚನೆಯಲ್ಲಿ ಸರ್ವವ ಮರೆತು ಕುಳಿತಿರಲು ॥
ತೆರಳ್ದು ತತ್ಕಾನನಕೆ ಭಕ್ತ ।
ರ್ವೆರಸಿ ಜನನೀ ಜನಕರಾ ಸುತ ।
ನಿರವನೀಕ್ಷಿಸಿ ಸರ್ವರುಂ ಬೆರಗಾಗುತಾ ಬಳಿಕೇ ॥೩೩॥

ವಿಲಸಿತದ ಕರತಲದ ಲಿಂಗವ ।
ನಲುಗದೀಕ್ಷಿಸುವಕ್ಷಿಯುಗದಿಂ ।
ಗಲಿತಮಾದ ಸುಖಾಂಬುಬಿಂದುಗಳಿಂದ ನಾಂದೊಡಲೊಳ್ ॥
ಪುಲಕವೆಸೆದಿರೆ ಜ್ಞಾನದೊಳ್ ಸಲೆ ।
ಕುಳಿತ ಮಗನನು ಕಂಡ ಪಡೆದವ ।
ರಲಸದಂಬಕಗಳಿಗೆ ಸಾಕೆನಿಸದಿರೆ ನಿರುಕಿಪುದು ॥೩೪




ಶ್ರೀ ಬಾಲತಪಸ್ವಿ ಫಲಾಹಾರೇಶನು ಗೋರಕ್ಷಣ ನೆವದಿಂದ ಅಡವಿಗೆ ಹೋಗಿ ಅಲ್ಲಿ ಲಿಂಗಾನಂದ ಪರವಶನಾಗಿ ಕುಳಿತದ್ದು.

ಓಂ ಜಾಲಿಹಾಳರಾಜಪೂಜಿತಾಯನಮಃ

## ನಾಲ್ಕನೆಯ ಸಂಧಿ



**ಸೂಚನೆ:**– ಜಾಲಿಹಾಳಿಗೆ ಪೋಗಿ ತಾಂ ಶ್ರೀ ।
ಶೈಲಯಾತ್ರೆಗೆ ತೆರಳಿದನು ಗುರು ।
ಬಾಲಕನು ಪಥದಲ್ಲಿ ಕಂಡ ಸುದಂಪತಿಗಳೊಡನೇ ॥

ಪಡೆದವರು ಭಕ್ತರ್ಕಳುಂ ಪಲ ।
ನುಡಿಗಳಿಂ ತುರುಗಳನು ಕಾವುದ ।
ಬಿಡಿಸಿ ಶಿವಮೂರ್ತಿಯನು ಮಠದೊಳಗಿರಿಸಲಾ ಬಳಿಕೇ ॥
ಮೃಡಸುತೇಜನ ತದ್ಗುರೂತ್ತಮ ।
ನಡಿಯ ಪೂಜಿಸೆ ಮನದಭೀಷ್ಟವ ।
ಕೊಡುವನೆಂಬ ಸುವಾರ್ತೆ ಪರ್ಬಿತು ಹಳ್ಳಿಪಳ್ಳಿಯೊಳಂ ॥೧॥

ಕೇಳುತೀ ಸದ್ವಾರ್ತೆಯನು ತಾಂ ।
ಶೂಲಧರವರಭಕ್ತಮುಖ್ಯನು ।
ಜಾಲಿಹಾಳೆಂಬೂರ ದೇಶಾಯಿಯು ಫಲಾದಿಗಳಾ ॥
ಪಾಲಿಕೆಯುಮಂ ಕೊಂಡು ಪೂಜಾ ।
ವೇಳೆಗಾಗಮಿಸಿದನು ಮಿತ್ರಜ ।
ನಾಳಿಯೊಡವೆರೆದಾ ಅಸೂಟಿಯ ಗುರುವರರ ಮಠಕೇ ॥೨॥

ನೋಡಿದನು ಪೂಜಾದಿಕೃತಿಗಳ ।
ನಾಡೆ ಮುಗಿಸಿ ಸುಖಾಬ್ಧಿಯೊಳಗೀ ।
ಸಾಡುವಾ ಶಿವಯೋಗಿಯನು ಮುಂದಿತ್ತು ಫಲಸುಮವಾ ॥
ನೀಡಿದನು ನೆಲಕೊಡಲ ಭಕ್ತಿಯ ।
ಕೂಡಿ ನಮಿಸುತೆ ನಿಂದು ಕೈಗಳ ।
ಜೋಡಿಸುತೆ ನುತಿಮಾಡುತಿರ್ದನು ಬಿಡದೆ ದೇಶಾಯೀ ॥೩॥

ಅಕ್ಕರೆಯ ಗುರುಸುತನ ಕಾಂತಿಯು ।
ಕುಕ್ಕಿದುದು ಪರಿಕಿಸುವ ಕಣ್ಗಳ ।
ನುಕ್ಕಿಸಿತು ಸದ್ಭಕ್ತಿರಸವನು ಬಿಡದೆ ಪುಲಕಗಳು ॥
ತೆಕ್ಕೆಗೊಂಡವು ಮೈಯ ನುತಿಗಳು ।
ಸಿಕ್ಕಿಕೊಂಡವು ಗದ್ಗದಿಪ ಕಂ ।
ಠಕ್ಕೆ ದೇಶಾಯಿಗೆ ತದುಜ್ವಳಮೂರ್ತಿದರ್ಶನವೇ ॥೪॥

ಅಗಣಿತಾಮಳಭಕ್ತಿಯಿಂದಂ ।
ಪೊಗಳುತಿಂತಿರುತಿರ್ಪ ದೇಶಾ ।
ಯಿಗೆ ಸುಭೋಜನಮುಖ್ಯಸತ್ಕಾರಗಳನುರೆ ಗೈಸಿ ॥
ಬಗೆಯಲರ್ದಿರೆ ತಮ್ಮ ಗುರುಮಠ ।
ದಗಲದೊಳು ಕಿಕ್ಕಿರಿದ ಜನತೆಗೆ ।
ಬಗೆದ ಫಲಗಳ ಪರಸತೊಡಗಿರಲಾ ಗುರುವು ಬಳಿಕೇ ॥೫॥

ಬಾಲಯೋಗಿಯ ಕರೆದುಕೊಂಡಾಂ ।
ಜಾಲಿಹಾಳಿಗೆ ಪೋಗುತಂ ನ ।
ನ್ನಾಲಯದೆ ತತ್ಪಾದಪೂಜೆಯ ಗೈಸೆ ಜನ್ಮದೊಳು ॥
ಕೀಲಿಸಿದ ದೋಷವನು ಕಳೆವ ಸು ।
ಕಾಲವಿದು ನನಗೊದಗಿತಿದನನು ।
ಕೂಲಿಸೈ ಮಜ್ಜನಕನೇ ಗುರುಮಲ್ಲಿಕಾರ್ಜುನನೇ ॥೬॥

ಎಂದು ಯೋಗಿಯ ತಂದೆಯಂ ಪಲ ।
ವಂದದಿಂ ಯಾಚಿಸಿ ತದಾಜ್ಞೆಯ ।
ನೊಂದಿ ಪಾಲಿಕೆಯಲ್ಲಿ ಬಿಜಯಂಗೈಸಿ ಗುರುಸುತನಂ ॥
ಕಂದುಗೊರಲನೆ ನನ್ನ ಮನೆಗೈ ।
ತಂದನೆಂಬುಲ್ಲಾಸದಿಂ ಸಖ ।
ರಿಂದೆ ತಳ್ತಾಗಮಿಸಿದನು ದೇಶಾಯಿ ತನ್ನೂರ್ಗೇ ॥೭॥

ಊರ ಸನಿಹಕೆ ಬಂದೊಡನೆ ತ ।
ನ್ನೂರವರು ಶುಭವಾದ್ಯಮುಖ್ಯದ ।
ಭೂರಿ ವೈಭವದಿಂದಿದಿರ್ಗೊಂಡೊಲಿದು ಕರೆದೊಯ್ಯೇ ॥
ಸೇರಿ ನಿಜಮಂದಿರವನಾತ್ಮೋ ।
ದ್ಧಾರಪರಶಿವಯೋಗಿಯಂ ವರ ।
ವೀರಶೈವರಿಸಿಂತು ಸೇವೆಯ ಗೈನತೊಡಗಿದನು ॥೮॥

ಪರಿಮಳೋದಕ ಮಜ್ಜನವನಾ
ಗುರುವಿಗಾಗಿಸಿ ದಿವ್ಯಪೀಠಾಂ ।
ಬರವನುಡಿಸುತೆ ಹಾವುಗೆಯನಳವಡಿಸಿ ಪಾದಕ್ಕೇ ॥
ಕರವ ಪಿಡಿದೀಶಾರ್ಚನೆಯ ಮಂ ।
ದಿರಕೆ ಬಿಜಯಂಗೈಸಿ ನಿರ್ಮಳ ।
ತರ ಸುಪೀಠದೆ ಕುಳ್ಳಿರಿಸಿ ತಚ್ಚರಣಮಂ ತೊಳೆದು ॥೯॥

ಪರಿಮಳಿತ ಕುಸುಮಾದಿ ಪೂಜಾ ।
ಪರಿಕರವ ಸರಿಗೊಳಿಸಿ ತದ್ಗುರು ।
ವರನ ಸಮ್ಮುಖದಲ್ಲಿ ಪರಶಿವಭಕ್ತಸಂಕುಲವು ॥
ಕರವ ಮುಗಿದತಿಭಕ್ತಿಯಿಂ ನಿಂ ।
ದಿರೆ ಕೃಪಾದೃಷ್ಟಿಯೊಳು ಸರ್ವರ ।
ನಿರಿಕಿಸುತೆ ತೊಡಗಿದನು ಯೋಗಿಯು ಲಿಂಗಪೂಜೆಯೊಳು ॥೧೦॥

ಲಿಂಗಪೂಜೆಯನೆಸಗುತಾ ಶಿವ ।
ಲಿಂಗದೇವನನೊಲವಿನಿಂದಾ ।
ಲಿಂಗಿಸಿರೆ ನಿಜದೃಷ್ಟಿಮನಗಳ್ ಯೋಗಿಪುಂಗವನಾ ॥
ಮಂಗಳಾಕರಮೂರ್ತಿ ನೋಳ್ಪರ ।
ಕಂಗಳಾಲಯದೊಳ್ ಪ್ರತಿಷ್ಠಿತ ।
ತುಂಗಮೂರ್ತಿಯ ಮಾಳ್ಕೆಯಿಂ ಕಂಗೊಳಿಸುತಿರೆ ಬಳಿಕೇ ॥೧೧॥

ಅಗಲಿನದೆ ಲಿಂಗದೊಳು ದಿಟ್ಟಿಯ ।
ಹಗಲಗಲದೊಳು ತಾನು ಜಾನದ ।
ಸೊಗದ ಕಡಲೊಳು ಮುಳುಗಿಬಿಟ್ಟನು ಬಾಲಶಿವಯೋಗೀ ॥
ಮುಗಿದ ಕೈಗಳೊಳೆಲ್ಲರಾತನ ।
ಒಗೆಯ ಕಂಡಚ್ಚರಿಗೊಳುತ್ತಿರೆ ।
ಹಗಲು ಪೋದುದು ಸಂಜೆ ಬಂದುದು ಮುಗಿಯದಾ ಪೂಜೇ ॥೧೨॥

ಎಲ್ಲರಿಗೆ ಮಾಡಿಟ್ಟ ಪಾಕಗ ।
ಳಲ್ಲಿ ಮನವೆಳಸುತಿರೆ ಶಿವಸುಖ ।
ದಲ್ಲಿ ಪರವಶನಾಗಿರುವ ತದ್ಯೋಗಿವಲ್ಲಭಗೇ ॥
ಮೆಲ್ಲನೆಚ್ಚರವಾಗೆ ಬಳಿಕೆ ನ ।
ಮುಲ್ಲಸಿತಮನರಾಗಿ ಭಕ್ತರು ।
ನಿಲ್ಲದರ್ಚಿಸಿ ತಚ್ಚರಣವನು ತೀರ್ಥವನು ಪಡೆದು ॥೧೩॥

ಮಾಡಿದಾ ಮೃಷ್ಟಾನ್ನಗಳನೆಡೆ ।
ಮಾಡಿ ಗುರುವಿಗೆ ತೃಪ್ತಿಯಾಗಿಸಿ ।
ನಾಡೆ ಭಕ್ತರು ತತ್ಪ್ರಸಾದದೆ ತಣಿಯಲಾ ಬಳಿಕೇ ॥
ಕೂಡಿ ನಿಜಪರಿವಾರದವರೊಡ ।
ನಾಡಲೇಂ ಯೋಗಿಪ್ರಸಾದವ ।
ಕೂಡಿದೊಲವಿಂ ಕೊಂಡು ದೇಶಾಯಿಯು ಕಳೆದನಘವಾ ॥೧೪॥

ಬಳಿಕೆ ತದ್ಗುರುಮೂರ್ತಿ ತಾನ ।
ಸ್ಖಲಿತವಾಣಿಯೊಳೊರೆದ ಪುಣ್ಯದ ।
ನೆಲೆಯೆನಿಸಿದಾ ಧರ್ಮತತ್ವವ ತಿಳಿದು ಧನ್ಯತೆಯಾ ॥
ತಳೆದು ದೇಶಾಯಿಯು ತದೀಯೋ ।
ಜ್ವಲ ಪದಾಂಬುಜಕೆರಗುತಿತ್ತನು ।
ನಲವಿನಿಂ ಭೂಧೇನಕನಕವಸ್ತ್ರಾದಿ ದಾನವನು ॥೧೫॥

ಕೊಟ್ಟುದೆಲ್ಲವನೊಂದು ತನ್ನ ।
ಲ್ಲಿಟ್ಟುಕೊಳ್ಳದೆಯಾ ಸಮಯದೊಳೆ ।
ಕೊಟ್ಟು ತದ್ಗ್ರಾಮದ ಮಹೇಶ್ವರವರ್ಗಕಾ ಗುರುವು ॥
ಕೊಟ್ಟನಿಷ್ಟವನೀವ ಪರಕೆಯ ।
ನೆಟ್ಟನಾ ದೇಶಾಯಿಗಂ ಬಗೆ ।
ಗೊಟ್ಟು ಭಜಿಪಖಿಳರ್ಗಮಾತನ ವಿರತಿಯೇಂ ಘನವೋ ॥೧೬॥

ಬಾಲಯೋಗಿಯೊಳಿರ್ಪ ವಿರತಿಯ ।
ಲೀಲೆಗಾ ದೇಶಾಯಿಯುಂ ಜನ
ಜಾಲ ಮಚ್ಚರಿಯೊಂದೆ ಬಳಿಕಾ ಮಹಿತಮೂರ್ತಿಯನು ॥
ಪಾಲಿಕೆಯೊಳುರೆ ಕುಳ್ಳಿರಿಸಿ ಸುವಿ ।
ಶಾಲದಾ ಗ್ರಾಮದ ಮಠಕೆ ಭ ।
ಕ್ತಾಳಿ ಕರೆತಂದುದು ಸುವಾದ್ಯಾದಿಗಳ ಸಂಭ್ರಮದೇ ॥೧೭॥

ಗ್ರಾಮದಾ ಮಠದಲ್ಲಿ ಭಕ್ತ ।
ಸ್ತೋಮವನುದಿನದಲ್ಲಿ ಸಲೆ ಸಿ ।
ಸ್ತೀಮ ಮಹಿಮನ ಗುರುವರನ ಲಿಂಗಾರ್ಚನೆಯ ಗೈಸಿ ॥
ಕಾಮಿತಾರ್ಥವನೀವ ತತ್ಪದ ।
ತಾಮರಸವಂ ಪೂಜಿಸುತ್ತಂ ।
ಪ್ರೇಮದಿಂ ಸ್ವೀಕರಿಸಿ ತತ್ತೀರ್ಥಪ್ರಸಾದಗಳಾ ॥೧೮॥

ಭಕ್ತಿಯಿಂದಾಲಿಸುತಲಾ ಸುವಿ ।
ರಕ್ತಮೂರ್ತಿಯು ನಡೆಸುತಿರುವಾ ।
ಭುಕ್ತಿ ಮುಕ್ತಿದ ಧರ್ಮತತ್ವದ ಬೋಧೆಯನು ಸತತಂ ॥
ತ್ಯಕ್ತವಿಷಯಭ್ರಮರೆನಿಸುತಾ ।
ಭಕ್ತರೆಲ್ಲರು ಧರ್ಮಮಾರ್ಗಾ ।
ಸಕ್ತರಾದರು ಕೆಲದಿನಕ್ಕಾಬಳಿಕದೊಂದಿರುಳೊಳ್ ॥೧೯॥

ಎಲ್ಲರುಂ ಭಕ್ತರ್ಕಳಿರೆ ಮಠ ।
ದಲ್ಲಿ ಲಿಂಗಾರ್ಚನವೆಸಗಿ ಸುಖ ।
ದಲ್ಲಿ ಪರವಶನಾಗಿರುವ ತದ್ಯೋಗಿವಲ್ಲಭನಂ ॥
ಉಲ್ಲಸಿತದಾ ಶ್ರೀಗಿರಿಯ ವರ ।
ಮಲ್ಲಿಕಾರ್ಜುನನಳ್ತಿಯಿಂ ತ ।
ನ್ನಲ್ಲಿಗಾಗಮಿಸೆಂದು ಕರೆದಂತಾದುದೇನೊರೆವೇಂ ॥೨೦॥

ಮಲ್ಲಿಕಾರ್ಜುನನೀ ನುಡಿಯು ಕಿವಿ ।
ಯಲ್ಲಿ ಕೇಳಿಸಿದೊಡನೆ ಯೋಗಿಯು ।
ಮೆಲ್ಲನರಳಿಸಿ ಕಣ್ಗಳನು ನಿರಿಕಿಸುತೆ ಸರ್ವರನು ॥
ನಿಲ್ಲದಂತಾ ಶ್ರೀಗಿರಿಯ ಶಿವ ।
ನಲ್ಲಿಗಿನ್ನಾಂ ಪೋಗುವೆನು ನಿ ।
ಮ್ಮಲ್ಲಿದೊಂದಿರುಳಿರುವೆನೆಂದನು ಮುಗುಳುನಗೆಯಿಂದೇ ॥೨೧॥

ಆಲಿಸುತ್ತಿದನಲ್ಲಿರುವ ಭ ।
ಕ್ತಾಳಿ ತಮಗೇಂ ತಿಳಿಯದಂತಿರೆ ।
ಲೀಲೆಯಾಣ್ಮನು ನುಡಿದುದಚ್ಚರಿಗೊಂಡು ವಂದಿಸುತೇ ॥
ಪಾಲಕನೆ ಗುರುವರನೆ ಪರಮುದ ।
ಯಾಳುವೇ ನಿಮ್ಮಿಷ್ಟದಂತೀ ।
ಆಳುಗಳು ಸಲೆ ನಡೆದುಕೊಳ್ಳಲು ಸಿದ್ಧರೆಂದೊರೆದು ॥೨೨॥

ಬಳಿಕಮೆಲ್ಲರು ಪರಮಮಂಗಳ ।
ನಿಳಯ ಗುರುವಿನ ಪಾದಪೂಜೆಯ ।
ನಲವಿನಿಂ ಸಲೆಗೈದು ಬಹುವಿಧ ಪತ್ರಪುಷ್ಪಗಳಿಂ ॥
ಒಲಿದು ತತ್ಪದತೀರ್ಥವೀಂಟು ।
ತ್ತಲರ್ದಬಗೆಯಿಂ ಭಕ್ಷ್ಯಭೋಜ್ಯಾ ।
ವಳಿಯ ಭೋಜನವಾಗಿಸಿದರಾ ಪರಮಪೂಜ್ಯಂಗೇ ॥೨೩॥

ಪಡೆದು ಶಿವಮೂರ್ತಿಪ್ರಸಾದವ ।
ಸಡಗರದೆ ತಾವುಂಡು ತೃಪ್ತಿಯ ।
ಪಡೆಯೆ ಸರ್ವರು ಬಳಿಕೆ ತದ್ಗುರು ನೆರೆದ ಭಕ್ತರೊಳು ।
ನುಡಿಯದೆಯೆ ತಾಂ ಮೌನಮುದ್ರೆಯ ।
ಪಡೆದು ಪವಡಿಸಿಬಿಟ್ಟನಾ ಮಠ ।
ದೆಡೆಯೊಳೇರ್ಪಡಿಸಿರ್ದ ತನ್ನಯ ಮೃದುಸುತಲ್ಪದೊಳು ॥೨೪॥

ವಿರತಿಮೂರ್ತಿಯ ಚರ್ಯೆಯಿದ ನೆರೆ ।
ಪರಿಕಿಸಿದ ದೇಶಾಯಿ ಮೊದಲಾ ।
ಗಿರುವ ಭಕ್ತರು ಭಯದೊಳೇನೊಂದುಸಿರದಿರೆ ಬಳಿಕೇ ॥
ಪರಮಯೋಗಿಯು ಕನಸಿನೊಳ್ ಮೇಣ್ ।
ಗಿರಿಯ ಮಲ್ಲೇಶ್ವರನು ನೆಗಹಿದ ।
ಕರದೆ ತನ್ನಯ ಕರೆವುದನು ಕಂಡೆಚ್ಚರವನಾಂತು । ॥೨೫॥

ಇಂತು ನೀಂ ಕರೆಯುತಿರೆ ನಿನ್ನೆಡೆ ।
ಗೆಂತು ಬರುವುದೊ ಮಾರ್ಗವಾವುದೊ ।
ನಾಂ ತಿಳಿಯೆನಾರೆನ್ನ ಕರೆದೊಯ್ಯುವರೊ ಪರ್ವತಕೇ ॥
ಚಿಂತೆಯಿದು ಪಿರಿದಾಯ್ತು ಮಿಗೆ ಕೃಪೆ ।
ಯಾಂತು ಭವದಂಘ್ರಿಯನು ಕಾಣುವು ।
ದಂ ತಿಳಿಸು ಗಿರಿಮಲ್ಲಿಕಾರ್ಜುನನೇ ಮಹೇಶ್ವರನೇ ॥೨೬॥

ಎಂದು ನಲ್ವಾಸಿನೊಳೆ ಕುಳಿತಾ ।
ಕಂದುಗೊರಲನ ಬೇಡೆ ಮಠದಾ ।
ಮುಂದಿರುವ ಪಥದಲ್ಲಿ ನಲವಿಂ ಕಂಬಿಯಯ್ಯಗಳು ॥
ತಂದೆ ಗಿರಿಮಲ್ಲಯ್ಯ ಜಯ ಜಯ ।
ವೆಂದು ಜಯಘೋಷವನೆಸಗುತ್ತೈ ।
ತಂದರಾಗಳೆ ಕಾಕತಾಳನ್ಯಾಯಭಂಗಿಯೊಳು ॥೨೭॥

ಕಿವಿಯುಗಲು ಜಯಘೋಷವಾಗಳೆ ।
ಶಿವಮುನನು ಗುರುಸುತನು ಬಳಿಯೊಳು ।
ಪವಡಿಸಿದವರ್ಗೆಚ್ಚರಾಗದ ತೆರದೊಳೈತಂದು ॥
ತವಕಗೊಂಡಯ್ಯಗಳ ಕೇಳ್ದರಿ ।
ದವರೊಡನೆ ತೆರಳಿದನು ನಲವಿಂ ।
ಭುವನವಿದಿತ ಶ್ರೀಗಿರಿಗೆ ತಾಂ ಸುಪ್ರಭಾತದೊಳು ॥೨೮॥

ತಿಳಿದಿದನು ದೇಶಾಯಿ ಮತ್ತಿ ।
ನ್ನುಳಿದವರು ಗುರು ಪೋದಮಾರ್ಗದೆ ।
ತಳುವದೈತಂದಡಿಗೆರಗಿ ಭಯಭಕ್ತಿಭಾವಗಳಿಂ ॥
ಪಲವುಬಗೆಯಿಂ ನಿಲಿಸಲೊಪ್ಪದೆ ।
ಯಲಘು ಮಹಿಮದ ಮೂರ್ತಿ ನಡೆದನು ।
ಬಳಸಿರುವ ಯಾತ್ರಾರ್ಥಿಗಳನೊಡಗೊಂಡು ಪರ್ವತಕೇ ॥೨೯॥

ಬಂದು ಬಂಡಿಯ ಕಳುಹಿ ಕರೆಯಿಸಿ ।
ತಂದೆ ತಾಯ್ಗಳ ಮುಂದೆ ನಡೆದುದ ।
ನೊಂದನುಳಿಯದೆ ಪೇಳಲಾ ದೇಶಾಯಿ ಪಡೆದವರು ॥
ನಂದನನ ಕರೆಯಲ್ಕೆ ಬಂಡಿಯೊ ।
ಳಂದು ಜವದಿಂ ಬರುತೆ ಕೇಳಲು ।
ಮುಂದೆ ಪೋದನು ನಿಮ್ಮ ಸುತನೆಂದೊರೆಯೆ ಯಾತ್ರಿಕರು ॥೩೦॥

ಅರಿಯಲಿದನಾ ತಂದೆ ತಾಯ್ಗಳು ।
ಭರದೊಳೈತಂದಿಲ್ಲಿಗೆನ್ನಯು ।
ಗಿರಿಯ ಪಯಣವ ಬಿಡಿಸದಿರರೆಂದರಿದು ಗುರುಸುತನು ॥
ತೊರೆದು ಕಂಬಿಯವರ ಜೊತೆಯನೇ ।
ತ್ವರಿತಗಮನದ ಯಾತ್ರಿಕರ್ಕಳ ।
ನಿರದೆ ಕೂಡುವೆನೆಂದು ಹೊರಟನು ವಾಯುಗತಿಯಿಂದೇ ॥೩೧॥

ಕೆಲರ ಮಧ್ಯದೆ ಮಿಂಚಿನಂದದೆ ।
ಹೊಳೆದು ಮರೆಯಾಗುತ್ತೆ ತತ್ಪಥ ।
ವುಳಿದು ಪಿಸಿನದೆ ನಡೆದು ಬೇರೊಂದೂರ ದಾರಿಯನು ॥
ಕೆಲದೊಳಿರೆ ಕಂಡಾ ಸರಣಿಗೊಂ ।
ಡಲಘು ಮುದದಿಂ ಬರೆ ಪಥದೆ ಶಿವ ।
ನಿಳಯಮಿರಲದರಲ್ಲಿ ಕುಳಿತನು ದಣಿದು ಗುರುಸುತನು ॥೩೨॥

ಪಡೆದವರು ತತ್ಪಥವಿಡಿದು ತಾಂ ।
ಕಡು ಭರಮೊಳೋಡಿಸುತೆ ಬಂಡಿಯ ।
ನಡೆದು ಪೋಗುವ ಯಾತ್ರಿಕರ ಕೇಳುತ್ತೆ ಗಮಿಸಿದೊಡಂ ॥
ಪಡೆದುದಿಲ್ಲವು ಮಗನನಾ ಸುತ ।
ನಡವಿಯನೆ ಹಿಡಿದನ್ಯಮಾರ್ಗದೆ ।
ನಡೆದುಬಂದೀಶ್ವರನಿಳಯವನು ಸೇರಿರುವನಲ್ತೇಂ ॥೩೩॥

ಬಂದು ಬಹುದೂರದ ಪಥದ ನಿಜ ।
ನಂದನನ ಕಾಣದಿರೆ ಬಂಡಿಯ ।
ನಂದು ನಿಲ್ಲಿಸಲಿಳಿದು ನೆಲಕೊರಗುತ್ತೆ ಶರಭಾಂಬೆ ॥
ಮಂದಭಾಗ್ಯರ ಬಿಟ್ಟು ಪೋದೆಯ ।
ಸುಂದರನೆ ಸುಕುಮಾರನೇ ಗುಣ ।
ಮಂದಿರನೆ ನೀನೆಂದಳಲ್ದಳು ನಾಂದು ಕಣ್ಣೀರಿಂ ॥೩೪॥

ಇಷ್ಟಲಿಂಗವೆ ಬೇಡಿದೊಡನೆಯೆ ।
ಕೊಟ್ಟು ಕೆಲದಿನವಿಟ್ಟು ನಮ್ಮೊಳು ।
ಒಟ್ಟಬಯಲಾಗಿಸಿದೆಯಾ ಮಗುಮಾಣಿಕವನೀಗಾ ॥
ಕೊಟ್ಟುದೇತಕೆ ಮಾಯವಾಗಿಸಿ ।
ಬಿಟ್ಟುದೇತಕೆ ನಮ್ಮನಳಲಿಸ ।
ಲಿಷ್ಟವಾದುದೆ ಮಾಡಿರುವ ತಪ್ಪಾವುದೈ ಶಿವನೇ ॥೩೫॥

ಎಳೆತನದೆ ಶಿವಯೋಗಸಿದ್ಧಿಯ ।
ಗಳಿಸಿದಣುಗನ ದರ್ಶನದೆ ನಿ ।
ರ್ಮಳತೆಯನು ನಾವ್ಪೊಂದುತಿರ್ದುದ ಸಹಿಸದೆಯೆ ನೀನು ॥
ನಿಲಿನದೆಯೆ ಮಠವಲ್ಲಿ ಬೆಟ್ಟ ।
ಕ್ಕೆಳೆದುಕೊಂಡೇ ಪೋದೆಯಾ ಗಿರಿ ।
ನಿಳಯನೇ ಶಂಕರನೆ ಎಂದೆದೆ ಬಡಿದುಕೊಳೆ ಸತಿಯು ॥೩೬॥

ನೋಡಿ ಕಾಂತೆಯ ದುಃಖದೇಳ್ಗೆಯ ।
ಮಾಡುವಾತ್ಮವ್ಯಥೆಯನಣಗಿಸಿ ।
ಕೂಡಿ ಧೃತಿಯಿಂದೊರಸಿಕೊಳ್ಳುತೆ ಕಂಬನಿಯ ಮರೆಯೊಳ್ ॥
ಕಾಡಮಧ್ಯದೊಳತ್ತು ಫಲವೇಂ ।
ಬೇಡ ದುಃಖವು ನನ್ನ ಮಾತಿಗೆ ।
ನೀಡು ಕಿವಿಯೆಂದಿಂತೊರೆದನಾ ಮಲ್ಲಿಕಾರ್ಜುನನು ॥೩೭॥

ಮಂಗಳಾಂಗಿಯೆ ಮಗನೊಳಾ ಲಿಂ ।
ಗಾಂಗಯೋಗದ ಶಕ್ತಿಯೊಡನೆಯೆ ।
ಹಿಂಗದಂತಿರೆ ಬಳೆಯುತಿರ್ಪುದು ವಿರತಿಭಾವವದು ॥
ಇಂಗಿತವ ಕೇಳಾ ಸುತಗೆ ಜನ ।
ಸಂಗವೇ ನಾಕೆನಿಸಿ ಹೊರಟನು ।
ತುಂಗತರ ಗಿರಿಮಲ್ಲಿಕಾರ್ಜುನಲಿಂಗದರ್ಶನಕೇ ॥೩೮॥

ಮಗನು ಪೋದಂತಿನ್ನು ತದ್ಯಾ ।
ತ್ರೆಗೆ ತೆರಳ್ದೊಡಮಲ್ಲಿ ನೆರೆದಿ ।
ರ್ಪಗಣಿತದ ಜನದಲ್ಲಿ ತನುಜನನರಸಲಸದಳವು ॥
ಜಗದ ಜೀವಿಗಳಾಗುಹೋಗುಗ ।
ಳಗಜೆಯಾಣ್ಮನ ಕೈಯೊಳಿರ್ಪವು ।
ಮಗನ ಯೋಗಕ್ಷೇಮವಾತನು ವಹಿಸದಿರನಲ್ತೇಂ ॥೩೯॥

ಬಿಡು ಸುತನ ದುಃಖವನು ಪೋಗುವ ।
ನಡೆ ಮಠಕೆ ಸುಖದಿಂದೆ ಯಾತ್ರೆಯ ।
ನಡೆ ಮುಗಿಸಿಕೊಂಡೈತರುವನೆಮ್ಮೆಡೆಗೆ ತನುಭವನು ॥
ಮೃಡಸಮನು ಸಾಮಾನ್ಯನಲ್ಲವು ।
ಪೊಡವಿಯೊಳ್ ನೀಂ ಧನ್ಯಳಾತನ ।
ಪಡೆದ ಕತದಿಂದೆಂದುಮಿನ್ನೀ ತೆರದಬೋಧೆಯೊಳು ॥೪೦॥

ಕಳೆದು ಶರಭಾಂಬಿಕೆಯ ದುಃಖವ ।
ನಿಳುಹಿ ಸುತರಕ್ಷಣೆಯ ಭಾರವ
ಮಲರಹಿತ ಮನದಲ್ಲಿ ನೆಲಸಿದ ಮಲ್ಲಿಕಾರ್ಜುನನೊಳ್ ॥
ಕಳಕಳವನುಳಿದೂರ್ಗೆ ತನ್ನಯ ।
ಲಲನೆಯೊಡನೈತಂದು ನಿಜಮಠ ।
ದೊಳಪೊಗುತ್ತಿರಲೂರವರು ಬಳಸಿದರು ತದ್ಗುರುವಾ । ॥೪೧॥

ಉಕ್ಕಿ ಬರುತಿರೆ ಕಣ್ಣೊಳುದಕವು ॥
ಸಿಕ್ಕಿಕೊಂಡುದು ಕಂಠದೊಳೆ ತಾಂ ।
ಸಿಕ್ಕದಿಲ್ಲವು ಪುತ್ರನೆಂಬುಕ್ತಿಯದು ತದ್ಗುರುಗೇ ॥
ಅಕ್ಕರೆಯ ಶಿವಮೂರ್ತಿ ನಿಮ್ಮೆದೆ ।
ಗಿಕ್ಕಿ ಕಿಚ್ಚನು ಪೋದನೆನುತಂ ।
ಬಿಕ್ಕಿ ಬಿಕ್ಕಳತೊಡಗಿದರು ಕೆಲವೃದ್ಧವನಿತೆಯರು ॥೪೨॥

ವೃದ್ಧೆಯರ ರೋದನವು ಚಿಂತಾ ।
ಬದ್ಧ ಶರಭಾಂಬಿಕೆಯ ದುಃಖವ ।
ವೃದ್ಧಿಗೈದೊಡನಾ ಜನನಿ ಮೈಮರೆದು ನೆಲಕುರುಳೇ ॥
ಇದ್ದ ಭಕ್ತೆಯರೆಲ್ಲರುಂ ತಾ ।
ವೆದ್ದು ಬಂದುಪಚರಿಸಿ ಮೂರ್ಛೆಯಿ
ನೆದ್ದು ಮತ್ತಂ ಕುಳಿತುಕೊಳ್ಳಂತಾಗಿಸಲು ಬಳಿಕೇ ॥೪೩॥

ಭಾಗ್ಯಹೀನಳ ಮಠದೊಳಾ ಸೌ ।
ಭಾಗ್ಯಮೂರ್ತಿಯು ನಿಲ್ಲನೇಂ ಮುನಿ ।
ಭೋಗ್ಯದಾ ಶ್ರೀಶೈಲ ವಿಪಿನದೊಳಿರಲು ತೆರಳಿದನು ॥
ಯೋಗ್ಯರಲ್ಲವು ನಾವು ಬಹು ನಿ ।
ರ್ಭಾಗ್ಯರಾ ಸತ್ಪುತ್ರದರ್ಶನ ।
ಭಾಗ್ಯಕೆಂದತಿದುಃಖದಿಂ ಹಲುಬಿದಳು ಶರಭಾಂಬೇ ॥೪೪॥

ಕಾಮಹರ ಶಂಕರನೆ ನಮ್ಮಾ ।
ಗ್ರಾಮಮಂ ಪಾವನಮನೆಸಗಲ್ ।
ಪ್ರೇಮದಿಂ ಮಠದಲ್ಲಿ ಪುಟ್ಟಿದನೆಂದು ನಂಬಿರಲು ॥
ಸ್ವಾಮಿಯೂ ಶಿವಮೂರ್ತಿ ಭಕ್ತ ।
ಸ್ತೋಮಮಂ ಕಡೆಗಣಿಸಿ ತೆರಳಿದ ।
ನಾಮಹಿತಗಿರಿಗೆಂದು ಹಂಬಲಿಸುತಿರೆ ನೆರೆದವರು ॥೪೫॥

ಅಲ್ಲಿರುವರೊಳ್ ಕೆಲರು ಭಕ್ತರು ।
ನಿಲ್ಲದೆಯೆ ಯಾತ್ರೆಗೆ ತೆರಳಿ ಗಿರಿ ।
ಯಲ್ಲಿ ಗುರುಮೂರ್ತಿಯನರಸಿ ಕರೆತರುವೆವೆಂದುಸುರಿ ॥
ನಿಲ್ಲಿಸುತ್ತತಿಯತ್ನದಿಂ ತಾ ।
ವೆಲ್ಲರಾ ದುಃಖಾತಿರೇಕವ ।
ಮಲ್ಲಿಕಾರ್ಜುನಪರ್ವತದ ಪಯಣಕ್ಕೆ ತೊಡಗಿದರು ॥೪೬॥

ಅವರೊಡನೆ ಪೋಗುವೆವು ನಾವುಂ ।
ಕುವರನನು ಹುಡುಕಲ್ಕೆನುತ್ತುರೆ ।
ತವಕಗೊಳೆ ಪಡೆದವರು ದೂರದ ಕಷ್ಟಯಾತ್ರೆಯದು ॥
ಸುವಿದಿತಂ ಸರ್ವರಿಗೆನುತ್ತೊರೆ ।
ದವರನೆಂತೋ ಸಂತವಿಸಿ ಪಯ ।
ಣವನೆಸಗಿದರು ಕೆಲರು ಭಕ್ತರು ನಮಿಸಿ ಗುರುಗಳ್ಗೇ ॥೪೭॥

ಇತ್ತಲಾ ಶಿವನಿಳಯದೊಳ್ ಕೆಲ ।
ಹೊತ್ತು ದಣುವಾರಿಸಿಕೊಳುತೆ ತಾಂ ।
ಮತ್ತೆ ಪಯಣವನೆಸಗುತಿರೆ ತದ್ಬಾಲಶಿವಯೋಗೀ ॥
ಮೃತ್ಯುಹರಸದ್ಭಕ್ತರಮಳಿನ ।
ಚಿತ್ತಪತಿಪತ್ನಿಗಳು ಕಂಟಲಿ ।
ಯೆತ್ತಿನೊಡನಾ ಪಥಕೆ ಬರುತಂ ಕಂಡರಾ ಗುರುವಾ ॥೪೮॥

ಚಂಡಿಕಾಧವತೇಜವಾಕೃತಿ ।
ಗೊಂಡಮಾಳ್ಕೆಯೊಳಿರ್ಪ ಗುಣಮಣಿ ।
ಮಂಡನನ ಕಂಡೊಡನೆ ಭಕ್ತಸುದಂಪತಿಗಳವರು ॥
ಮಂಡೆಯಿಡುತಾತನ ಪದಾಬ್ಜಕೆ ।
ಕಂಡೆವಿಲ್ಲಿಯೆ ಪುಣ್ಯದಿಂ ಭೂ ।
ಮಂಡಲಸ್ತುತನಾದ ಪರ್ವತಮಲ್ಲಿಕಾರ್ಜುನನಾ ॥೪೯॥

ಎಂದು ಪೊಗಳುತ್ತಾವ ನೆಲೆಯಿಂ ।
ಬಂದಿರೋರ್ವರೆ ಪೋಪುದಾವೆಡೆ ।
ಗಿಂದು ನೀವೀ ಚಿಕ್ಕಹರೆಯದೆ ಪೇಳ್ವುದೆಮಗೆಂದು ॥
ಮುಂದು ನಿಂದವರೆರೆಯೆ ಕಿರುನಗೆ ।
ಯಿಂದೆ ನಾಂ ಶ್ರೀಶೈಲಯಾತ್ರೆಗೆ ।
ಬಂದೆನೋರ್ವನೆ ಪೋಗುವೆನು ನಿವೆಲ್ಲಿ ಪೋಗುವುದು ॥೫೦॥

ಎಂದು ತದ್ಗುರುಸುತನು ಕೇಳಲು ।
ಮಂದಹಾಸದೊಳವರು ನಾವುಂ ।
ಬಂದಿರುವೆವಾ ಯಾತ್ರೆಗಾಗಿಯೆ ನಮ್ಮೊಡನೆ ನೀನು ॥
ಬಂದು ಬಿಡು ಕರೆದೊಯ್ವೆವೆಮಗಾ ।
ನಂದವಾದುದು ಗಿರಿಯ ಪಯಣದೊ ।
ಳಿಂದು ಮಾಹೇಶ್ವರವಟುವು ನೀಂ ದೊರೆತಕಾರಣದೇ ॥೫೧॥

ಇಂತೊರೆದುದನು ಕೇಳಿ ಪಯಣದ ।
ಚಿಂತೆ ಪೋದುದು ಮಾನಸಕ್ಕತಿ ।
ಶಾಂತಿಯಾದುದು ಕರುಣದಿಂ ಗಿರಿಮಲ್ಲಿಕಾರ್ಜುನನು ॥
ಇಂತು ಭಕ್ತರ ನಿಮ್ಮಗಳ ಜೊತೆ ।
ಯಂ ತಳುವದಾಗಿಸಿದನೆಂದೊರೆ ।
ದೆಂತೊ ಸಮ್ಮುದವಾಗಿಸಿದನವರಲ್ಲಿ ತದ್ಗುರುವು ॥೫೨॥

ಬಳಿಕೆ ಶುಭದಂಪತಿಗಳಾ ನಿ ।
ರ್ಮಳ ಮಹೇಶ್ವರಬಾಲಕನ ಕಡು ।
ನಲವಿನಿಂ ಕುಳ್ಳಿರಿಸಿ ವೃಷಭನ ಬೆನ್ನಪೀಠದೊಳು ॥
ಕೆಲಬಲದೆ ತಾವಿರ್ದು ಪಯಣವ ।
ಬಳೆಯಿಸಿದರಾ ಮೂರ್ತಿಯೊರೆಯುವ ।
ಮಲರಹಿತಶಿವಲೀಲೆಗಳನಾಲಿಸುತೆ ಪರ್ವತಕೇ ॥೫೩॥

**॥ ಮುಗಿದುದು ॥ ಒಟ್ಟು ಪದಗಳು ॥೨೦೦॥**



|| ಓಂ ವಿರೂಪಾಕ್ಷಾಯನಮಃ ||

## ಐದನೆಯ ಸಂಧಿ

---

**ಸೂಚನೆ :–** ಗಿರಿಯ ಪಯಣದ ನಡುವೆ ಹಂಪೆಗೆ |
ತೆರಳುತಂ ಭಕ್ತರ್ಕಳೊಡನಾ |
ಗುರುಸುತನು ಪಂಪಾಪತಿಯ ದರ್ಶನವನೆಸಗಿದನು ||

ಎತ್ತನೇರಿಸಿಕೊಂಡು ತನ್ಮಹಿ |
ಮೋತ್ತಮನ ಪಾರ್ಶ್ವದೊಳು ಭಕ್ತರು |
ಭೃತ್ಯತೆಯನೊಡಗೊಂಡು ತದ್ವಿಲಸಿತ ಮುಖಾಂಬುಜದಿಂ ||
ಬಿತ್ತರದ ಶಿವಚರಿತೆಗಳ ಕೇ |
ಳುತ್ತೆ ಬಹುದೂರದ ಪಥವ ಕಳೆ |
ವುತ್ತೆ ಬೇಸರವಿನಿತುಮಿಲ್ಲದೆ ಬರುತೆ ನಲವಿನೊಳು ||೧||

ಅಲ್ಲಿಗಲ್ಲಿಗೆ ನಿಲಿಸಿ ಪಯಣವ |
ನುಲ್ಲಸಿತ ಮುಖರಾಗಿ ತದ್ಗುರು |
ವಲ್ಲಭಗೆ ಮಜ್ಜನ ಸಮರ್ಚನಭೋಜನಾದಿಗಳೊಳ್ ||
ಇಲ್ಲೆನಿಸಿ ಕೊರತೆಯನು ಮಾರ್ಗದ |
ಪಳ್ಳಿ ಪುರಗಳ ದಾಂಟಿ ಬಂದರು |
ಸಲ್ಲಲಿತ ಪಂಪಾಮಹಾಕ್ಷೇತ್ರದ ಸಮೀಪಕ್ಕೇ ||೨||

ಗುರುವೆ ಪಂಪಾಕ್ಷೇತ್ರವಿಲ್ಲಿಯೆ |
ಕಿರಿದು ದೂರದೊಳಿರ್ಪುದಲ್ಲಿಗೆ |
ತೆರಳ್ದು ಪಂಪಾಪತಿಯ ದರ್ಶನವೆಸಗಿ ಮುಂದಕ್ಕೇ ||
ಪೊರಮಡಲು ನಿಮಗಿಷ್ಟವೇನೆಂ |
ದೆರೆಯೆ ಹಿಗ್ಗುತೆ ಯೋಗಿ ಪಂಪಾ |
ಪುರದರಸನಂ ನೋಡುವಳ್ತಿಯು ನನಗೆ ಘನವೆನಲು ||೩||

ನಲವಿನಿಂದದಕೊಪ್ಪಿ ಸತಿಪತಿ |
ಗಳು ಮಹೇಶ್ವರ ಮೂರ್ತಿಯೊಡನಾ |
ಗಳೆ ತೆರಳ್ದರು ಹಂಪೆಯಾಳ್ದನ ದರ್ಶನಕೆ ಪಥದೇ ||
ಕೆಲಬಲದೆ ಕಂಗೊಳಿಪ ಕಳಮದ |
ಹೊಲಗಳನು ಕಬ್ಬುಗಳ ಬೆಳೆಯನು |
ತಳಿರಿಡಿದ ಮಾವುಗಳ ಪೂದೋಟಗಳ ಪರಿಕಿಸುತೇ ||೪||

ಕ್ಷೇತ್ರದಧಿನಾಯಕನ ಶೌರ್ಯದ ।
ಪುತ್ರನಮಳ ಚರಿತ್ರನುನ್ನತ ।
ಗಾತ್ರನೆನಿಸಿದ ವೀರಭದ್ರಂ ಕ್ಷೇತ್ರದಾದಿಯೊಳೇ ॥
ಯಾತ್ರಕರಿಗೊಲಿದೀಯೆ ತನ್ನ ಪ ।
ವಿತ್ರದರ್ಶನಮಂ ತದಂಘ್ರಿ ।
ಸ್ತೋತ್ರಮಂ ಮಾಡಿದರು ಭಕ್ತರು ನೋಡುತಿರೆ ಗುರುವು ॥೫॥

ಅವರು ಬರುತಂ ತುಂಗಭದ್ರೆಯ ।
ಸವಿಯುದಕದಿಂ ತಳ್ತು ಬಳಿಯೊಳೆ ।
ಪ್ರವಹಿಸುವ ಪರಿಕಾಲ ವಾರಿಯ ವೇಗಮಂ ಕಂಡು ॥
ತವೆಪಡೆಯುತಚ್ಚರಿಯನವನೀಂ ।
ಟುವ ಬಯಕೆ ಸಮನಿಸಿಮೊಡಂ ನಿಜ ।
ಶಿವಸಮರ್ಚನವಾಗದುದರಿಂ ಕುಡಿಯದೆಯೆ ತೆರಳ್ದು ॥೬॥

ಬಡವಿಯೋರ್ವಳಿಗಿತ್ತು ಬಯಕೆಯ ।
ಕಡುನಿಡಿದನೊಳಕೊಂಡ ಲಿಂಗವು ।
ಬಡವಿಲಿಂಗಮೆನಿಪ್ಪ ಪೆಸರಿಂದೆಸಯಲದನಲ್ಲಿ ॥
ನಡೆ ನಿರೀಕ್ಷಿಸುತಲ್ಲಿಯೇ ಮೇಣ್ ।
ಪಡೆದರಚ್ಚರಿಯಂ ನಿರೀಕ್ಷಿಸಿ ।
ಕಡು ಭಯಂಕರಮುಗ್ರರೂಪ ನೃಸಿಂಹಮೂರ್ತಿಯನು ॥೭॥

ಮುಂದೆ ಪೋಗುತೆ ದೀರ್ಘಕಾಯುವ ।
ನೊಂದಿ ಬೃಹದಾಕೃತಿಯೊಳಚ್ಚರಿ ।
ಯೊಂದಿಸಿದ ಕರಿಮುಖನ ಸಾಸುವೆಕಾಳಗಣಪತಿ ತಾಂ ॥
ಎಂದು ಪೆಸರಂ ಪಡೆದುದನು ತಿಳಿ ।
ದಂದು ನಗೆಗಡಲಲ್ಲಿ ಮುಳುಗುತೆ ।
ನಿಂದು ತದ್ದರ್ಶನವಗೈದರು ದಂಪತಿಗಳವರು ॥೮॥

ರಾಮಣೀಯಕಮಾಗಿ ಬಳಿಯೊಳೆ ।
ಹೇಮಕೂಟಮದೊಪ್ಪೆ ತಮ್ಮ ।
ಸ್ವಾಮಿಯೊಡನಾ ಭಕ್ತರಲ್ಲಿಗೆ ಬರಲು ತದ್ಗಿರಿಯೊಳ್ ॥
ಸೋಮಧರಪೂಜೆಯೊಳು ಭಕ್ತ ।
ಸ್ತೋಮವೆಸೆದಿರಲಲ್ಲಿ ಪೂಜಾ ।
ಪ್ರೇಮವೇಕಿಂತವರಿಗೆಂದಾ ಗುರುಸುತನು ಕೇಳೇ ॥೯॥

ಗಿರಿವರಾತ್ಮಜೆ ತನ್ನನೈಸಲೆ ।
ವರಿಸಲೆಂದತಿಭಕ್ತಿಯಿಂದುಪ ।
ಚರಿಸುತಿರೆ ನಿಜರೂಪಮಿಮುಳಧ್ಯಾನಪರನಾಗಿ ||
ಪರಶಿವನು ಪೂರ್ವದೊಳು ತಾಂ ಸು ।
ಸ್ಥಿರಸಮಾಧಿಯೊಳಿರ್ದುದೀ ಭೂ ।
ಧರದೊಳದರಿಂದಿದು ಪವಿತ್ರಸ್ಥಾನಮೆಂದರಿದು ||೧೦||

ಇಲ್ಲಿ ಯಾತ್ರಿಕರಾಗಿ ಬಂದವ ।
ರೆಲ್ಲರುಂ ಶಿವಪೂಜೆಗೈಯುವ ।
ರಲ್ಲವೇನಿದನರಿದೊಡಂ ನೀನೆನ್ನ ಮುಖದಿಂದೇ ||
ಸೊಲ್ಲಿಸಲು ಮನವಾಯ್ತೆ ನಿನಗೆಂ ।
ದುಲ್ಲಸಿತ ವದನದೊಳು ಸರ್ವವ ।
ಬಲ್ಲಯೋಗಿಗೆ ಭಕ್ತನೊರೆಯಲು ಕೇಳಿ ಕಿರುನಗೆಯಿಂ ||೧೧||

ಜ್ಞಾಪಕಮುದಾಯ್ತೀಗಳಗಜಾ ।
ತಾಪತಿಯು ತಪಮಿರ್ದ ತಾಣಮಿ ।
ದಾ ಪುರಾತನ ಕವಿಯು ಹರಿಹರನೊರೆದಿರುವನಿದನು ||
ಈ ಪವಿತ್ರಸ್ಥಾನದೊಳೆ ನ ।
ಮ್ಮಾ ಪರಾತ್ಪರ ಲಿಂಗಮೂರ್ತಿಯ ।
ನೇ ಪರಮ ಭಕ್ತಿಯೊಳು ಪೂಜಿಸವೇಳ್ಕುಮೆನೆ ಬಳಿಕೇ ||೧೨||

ಹೇಮಕೂಟದ ಪಾರ್ಶ್ವದಲ್ಲಿಯೆ ।
ಭೂಮಹಿತ ಪಂಪಾಧವನ ತ ।
ದ್ವ್ಯೋಮಚುಂಬಿತಗೋಪುರಾನ್ವಿತ ನಿಳಯಮುರೆ ಸೆಳೆಯೇ ||
ಕಾಮಿತಾರ್ಥಪ್ರದನ ಶಿವನ ।
ಪ್ರೇಮಮಯದರ್ಶನಕೆ ತಾಂ ನಿ ।
ಸ್ಸೀಮಭಕ್ತಿಯೊಳವರು ಮೂವರು ಬಂದರವಸರದೇ ||೧೩||

ಶ್ರೀವಿರೂಪಾಕ್ಷನ ಜಗತ್ತಿನ ।
ಜೀವಿಗಳೊಳೆಡೆವಿಡದೆಯಿರ್ಪನ ।
ಭೂವಿನುತಚರಿತನ ಪರಾತ್ಪರ ಲಿಂಗಮೂರ್ತಿಯನು ||
ತೀವಿದೊಲವಿಂ ನೋಡಿದೊಡನೆಯೆ ।
ತೀವೆ ಕಣ್ಮನಗಳೊಳು ತನ್ಮಹಿ ।
ಮಾವಲಂಬನ ರೂಪು ಗುರುಸುತನಿಂತು ವಚಿಸಿದನು ||೧೪||

ತುಂಗಭದ್ರಾತೀರಗತಹೃದ ।
ಯಂಗಮದ ಸತ್ಕ್ಷೇತ್ರದೊಳು ಶಿವ ।
ಲಿಂಗರೂಪದೆ ನೆಲಸಿ ಬಂದವರಿಷ್ಟಸಿದ್ಧಿಗಳಾ ॥
ಹಿಂಗದಾಗಿಸುತಿರ್ದು ಕರುಣಾ ।
ಪಾಂಗನುಂ ಸಲೆ ಬೀರಿ ತನ್ನ ಪ ।
ದಂಗಳನು ನಂಬಿರ್ದವರ ರಕ್ಷಿಸುವನೀ ಪ್ರಭುವು ॥೧೫॥

ಇಂತೊರೆದು ನಿಜಭಕ್ತರೊಡನಾ ।
ಶಾಂತಮೂರ್ತಿಯು ತಾಂ ಮಹಾದ್ಭಾ ।
ರಾಂತರದೆ ಪೊರಮಟ್ಟು ನದಿಯಂತಿಕಕೆ ನಡೆತರಲು ॥
ಶಾಂತಿಯುಕ್ತ ಸ್ನಾನಮುಖ್ಯಾ ।
ನಂತಕೃತಿಯೊಳ್ ತೊಡಗಿರುವ ಜನ ।
ಸಂತತಿಯನೊಳಕೊಂಡು ಬಗೆಯೊಳೆಡುದು ತರಂಗಿಣಿಯು ॥೧೬॥

ಮಂಗಳಾಕರೆಯಾಗಿ ಬಹುಹೃದ ।
ಯಂಗಮದ ನೆಲೆಯಾಗಿ ಲಸಿತತ ।
ರಂಗಶೋಭಿತೆಯಾಗಿ ಜಲಚರಸುಖಸದನವಾಗಿ ॥
ತುಂಗಮಧುರತೆಗೂಡಿರುವ ಬೆ ।
ಳ್ದಿಂಗಳಂದದ ಶುಭ್ರವಾರಿಯ ।
ತುಂಗಭದ್ರಾವರಸದಿಯು ಸಲೆ ಕಂಗೊಳಿಸುತಿಹುದು ॥೧೭॥

ಹರನತೆರದಿಂ ಭುವನಭರಿತಂ ।
ಹರಿಯವೋಲ್ ಪದ್ಮಾಶ್ರಯಂ ಮೇಣ್ ।
ಪರಿಕಿಪೊಡೆ ಪರಮೇಷ್ಠಿಯಂತಿರೆ ಜಲಜಗರ್ಭಂ ತಾಂ ॥
ಇರುವ ಕತದಿಂ ತುಂಗಭದ್ರೆಯು ।
ವರಮಪೂಜ್ಯಮದೆನಿಸಿ ನಿರುತಂ ।
ಮೆರೆಯುತಿರ್ಪುದು ತತ್ತ್ರಿಮೂರ್ತಿಗಳಂತೆ ಭೂತಲದೇ ॥೧೮॥

ತಡಿವಿಡಿದ ತೆಂಗುಗಳ ಬಾಳೆಗ ।
ಳಡಕೆಸವಿಮಾವುಗಳ ಪುಗೆ ಸೊಂ ।
ಪಡರ್ದ ನೇರಳೆ ಪೀಳೆಗಳ ಪನಸಾದಿಗಳ ಸಿರಿಯಿಂ ॥
ತಡಿಯೊಳಿರ್ದೀಕ್ಷಿಪರ ಬಗೆಯಂ ।
ಬಿಡದೆ ಸೆಳೆಯುವ ತುಂಗಭದ್ರೆಯು ।
ಪೊಡವಿಯೊಳ್ ದಕ್ಷಿಣದ ಗಂಗೆಯದೆನಿಸಿ ಮೆರೆಯುವುದು ॥೧೯॥

ಹಂಪೆಯೊಳ್ದನ ನುಜ್ಜನಕೆ ತಾ ।
ನಿಂಪಿನುದಕವನಿತ್ತು ತೀರದ ।
ಕಂಪಿನಲರ್ಗಳನರ್ಚನಕ್ಕೊದಗಿಸುತೆ ದಿನದಿನದೇ ॥
ಸೊಂಪಿನಿಂ ತಟತರುಖಗಧ್ವನಿ ।
ಯಿಂ ಪಿರಿದು ನುತಿಗೈವ ಕತದಿಂ ।
ತಾಂ ಪರಮಪಾವನತೆಯಾಂತುಮ ತುಂಗಭದ್ರೆಯಿದು ॥೨೦॥

ನಿಂದು ನೋಡಲು ಕಣ್ಗೆ ತಣ್ಪನು ।
ತಂದು ಕೊಡುವುದು ಮುಟ್ಟೆ ಮನಕಾ ।
ನಂದವೀವುದು ಮೈದೊಳೆಯಲಳಿಯುವುದು ದುರಿತವದು ॥
ಬಂದು ನೆಲಸುವುದತಿಪವಿತ್ರತೆ ।
ಯೊಂದಿನಿತನೀಂಟಿದೊಡೆ ಹಂಪೆಯ ।
ನೊಂದಿ ಹರಿಯುವ ತುಂಗಭದ್ರೆಯ ಪುಣ್ಯತಮ ಜಲಮಂ ॥೨೧॥

ಈ ತೆರದೆ ಜಸವೆತ್ತು ಮೆರೆವ ಪು ।
ನೀತ ನದಿಯೊಳ್ ಗುರುವರಗೆ ಸಂ ।
ಪ್ರೀತಿಯಿಂ ಮೈದೊಳೆದು ತಾವುಂ ಮಿಂದು ನತಿಪತಿಗಳ್ ॥
ಖ್ಯಾತನಾದಾ ಹೇಮಕೂಟದೆ ।
ಪೂತಮೂರ್ತಿಯ ಲಿಂಗಪೂಜೆಗೆ ।
ಭೂತಿರುದ್ರಾಕ್ಷಾದಿಗಳನಳವಡಿಸಲಾ ಬಳಿಕೇ ॥೨೨॥

ಭದ್ರಮೂರ್ತಿಯು ಹೇಮಕೂಟದ ।
ಭದ್ರವೆಡೆಯೊಳ್ ಸಿದ್ಧಪಡಿಸಿದ ।
ಭದ್ರಪೀಠದೆ ಕುಳಿತು ಲಿಂಗಾರ್ಚನೆಗೆ ತೊಡಗಿದನು ॥
ರುದ್ರನಮನೆಂಬಮಿತಮೋದನ ।
ಮುದ್ರರಾಗಿ ಸಮುಲ್ಲಸಿತ ಮುಖ ।
ಮುದ್ರೆಯಿಂದೀಕ್ಷಿಸುತೆ ಕುಳಿತರು ದಂಪತಿಗಳವರು ॥೨೩॥

ಸ್ಫುರಿತರುದ್ರಾಕ್ಷಿಗಳು ಕೊರಳೊಳು ।
ವರಭಸಿತವಂಗದೊಳು ದಿಟ್ಟಿಯು ।
ಕರಸರೋಜದ ಲಿಂಗದೊಳು ಶಿವಮನುವು ಜಿಹ್ವೆಯೊಳು ॥
ಕರವೆಸೆಯೆ ಚರಿಸದಿರೆ ಹರಣಂ ।
ಸ್ಥಿರಮನಂ ಧ್ಯಾನದೊಳು ಬೆರೆದಿರೆ ।
ಮೆರೆದನಾ ಶಿವಯೋಗಿ ಭಕ್ತರಿಗಚ್ಚರಿಯನಿತ್ತು ॥೨೪॥

ಏನೊರೆವೆನಾ ಕ್ಷೇತ್ರ ಪುಣ್ಯ ।
ಸ್ಥಾನಮಹಿಮೆಯನಲ್ಲಿ ಲಿಂಗ ।
ಧ್ಯಾನಸುಖದಿಂ ತಳ್ತದೆನಿತೋ ವೇಳೆ ಗತಿಸಿದೊಡಂ ॥
ಧ್ಯಾನವಿಮುಖತೆಯಾದುದಿಲ್ಲಂ ।
ಮೌನಮುದ್ರೆಯ ಭಕ್ತರಚಲಿತ ।
ಮಾನಸದೆ ಪರಿಕಿಸುತೆ ಕುಳಿತರು ಮರೆದು ಸರ್ವವನು ॥೨೫॥

ಭಾವಲಿಂಗಧ್ಯಾನದೊಳು ಶಿವ ।
ಜೀವರೈಕ್ಯದ ಸುಖದೆ ತಾಂ ಮಾ ।
ದೇವನೇ ಆಗೆನೆಯುವಾ ಶಿವಯೋಗಿಪುಂಗವನು ॥
ಶ್ರೀವಿರೂಪಾಕ್ಷನ ಗುಡಿಯ ಘಂ ।
ಟಾರವದೊಳೆಚ್ಚತ್ತು ಮುಗಿಸಿದ ।
ನಾವಿಮಳ ಭಕ್ತರ್ಕಳೊಡನೆ ಸುಭೋಜನಾದಿಗಳಾ ॥೨೬॥

ಬಳಿಕೆ ಗುಡಿಯಾವರಣದೊಳು ಕಂ ।
ಗೊಳಿಪ ಪಂಪಾಂಬಿಕೆಯ ಮೊದಲಾ ।
ದುಳಿದ ದೇವತೆಗಳ ಸುದರ್ಶನವೆಸಗುತಾ ಬಳಿಕೇ ॥
ಕೆಲಬಲದ ಸುಪವಿತ್ರಪೆಡೆಗಳ ।
ಸಲೆ ನಿರೀಕ್ಷಿಸುತಿರ್ದು ರಾತ್ರಿಯ ।
ಕಳೆದರಾ ಪಂಪಾಪತಿಯ ಸನ್ನಿಧಿಯೊಳಾ ದಿನದೇ ॥೨೭॥

**॥ ಮುಗಿದುದು ॥ ಒಟ್ಟು ಪದಗಳು ॥೨೨೭॥**



|| ಓಂ ಚಕ್ರತೀರ್ಥಮಗ್ನಭಕ್ತೋದ್ಧಾರಕಾಯನಮಃ ||

# ಆರನೆಯ ಸಂಧಿ

**ಸೂಚನೆ :—** ಬಾಲಯೋಗಿಯು ಚಕ್ರತೀರ್ಥದೆ ।
ಲೀಲೆಯೊಂದನು ತೋರಿ ಭಕ್ತರ ।
ಪಾಲಿಸಿದನವರಲ್ಲಿ ಕಂಡತಿಭಕ್ತಿಭಾವವನು ॥

ಮರುದಿನದ ಬೆಳಗಿನೊಳು ಪಂಪಾ ।
ವರನ ದರ್ಶನವೆಸಗಿ ನದಿಗೈ ।
ತರುತೆ ಪ್ರಾತರ್ವಿಧಿಯ ಮುಗಿಸಿದ ಬಳಿಕವರು ನಲವಿಂ ॥
ಪರತರದ ತತ್ಕ್ಷೇತ್ರದಗಲದೊ ।
ಳಿರುವ ದೇವಾಲಯ ಸುತೀರ್ಥೋ ।
ತ್ಕರವೆ ಮೊದಲಾದೆಡೆಗಳನು ನಿರುಕಿಸಲು ತೆರಳಿದರು ||೧||

ನಿರವಧಿಯ ಗುಡಿಗೋಪುರಂಗಳೊ ।
ಳಿರುವ ಸುಣ್ಣಕಲ್ಲಿನೊಳು ಕೆತ್ತಿದ ।
ಪರಿಪರಿಯ ಸಿಂಗರದ ವಿಗ್ರಹಗಳನು ಕೂರ್ಮೆಯೊಳು ॥
ಪರಿಕಿಸುತೆ ಕನ್ನಡದ ಶಿಲ್ಪಿಗ ।
ಳುರುತರದ ಜಾಣ್ಮೆಯನು ಬಣ್ಣಿಸಿ ।
ಕರೆದು ತೋರಿಸುತಿರ್ದನಾ ಭಕ್ತರ್ಗೆ ಗುರುಸುತನು ||೨||

ಒಂದೆ ಕಂಬದೆ ಬಾಳೆದಿಂಡುಗ ।
ಳಂದದಿಂ ತಳ್ತಿರುವ ಕಂಬಗ ।
ಳೊಂದರಿಂ ಪದಿನಾರು ಸಂಖ್ಯೆಯವರೆಗೆ ವಿಠ್ಠಲನಾ ॥
ಮಂದಿರದೊಳಿರಲೀಕ್ಷಿಸುತ್ತನು ।
ವೊಂದಿದಂತಿರೆ ಶೋಭಿಸುವ ಬಹು ।
ಸುಂದರದ ಮೂರ್ತಿಗಳ ಕಂಡಚ್ಚರಿಗೊಳುತೆ ಬಳಿಕೇ ||೩||

ಇಲ್ಲ ಕನ್ನಡನಾಡನುಳಿದಿ ।
ನೆಲ್ಲಿಯೀ ವಿಧ ಶಿಲ್ಪಕಲೆ ಯೆಂ ।
ದೆಲ್ಲ ನಾಡವರಿಂದ ಮನ್ನಣೆವಡೆದ ಕನ್ನಡದಾ ॥
ಸಲ್ಲಲಿತ ಶಿಲ್ಪಿಗಳ ಬೆಳ್ಪಸ ।
ವಿಲ್ಲಿ ಮೈವೆತ್ತಿರ್ಪುದೋ ಎನೆ ।
ಕಲ್ಲ ತೇರದು ಕಂಗೊಳಿಸಿದುದು ಗುಡಿಯ ಮುಂಗಡೆಯೊಳ್ ||೪||

ಅರಳಿದಕ್ಷಿಗಳಿಂದೆ ಮೂವರು ।
ಪರಿಕಿಸುತ್ತಾ ತೇರ ವಿಸ್ಮಯ ।
ಭರಿತರಾಗುತೆ ಬಳಿಯ ಮಾತಂಗಾಚಲವನೇರಿ ॥
ಧರೆಗೆ ಹೆಸರಾಗಿರ್ದ ಕನ್ನಡ ।
ದೊರೆಗಳಾ ಹಾಳಾದ ವಿಜಯ ನ ।
ಗರಿಯೊಳಿನ್ನುಂ ಕಾಣುವವಶೇಷಗಳ ನೋಡಿದರು ॥೫॥

ಮುಗಿಲ ಮುಟ್ಟಿದ ಜೀರ್ಣಕೋಟೆಗ ।
ಳಗಲದೊಳು ಸಿಂಗರದ ನಿಲಯಾ ।
ದಿಗಳನೈಸಲೆ ಮೊದಲಿಗರು ನಿರ್ಮಿಸಿದ ಜಾಣ್ಮೆಯನು ॥
ಬಗೆಯೆ ಪುಟ್ಟಿದ ಮೋದದಿಂದಂ ।
ಮಿಗಿಲೆನಿಪ ಖೇದಮದೆ ನೂರ್ಮಡಿ ।
ಯೊಗೆದುದವುಗಳ ದುಸ್ಥಿತಿಯನೀಕ್ಷಿಸಿದ ಗುರುಸುತಗೇ ॥೬॥

ನಾಡೆ ನವರಾತ್ರಿಯೊಳು ಪೂರ್ವದೆ ।
ನಾಡಹಬ್ಬವ ನೃಪರು ಕನ್ನಡ ।
ನಾಡ ಕವಿವಿಬುಧಾದಿಗಳನೊಡಗೂಡಿ ಸಂಭ್ರಮದೇ ॥
ಮಾಡುತಿರ್ದರವೆಲ್ಲಿಯಾ ನೆಲೆ ।
ನೋಡಿಮೊಡನೆಯೆ ಮನಕೆ ದುಃಖವ ।
ನೀಡಿದುದು ಮಾನೌಮಿ ಕಟ್ಟೆಯದೆಂಬ ಪೆಸರರಿಯೇ ॥೭॥

ಅರಿಯೆ ಗುರುಚರಮೂರ್ತಿಗಳ ಶಂ ।
ಕರನಮರ್ಚನೆ ಬೋಧೆಗಳಿಗಾ ।
ಕರಮೆನಿಸಿ ಮೆರೆದಾ ಮಠಂಗಳಿಗೊದಗಿದವನತಿಯಾ ॥
ವಿರತಿಯಿಂದಿರುತಿರ್ಪ ಗುರುವಿಗ ।
ಮಿರದೆ ಕಂಬನಿಯುದುರಿತಿನ್ನೇ ।
ನೊರೆವೆನಾ ಪಾಳಾದ ನಗರದ ದುಃಖಚಿತ್ರವನು ॥೮॥

ಹಿಂದೆ ವೈಭವದುನ್ನತಿಯ ತಾ ।
ನೊಂದಿ ಮೆರೆದಾ ವಿಜಯ ನಗರದೊ ।
ಳಿಂದಿನವನತಿ ದೃಶ್ಯಗಳ ನೋಡುವುದು ಸಾಕೆಂದು ॥
ಬಂದನಾ ಶಿವಯೋಗಿ ತದ್ಗಿರಿ ।
ಯಿಂದಿಳಿದು ಜವದಿಂದೆ ತನ್ನವ ।
ರಿಂದೆ ತಳ್ತಾ ರಾಮಲಕ್ಷ್ಮಣರಾಲಯದ ಬಳಿಗೇ ॥೯॥

ಆ ರುಚಿರ ಮೂರ್ತಿಗಳ ನೋಡಿ ವಿ ।
ಚಾರಶೀಲೆಯು ಭಕ್ತಭಾರ್ಯೆಯು ।
ಸಾರತರದೀ ಕ್ಷೇತ್ರದಲ್ಲಿವರಂ ಪ್ರತಿಷ್ಠಿಸಲು ॥
ಕಾರಣವ ಕಥಿಸೆನಲು ತದ್ಗಂ ।
ಭೀರಮುದ್ರೆಯ ಯೋಗಿವರನಿಂ ।
ತಾ ರಮಣಿಗುಸುರಿದನು ಪೂರ್ವದ ಕಥೆಯನಾ ಗುಡಿಯೊಳ್ ॥೧೦॥

ಹಿಂದೆ ವನವಾಸದೊಳು ತಾನಿ ।
ರ್ದಂದು ಜಾನಕಿಯಪಹರಣದಿಂ ।
ನೊಂದು ಲಕ್ಷ್ಮಣನೊಡವೆರೆದು ತದ್ರಾಮನೀಯೆಡೆಗೇ ॥
ಬಂದು ಪಂಪಾಪತಿಯ ದರ್ಶನ ।
ವೊಂದಿ ಶಬರಿಯು ಗೈದ ಸತ್ಕೃತಿ ।
ಯಿಂದೆ ತಣಿದನು ಬಳಿಯೊಳಾ ಪಂಪಾಸರೋವರದಾ ॥೧೧॥

ಬಳಿಕೆ ಪೂರ್ವದ ನಮ್ಮ ಕನ್ನಡ ।
ಕುಲದ ಸುಗ್ರೀವಾಂಜನಾಸುತ ।
ನಳರೆ ಮೊದಲಾಗಿರ್ದ ಕಲಿಗಳ ಸಾಯಮಂ ಪಡೆದು ॥
ಕೊಳುಗುಳದೆ ರಾವಣನ ಕೊಂದಾ ।
ನಳಿನಮುಖಿ ಸೀತೆಯನು ತಂದೀ ।
ಮಲರಹಿತ ಸತ್ಕ್ಷೇತ್ರದೊಳು ನೆಲಸುತ್ತೆ ಕೆಲದಿನವು ॥೧೨॥

ಕನ್ನಡದ ವನಿತೆಯರ ಸಂಸ್ಕೃತಿ ।
ಯುನ್ನತಿಯ ದರ್ಶಕಳ ಶಬರಿಯ ।
ಸನ್ನುತದ ಸೇವೆಯನು ಮತ್ತಂ ತನಗೆ ನೆರವಾದ ॥
ಕನ್ನಡದ ಕಲಿಗಳ ಗುಣಂಗಳ ।
ತನ್ನ ಕಾಂತಾಮಣಿಗೆ ಸುಮುದೋ ।
ತ್ಪನ್ನ ವಚನದೆ ರಾಮಚಂದ್ರನು ಬಿತ್ತರಿಸೆ ಬಳಿಕೇ ॥೧೩॥

ಸತಿಯು ಸೀತೆಯು ಶಬರಿ ಗೈದಾ ।
ಕೃತಿಯ ಕೇಳ್ದಾ ಭಕ್ತಳಂ ತಾ ।
ನತುಳ ಮುದದಿಂದಪ್ಪಿಕೊಳ್ಳುತೆ ಪರಸಿ ಮೇಣ್ ತನ್ನಂ ॥
ಪತಿಯ ಸನ್ನಿಧಿಗೊಂದಿಸಿದ ವಿ ।
ಶ್ರುತ ಚರಿತ್ರರ ಕನ್ನಡಿಗರುಪ ।
ಕೃತಿಗೆ ಪುತ್ರಪ್ರೇಮವಿಟ್ಟಳು ತನ್ಮಹಾಬಲರೊಳ್ ॥೧೪॥

ವನದ ವಾಸದ ಕಷ್ಟಮುಂ ರಾ ।
ವಣನಿನಾದಾ ತೊಡರುಗಳುಮಂ ।
ನೆನೆಯದೆಯೆ ನಿಜರಾಜಧಾನಿಗೆ ಪೋಪುದಂ ತೊರೆದು ॥
ಮನೆಯುವರನೆಂತಂತೆ ಕನ್ನಡ ।
ಜನರ ಕಾಣುತ್ತವರೊಡನೆ ಕೆಲ ।
ದಿನವು ಸೀತಾಲಕ್ಷ್ಮಣಾನ್ವಿತರಾಮನಿಂತಿರುತೇ ॥೧೫॥

ಬಳಿಕಯೊಧ್ಯೆಗೆ ಪೊರಮಡುವುದನು ।
ತಿಳುಪೆ ರಾಮನು ತನ್ನ ಕನ್ನಡ ।
ಕಲಿಗಳಿಗೆ ಕಳವಳವನೆಂತೋ ತಳೆದು ಬೀಳ್ಗೊಟ್ಟು ॥
ವಿಲಸಿತದ ತನ್ಮೂರ್ತಿಗಳನೀ ।
ನೆಲೆಯೊಳತಿಮುದದಿಂ ಪ್ರತಿಷ್ಠಿಸಿ ।
ಸಲೆ ಸಮರ್ಚನೆ ಗೈಯತೊಡಗಿದರಂದಿನಿಂದವರು ॥೧೬॥

ಇಂತವರ ಸಂಸ್ಥಾಪನೆಯ ವೃ ।
ತ್ತಾಂತಮಂ ನಲೆ ವಿವರಿಸುತೆ ನಿ ॥
ಶ್ಚಿಂತಮೂರ್ತಿಯು ಗುರುಸುತನು ನಿಜಭಕ್ತರಿಗೆ ಮತ್ತಂ ॥
ಎಂತಿರುವುದುರಿವಾಯ್ತೆ ನಮ್ಮ ।
ವ್ರಾಂತದಾ ಪೂರ್ವಜರ ನರಳ ।
ಸ್ವಾಂತದಮುಳಿಸ ಭಕ್ತಿಭಾವಮುದೆಂದೊರೆದು ಬಳಿಕೇ ॥೧೭॥

ಗುಡಿಯ ಮುಂಗಡೆಯಲ್ಲಿರುವ ನದಿ ।
ಯೆಡೆಗೆ ನಡೆತಂದಾ ಗುರುವು ತ ।
ಣ್ಪಡರಿದುಪಕವ ನೋಡಿ ನಾಂ ಕ್ರೀಡಿಸುವೆನೀ ಜಲದೊಳ್ ॥
ತಡೆಯಿರಿಸಿತುಂ ಪೊಕ್ಕೆನುತೆ ಸಂ ।
ಗಡಿಗರಿಗೆ ಸಲೆ ತಿಳುಪಿ ಹೊಳೆಯಾ ।
ಮಡುವಿನೊಡಲೊಳು ಪೋಗುತಿರೆ ಕಂಡೋರ್ವ ವೃದ್ಧೆಯು ತಾಂ ॥೧೮॥

ಯಾರು ನೀಂ ನೋಡಲ್ಲಿ ಚಕ್ರಾ ।
ಕಾರದಿಂ ಸುಳಿಗೊಂಡು ತಿರುಗುವ ।
ವಾರಿಯುಂ ಸಾಮಾನ್ಯಮಲ್ಲಿದು ಚಕ್ರತೀರ್ಥಂ ತಾಂ ॥
ದೂರದಿಂ ಮಜ್ಜನವಗೈಯ್ಯಾ ।
ನೀರಮಧ್ಯದೆ ಪೋಗಿ ಮುಳುಗಿದ ।
ರಾರುಮಸುವಿಡಿದುಳಿಯರೆಂದವಸರದೆ ಕೂಗುತಿರೆ ॥೧೯॥

ಹಿರಿಯರಾಡುವ ಮಾತುಗಳು ದೇ ।
ವರವಚನವೆಂದರಿದರೊರೆವರು ।
ಗುರುವರನೆ ಪೋಗದಿರು ಪೋಗದಿರುದಕಮಧ್ಯದೊಳು ॥
ಮರಳು ತೀರಕ್ಕೆಂದು ಭಕ್ತರು ।
ಕರಗಳನು ಮುಗಿದೆರೆಯುತಿರಲ ।
ಲ್ಲಿರುವರುಂ ಬೇಡೆಂದು ಕೈಗಳನೆತ್ತಿ ಪೇಳುತಿರೇ ॥೨೦॥

ಕೇಳುತದನೊಳಗೊಳಗೆ ನಗುತಂ ।
ಬಾಲಯೋಗಿಯು ಭಕ್ತರಿಗೆ ನಿಜ ।
ಲೀಲೆಯೊಂದನು ತೋರ್ಪೆನೆಂದಾಲೋಚಿಸುತೆ ಮನದೇ ॥
ಕಾಲುಜಾರಿದುದೆಂಬವೋಲ್ ಬಿ ।
ದ್ದೇಳುತಂ ಮೇಣ್ ಮುಳುಗಿ ನೀರೊಳು ।
ಮೇಲೆ ಬರದೆಯೆ ಮೈಗರೆದನಾ ಚಕ್ರತೀರ್ಥದೊಳು ॥೨೧॥

ಎಷ್ಟು ಕೂಗಿದೊಡಾಲಿಸದೆ ತಾಂ ।
ನಿಷ್ಠೆಯಿಲ್ಲದೆ ಪೇಳ್ದ ನುಡಿಯೊಳ್ ।
ದುಷ್ಟ ಹುಡುಗನು ಮುಳುಗಿ ಹೋದನೆ ಚಕ್ರತೀರ್ಥದೊಳು ॥
ಕಷ್ಟವದು ಮೀರುವುದು ದೈವಾ ।
ಕೃಷ್ಟಗತಿಯನು ದುರ್ವಿಧಿಯೆ ಸಂ ।
ತುಷ್ಟವಾದುದೆ ನುಂಗಿದೆಯ ಕಣ್ಣಿದುರೊಳೇ ಮಗನಾ ॥೨೨॥

ಎಂದು ವೃದ್ಧೆಯು ಗೋಳಿಡುತ್ತಿರೆ ।
ಬಂದುದಿಲ್ಲವು ಮುಳುಗಿದಾ ಗುರು ।
ನಂದನನು ಮೇಲಕ್ಕದೆನಿತೋ ನಿಮಿಷಗಳು ಗತಿಸೇ ॥
ನಿಂದವರಿಗಂ ಮರಣವಾಯ್ತಾ ।
ಕಂದಗಂಬುವ ದಿಟವೆನಿಸುತಿರ ।
ಲಂದು ಗುಂಡಿಗೆಯೊಡೆದುದಾ ಭಕ್ತರ್ಗದೇನೊರೆವೇಂ ॥೨೩॥

ನೆಲಕೊರಗಿ ಕಣ್ಣೀರ ಮಡುವೊಳ್ ।
ಮುಳುಗಿ ಮೈಮರೆದಿರ್ದ ಕಾಂತೆಗೆ ।
ಬಳಿಯೊಳಿರ್ದವರೆಸಗುತಿರೆ ಶೀತೋಪಚಾರಗಳಾ ॥
ಜಲದೊಳಸುವಿಡಿದಿರ್ದೊಡಾತನ ।
ನೆಳೆದು ತರುವೆನದಾಗದಿರ್ದೊಡೆ ।
ಕಳೆದುಕೊಳ್ಳುವೆನೆನ್ನ ಹರಣವನೆಂದು ಬಗೆಯುತ್ತೇ ॥೨೪॥

ಧುಮುಕಿದನು ತಚ್ಚಕ್ರತೀರ್ಥದೊ ।
ಳಮಿತಧೈರ್ಯದೆ ಭಕ್ತನಾಗಳೆ ।
ಭ್ರಮವಿದೇಕೆಂದಡ್ಡಗಟ್ಟಿದ ಜನರ ನೂಂಕುತ್ತೇ ॥
ಗಮಿಸೆ ಮೂರ್ಛೆಯದೆದ್ದು ನಲಿದಾ ।
ರಮಣಿ ಜಲದಿಂ ಮೇಲೆ ತರುವನು ।
ವಿಮಳ ಮೂರ್ತಿಯನೆನ್ನ ಪತಿ ಯೆಂದರಿದು ನೋಡುತಿರೇ ॥೨೫॥

ಮರಣದಂಜಿಕೆಯುಳಿದು ನೀರೊಳ್
ಗುರುವರನು ನಿಜಯೋಗಮುಹಿಮೆಯೊ ।
ಳಿರಲು ಸಿಗದೆಯೆ ಮುಳುಗಿ ಹುಡುಕುವ ತನ್ನ ಭಕ್ತಂಗೇ ॥
ಅರಸಿ ಕಾಣದೆ ಜನಿತ ದುಃಖದ ।
ಶರಧಿಯೆನಿಸಿದ ಚಕ್ರತೀರ್ಥದೊ ।
ಳಿರದೆ ತಾನೀಸುತ್ತೆ ತಡಿಯೊಂದಿದ ಪತಿಯ ಕಂಡು ॥೨೬॥

ದೊರೆತುದಿಲ್ಲೇ ಸ್ವಾಮಿ ಎಮ್ಮನು ।
ತೊರೆದು ನೀರೋಳ್ ಮುಳುಗಿ ಪೋದನೆ ।
ಹರಣವಿನ್ನಿರದಿರದು ಜಲಚರ ಜಂತುಗಳು ಬಿಡದೇ ॥
ಗುರುತನುವನೆಳೆದೊಯ್ದು ಬಿಟ್ಟವೊ ।
ನೆರೆ ಹುಡುಕಿದೆಯೊ ಇಲ್ಲವೋ ಪೇಳ್ ।
ದುರಿತಭಾಗಿಗಳಾದೆವೆಂದೊರಳಾಡಿದಳು ಸತಿಯು ॥೨೭॥

ಹೊರಟುದೇತಕೆ ನಾವು ಯಾತ್ರೆಗೆ ।
ಸರಣಿಯೊಳು ಗುರು ಕಂಡುದೇತಕೆ ।
ಗಿರಿಗೆ ತೆರಳದೆ ಹಾಳಹಂಪೆಗೆ ಬಂದುದಿನ್ನೇಕೇ ॥
ಮರಳಿ ಹೋಗದೆ ಬೆಳಗಿನೊಳೆ ಮೇಣ್
ಪರಿಕಿಸಲ್ಕೀ ಮರಣದೆಡೆಗೈ ।
ತರಲಿದೇಕಿಂತಾದುದೇಕೆಂದಳಲ್ದಳಾ ತನ್ವೀ ॥೨೮॥

ಮಾಡೆ ಯಾತ್ರೆಯ ಪುಣ್ಯವದು ಕೈ ।
ಗೂಡುವುದು ದಿಟವೆಂದು ಬಂದಿರೆ ।
ಮಾಡಬಾರದ ಪಾಪವಿದು ಸಂಘಟಿಸಿತೀ ದುರಿತಂ ॥
ಮಾಡಲೇನಂ ಪೋಪುದೆನುತಂ ।
ಜೋಡಿಸಿದ ಕೈಗಳೊಳು ಪತಿಯನು ।
ಬೇಡಿಕೊಂಡಳುತಿರ್ದಳಾ ಗುರುಭಕ್ತಿಶೀಲೆಯು ತಾಂ ॥೨೯॥



ಶ್ರೀ ಬಾಲತಪಸ್ವಿ ಫಲಾಹಾರೇಶನು ಹಂಪೆಯ ಚಕ್ರತೀರ್ಥದಲ್ಲಿ ತನಗೆ ಆತ್ಮಾರ್ಪಣವನ್ನು ಮಾಡಿದ ಭಕ್ತದಂಪತಿಗಳನ್ನು ಉದ್ಧರಿಸಿದುದು.

ದೈವಲೀಲೆಯಿದಳದಿರೆಲೆ ಗುರು ।
ದೇವನಂತೀ ಚಕ್ರತೀರ್ಥಕೆ ।
ಜೀವವರ್ಪಿಸೆ ದುರಿತವಳಿಯುವುದಲ್ಲದಿನ್ನಿಳಿದಾ ॥
ಆವ ಮಾರ್ಗವುದಿಲ್ಲ ನೋಡೆನು ।
ತಾ ವಿಮಳ ಭಕ್ತಾಗ್ರಣಿಯು ಪಂ ।
ಪಾವಿರೂಪಾಕ್ಷನ ನೆನೆದು ಹಾರಿದನು ನದಿಯೊಳಗೇ ॥೩೦॥

ಕಂಡಿದನು ಸತಿ ಕಡು ಜವದೆ ತಡಿ ।
ಗೊಂಡು ಪತಿಪರಮಾತ್ಮನಾ ಬೆಂ ।
ಗೊಂಡು ಭಕ್ತ್ಯಾವೇಶದಿಂ ಧುಮುಕಿದಳು ತೀರ್ಥದೊಳು ॥
ಕಂಡು ತದ್ದಂಪತಿಗಳಲ್ಲಿಡೆ ।
ಗೊಂಡ ನಿಜಗುರುಭಕ್ತಿಯಚ್ಚರಿ ।
ಗೊಂಡು ನಿಶ್ಚಲರಾಗಿ ನಿಂತಿರೆ ನೆರೆದ ಯಾತ್ರಿಕರು ॥೩೧॥

ಬಾಲಸೂರ್ಯನ ತೆರದೆ ಹೊಳೆಯುತೆ ।
ಬಾಲಯೋಗಿಯು ದಂಪತಿಗಳಾ ।
ತೋಳುಗಳ ಸಲೆ ಪಿಡಿದುಕೊಂಡಾ ತೀರ್ಥಜಲದಿಂದೇ ॥
ಮೇಲೆ ಬಂದನು ಮೆಚ್ಚುತವರ ವಿ ।
ಶಾಲಭಕ್ತಿಗೆ ನೋಡುತದ್ಭುತ ।
ಲೀಲೆಯಿದ ಯಾತ್ರಿಕರು ಬಂದೆರಗುತಿರೆ ನಿಜಪದಕೇ ॥೩೨॥

ಏನೊ ನಿನ್ನಯ ಮಹಿಮೆಯಿದು ಮತಿ ।
ಹೀನಳೆನ್ನಂ ಕ್ಷಮಿಸಿ ರಕ್ಷಿಸು ।
ನಾನರಿಯದೆಯೆ ದುಷ್ಟನೆಂದೆನು ನಿನಗೆ ಮದ್ಗುರುವೇ ॥
ಜ್ಞಾನರೂಪನೆಯೆನುತೆ ವಿನಯಾ ।
ಧೀನೆ ವೃದ್ಧೆಯು ಬಂದು ವಂದಿಸಿ ।
ಜಾನಿಸುತೆ ಕೈಮುಗಿದು ನಿಂತಿರೆ ದಂಪತಿಗಳವರು ॥೩೩॥

ದಿಟವು ದಿಟವಾ ಮಲ್ಲಿಕಾರ್ಜುನ ।
ನಟನೆಯಿದು ಮಾಹೇಶ್ವರರ ವರ ।
ವಟುಸುವೇಷವನಾಂತು ತಾನೇ ನಾವು ಬರುತಿರ್ಪಾ ॥
ಅಟವಿಯೊಳು ಮೈದೋರುತೆಮ್ಮಯ ।
ಕುಟಿಲಭಕ್ತಿಪರೀಕ್ಷೆಗೀ ವಿಧ ।
ಘಟನೆಯನು ನಡೆಸಿದನೆನುತ್ತಡಿಗೆರಗಿ ಗುರುವರಗೇ ॥೩೪॥

ತಂದೆ ನಿನ್ನಯ ಮಹಿಮೆಯರಿಯದೆ ।
ಕೊಂಡುಬಿಟ್ಟೆವು ಗುರುವನೆಂಬಾ ।
ಮಂದ ಬುದ್ಧಿಯು ಘಟಿಸುತೀ ದುರ್ಭಾವನೆಯು ನಮ್ಮೊಳ್ ॥
ಬಂದು ತಾನಿಂತಾಗಿಸಿದುದಿ ।
ನ್ನೆಂದಿಗಂ ಸಾಮಾನ್ಯಬಾಲಕ ।
ನೆಂದು ನಿನ್ನಂ ತಿಳಿಯೆವಿದು ದಿಟವೆಂದು ಪೊಗಳಿದರು ॥೩೫॥

ಮಂದಹಾಸದೆ ಗುರುವು ನೀರಿನ ।
ದೊಂದು ಕಂಟಕವಿರ್ದುದೆನಗದು ।
ಬಂದು ನಿಮ್ಮಯ ಭಕ್ತಿಮಹಿಮೆಯೊಳಸುಗಳೆಯದಂತೇ ॥
ಇಂದು ಬಯಲಾಯ್ತೆನ್ನು ಕುತ್ತುಗ ।
ಳೊಂದು ನನಗಿಲ್ಲೆನುತ ಸಂಮುದ ।
ದಿಂದವರನೊಡಗೊಂಡು ಬರುತಿರೆ ಬಳಸಿ ಯಾತ್ರಿಕರು ॥೩೬॥

ಮುಂದುಗೊಂಡಡಿಗೆರಗುತಿರೆ ಮೇಣ್ ।
ಹಿಂದೆಯೇ ತದ್ವೃದ್ಧ ಬರುತಿರ ।
ಲಂದು ಸರ್ವರಿಗಿತ್ತು ಸಲ್ಪರಕೆಗಳ ಶಿವಯೋಗೀ ॥
ಬಂದು ಭಕ್ತರ್ಪೆರಸಿ ತೃಪ್ತಿಯ ।
ನೊಂದಿ ಪೂಜಾಭೋಜನಾದಿಗ ।
ಳಿಂದೆ ಕೆಲಹೊತ್ತಿರ್ದನಾ ಪಂಪಾಪತಿಯ ಗುಡಿಯೊಳ್ ॥೩೭॥

ಬಳಿಕೆ ಪಂಪಾಧವನ ದುರಿತವ ।
ಕಳೆವ ದರ್ಶನವೆಸಗಿ ನೇತ್ರ ।
ಸ್ಥಲಕೆ ಬಿಜಯಂಗೈಸಿಕೊಂಡಾ ಲಿಂಗಮೂರ್ತಿಯನು ॥
ತರಳನಲ್ಲಿಂ ಯೋಗಿ ಹೃದಯವ ।
ಸೆಳೆಯುವಾ ಶ್ರೀಶೈಲಯಾತ್ರೆಗೆ ।
ತಳೆಯುತಂ ನಿಜಭಕ್ತರೆಸಗುವ ಸೇವೆಯಾ ಸುಖಮಂ ॥೩೮॥

**॥ ಮುಗಿದುದು ॥ ಒಟ್ಟು ಪದಗಳು ॥೨೬೪॥**

|| ಓಂ ಚರರೂಪಿಮಲ್ಲೇಶಾಯನಮಃ ||

## ಏಳನೆಯ ಸಂಧಿ

**ಸೂಚನೆ:—** ಶ್ರೀಗಿರಿಗೆ ನಲಿದಾಗಮಿಸುತಾ |
ಯೋಗಿ ಮಲ್ಲೇಶ್ವರನ ದರ್ಶನ |
ವಾಗೆ ತನ್ನವರರಿಯದಂತಿರೆ ವೈಗರೆದನಲ್ಲಿ ||

ದಾರಿಯೊಳಗಲ್ಲಲ್ಲಿ ಗಿರಿವನ |
ಚಾರು ಶೋಭೆಯ ನೋಡಿ ನಲಿಸುತೆ |
ದೂರದಾ ಯಾತ್ರೆಯನೆ ಮರೆಯುತೆ ಲಿಂಗಪೂಜೆಯೊಳು ||
ಭೂರಿ ಕಾಲವ ಕಳೆಯೆ ಲಿಂಗಾ |
ಚಾರ ಪರಶಿವಯೋಗಿಯದರಿಂ |
ದೇರುತಿರ್ದುದು ಮುದವು ತದ್ಭಕ್ತರ್ಗೆ ಮಾನಸದೇ ||೧||

ತಂದೆತಾಯಿಗಳಾತ್ಮಮಠದ |
ಲ್ಲೊಂದು ಕೊರತೆಯದಿಲ್ಲದಂತಾ |
ನಂದನನನುಪಚರಿಸುತಿರ್ದಪೊಲವರು ಪಯಣದೊಳು ||
ನಿಂದನೆಲೆಯೊಳು ದಿನದಿನಕ್ಕೊಂ |
ದೊಂದು ರೀತಿಯ ಭೋಜನಾದಿಗ |
ಳಿಂದೆ ತಣಿವಂತುಪಚರಿಸುವರು ತಮ್ಮ ಗುರೂತ್ತಮಗೇ ||೨||

ಮೊದಲು ಗುರುದರ್ಶನದೊಳೇ ನಂ |
ಬಿದರು ಪರಶಿವನೆಂದು ಹಂಪೆಯೊ |
ಳೊದಗಿದಾ ಲೀಲೆಯೊಳು ದೃಢವಾಯ್ತವರ ನಂಬಿಕೆಯು ||
ಒದಗಿದಾ ನಂಬಿಕೆಯ ಫಲವೇ |
ಸದಮಲಾತ್ಮನ ಸೇವೆಯೆನುತಂ |
ಮುದದ ಕಡಲೊಳಗೀಸುತಿರ್ದರು ಗುರುವಿನೊಡನಿರುತೇ ||೩||

ಮಿನುಗುತಿರೆ ಕಿರುನಗೆಯು ಮೊಗದೊಳ್ |
ದಣಿಯದೆಯೆ ತಾಂ ಯೋಗಶಕ್ತಿಯೊ |
ಳನುಗಮಿಸುವಾ ಯೋಗಿಪುಂಗವನಮಿತಮಹಿಮೆಯೊಳು ||
ಎನಿತೊ ದೂರಂ ನಡೆದೊಡಂ ನಂ |
ಜನಿಸದಾಯಸವದು ಸುಭಕ್ತ |
ರ್ಗೆನಿತೊ ಪರಿಯಿಂದುಪಚರಿಸೆ ಸಾಕೆನಿಸದಾತನನು ||೪||

ಇಂತು ಪಯಣದೆ ಕೆಲದಿನಗಳನು ।
ಸಂತಸದೆ ಕಳೆಯುತ್ತೆ ಶೈಲ ।
ಪ್ರಾಂತದಡವಿಗೆ ಬರಲು ಗಿಡುಮುರಬಳ್ಳಿ ಪೊದೆಗಳೊಳಂ ॥
ಆಂತು ಬಹುವರ್ಣಗಳ ಚರಿಸುವ ।
ನಂತವಿಧ ಪಕ್ಷಿಗಳೊಳತಿಬಲ ।
ಜಂತುಗಳೊಳಂ ತಳ್ತು ತತ್ಕಾಂತಾರವೊಪ್ಪಿದುದು ॥೫॥

ಮಿಂದು ತಿಳಿಗೊಳದಲ್ಲಿ ಸುಮಗಳ ।
ಗಂಧವನು ಧರಿಸುತ್ತೆ ಭೂರುಹ ।
ವೃಂದ ಮಧ್ಯದಿನೈತರುತೆ ತದ್ಭಕ್ತರಂದದೊಳು ॥
ಬಂದು ಮಂದಾನಿಲನು ಗುರುವೆಡೆ ।
ಯೊಂದಿ ಸೇವಿಸುತಲ್ಲಿ ಶುಚಿತೆಯ ।
ನೊಂದಿದನು ಮಹಿತಾತ್ಮರಂ ಸೇವಿಪುದು ನಿಷ್ಫಲವೇಂ ॥೬॥

ಅಲ್ಲಿ ಪೂಜಾದಿಗಳ ತೀರಿಸಿ ।
ಮಲ್ಲಿಕಾರ್ಜುನ ಪರ್ವತದ ಪಥ ।
ದಲ್ಲಿ ಪೋಗಲು ತೊಡಗಿ ಕೆಲಬಲದಲ್ಲಿ ಗಿಡಕಡರ್ದಾ ॥
ಬಳ್ಳಿ ಪೊದೆಯಿಂ ತಳ್ತಗಾಢದ ।
ಕೊಳ್ಳಗಳ ಶೋಭೆಯನು ನೆರೆ ಸಂ ।
ಫುಲ್ಲಮಾನಸರಾಗಿ ನೋಡುತೆ ಮೂವರಾಗಮಿಸೇ ॥೭॥

ಪೆಂಪನೊಂದಿದ ಶಿವಚರಿತ್ರೆಗ ।
ಳಂ ಪಲರ್ ಪೇಳುತಿರೆ ತತ್ಕಥೆ ।
ಯಿಂಪನೀಂಟುತ್ತಿರೆ ಕಿವಿಗಳಿಂದುಳಿದ ಜನರಿಂತು ॥
ಸೊಂಪಿಡಿದ ತದ್ಗಿರಿಸರಣಿಯೊಳ ।
ಲಂಪಿನಿಂ ಮಲ್ಲಯ್ಯನದ್ರಿಯ ।
ಗುಂಪುಗುಂಪಾಗೇರುತಿರ್ದರನೇಕಯಾತ್ರಿಕರು ॥೮॥

ಬೆಟ್ಟಗಾಡಿನ ಜನರು ತಮ್ಮಯ ।
ಹೊಟ್ಟೆಯನು ಪೊರೆವುದಕೆ ಹೆಗಲೊಳ ।
ಗಿಟ್ಟ ಡೋಲೆಗಳಲ್ಲಿ ಸಿರಿವಂತರನು ಕುಳ್ಳಿರಿಸಿ ॥
ಬಟ್ಟೆಗೊಂಡೋಡುತಿರಲವರೊಳು ।
ಪುಟ್ಟಿದಾಯಾಸವನು ಮರುಕದ ।
ದಿಟ್ಟಿಯೊಳೆ ಪರಿಹರಿಸಿದನು ಗುರುವವರ ಕಂಡೊಡನೇ ॥೯॥

ಮರುಕವೇ ಮೈವೆತ್ತು ಬರುವಂ ।
ತಿರುವ ಯೋಗಿಯ ಕಂಡು ತದ್ಭೂ ।
ಧರದ ವನರವೆ ಮಾರ್ಗದೊಳಗಲ್ಲಲ್ಲಿ ಮರಕಡರ್ದು ॥
ಮೆರೆವ ಪೂಬಳ್ಳಿಗಳ ಸುಮಗಳ ।
ಸುರಿದು ತದ್ಗುರುಮಸ್ತಕದೆ ತಾಂ ।
ಹರಿಸದಿಂ ನುತಿಸಿದಳು ಪಕ್ಷಿಗಳಿಂಚರದೆ ಬಳಿಕೇ ॥೧೦॥

ಬರುವನಳ್ತಿಯ ಕುವರನೆನ್ನೆಡೆ ।
ಗುರು ಮುದದೊಳೀ ದಿನದೊಳೆಂದಾ ।
ಗಿರಿಯ ಮಲ್ಲಯ್ಯನು ನಲವಿನಿಂ ಪ್ರಕೃತಿ ದೇವಿಗೆ ತಾಂ ॥
ಸುರುಚಿರದ ವಾತಾವರಣಮಂ ।
ವಿರಚಿಸುವುದೆಂದಾಜ್ಞೆಯಿತ್ತಂ ।
ತಿರಲು ಗುರುವಾಗಮಿಸುವಾ ದಿವಸಂ ಪ್ರಸನ್ನತೆಯಿಂ ॥೧೧॥

ಏರೆ ವನಲಕ್ಷ್ಮಿಯ ಸಿರಿಯು ಕ ।
ಣ್ಗೇರೆ ಪಕ್ಷಿಗಳಿಂಚರವು ಕಿವಿ ।
ಗೇರೆ ಬೀಸುವ ತಣ್ಣೆಲರ ಸಂಸ್ಪರ್ಶಮಂಗಕ್ಕೇ ॥
ಏರೆ ಪೂಗಳ ಕಂಪು ನಾಶಿಕ ।
ಕ್ಕೇರೆ ಸಂಮುದವೆದೆಗೆ ಗುರುವರ ।
ನೇರುತಿರ್ದನು ಭಕ್ತಸಂಗತನಾಗಿ ಬೆಟ್ಟಕ್ಕೇ ॥೧೨॥

ದಾರಿಯೊಳಗಲ್ಲಲ್ಲಿ ನಿರ್ಝರ ।
ವಾರಿಯೊಳ್ ಸಲೆ ಮಿಂದು ದಿನದಾ ।
ಚಾರಗಳ ಸಕ್ರಮದೆ ಕೊರತೆಯದಿಲ್ಲದಂದದೊಳು ॥
ತೀರಿಸುತೆ ಬರುತಿರಲು ಕಿರಿದೇ ।
ದೂರದೊಳು ಶಿವನಿಳಯ ಶಿಖರವು ।
ತೋರಿದುದು ಪಾರಿದುದು ಬಲಗಣ್ ಗುರುಗೆ ಕಂಡದನು ॥೧೩॥

ಸುರುಚಿರದ ತಚ್ಛಿಖರಪೀಠದೆ ।
ಪರಮತೇಜೋಮೂರ್ತಿ ಜಂಗಮ ।
ನಿರುವುದನು ಕಂಡಾಗುರುವು ವಿಸ್ಮಯ ಮುದಂಗಳೊಳು ॥
ಪರಿಕಿಸುತೆ ತನ್ಮಲ್ಲಿಕಾರ್ಜುನ ।
ಗುರುವೆ ಚರವೇಷವನು ತಾಳ್ದತಿ ।
ಕರುಣದಿಂ ಮೈದೋರ್ದನೆಂದರಿದಾ ಸುಮಾರ್ಗದೊಳೇ ॥೧೪॥

ಸದಮಲದ ಭಕ್ತಿಯೊಳು ಸಾಷ್ಟಾಂ ।
ಗದ ನಮಸ್ಕೃತಿಗೈಯುತಿರೆ ತ ।
ದ್ವಿಧದೆ ತಾವುಂ ನಮಿಸುವಾ ದಂಪತಿಗಳನು ನೋಡಿ ॥
ಚದುರತನದಿಂ ಕೇಳ್ದನಾ ಶಿಖ ।
ರದೊಳು ಜಂಗಮಮೂರ್ತಿ ಕುಳಿತಿ ।
ರ್ಪುದನು ನೀವುಂ ಕಂಡಿರೇನೆಂದಾ ಪರಮಯೋಗೀ ॥೧೫॥

ತಂದೆ ನೀಂ ಗೈದಂತೆ ನಾವುಂ ।
ವಂದನೆಯನೆಸಗಿದೆವು ಶಿಖರಮು ।
ದೊಂದೆ ತೋರುವುದೆಮಗೆ ಕಾಣನು ಜಂಗಮೋತ್ತಮನು ॥
ಎಂದೊರೆಯೆ ನನಗಲ್ಲಿ ಜಂಗಮ ।
ನೊಂದು ದಿವ್ಯಾಕೃತಿಯು ತೋರುವು ।
ದೆಂದು ಮೇಣ್ ಪರಿಕಿಸುವನಿತರೊಳಗಿಲ್ಲವಾ ರೂಪು ॥೧೬॥

ಕಿರುನಗೆಯೊಳಾ ಯೋಗಿ ಬಯಲಾ ।
ಗಿರುವೆಯಾ ನೀಂ ಮಲ್ಲಿಕಾರ್ಜುನ ।
ಗುರುವೆ ನಿನ್ನಯ ನಾಟಕವನಿದ ಬಲ್ಲೆನಲ್ಲವೆ ನಾಂ ॥
ಪರಮ ಭಕ್ತಿಯ ರಜ್ಜುವಿಂದಂ ।
ನೆರೆ ಭವಚ್ಚರಮೂರ್ತಿಯನು ಕ ।
ಟ್ಟಿರಿಸಿ ಪೂಜಿಸಿ ನನ್ನಭೀಷ್ಟವ ಪಡೆವೆನಿದು ದಿಟವು ॥೧೭॥

ಈ ತೆರದ ಭಕ್ತಿಯ ವಿನೋದದ ।
ಮಾತುಗಳನಾಡುತ್ತೆ ಗಮಿಸೆ ಪು ।
ನೀತಮೂರ್ತಿಯು ದಂಪತಿಗಳವರಚ್ಚರಿಯನೊಂದಿ ॥
ಈತನದ್ಭುತ ಚರಿತನೆಮಗೀ ।
ಮಾತಿನರ್ಥವೆ ತಿಳಿದುದಿಲ್ಲಿ ।
ನ್ನೀತನೇ ತನ್ಮಲ್ಲಿಕಾರ್ಜುನನೆಂಬ ನಂಬಿಕೆಯು ॥೧೮॥

ಸಾಕೆನುತೆ ನಿಜ ಗುರುಪದವನವ ।
ಲೋಕಿಸುತ್ತಂ ಬಂದು ಕಂಡರು ।
ಲೋಕನಾಥನ ಮಲ್ಲಿಕಾರ್ಜುನನಾ ಮಹಾಲಯವಾ ॥
ನೂಕುತೋರ್ವರನೋರ್ವರಲ್ಲಿ ಪಿ ।
ನಾಕಿಯಾ ಗುಡಿಯಲ್ಲಿ ಯಾತ್ರಿಕ ।
ಲೋಕವೊಳವುಗುವುದ ನಿರೀಕ್ಷಿಸಿ ನಿಂದರಚ್ಚರಿಯಿಂ ॥೧೯॥

ಎಂತು ನಾವೀ ಜನಸುಘರ್ಷಣ ।
ದಂತರದೆ ಪೋಗುತ್ತೆ ತಚ್ಚಿರ ।
ಶಾಂತಿದಾಯಕ ಲಿಂಗದರ್ಶನ ಗೈವುದೆನುತವರು ॥
ಚಿಂತಿಸುತ್ತಿರೆ ಗುಡಿಯೊಳಾ ಗುರು ।
ತಾಂ ತೆರಳುತಿರಲಾ ಮಹಿಮಗಿನಿ ।
ತುಂ ತಡೆಯನೆಸಗದೆಯೆ ದಾರಿಯ ಬಿಟ್ಟರುಳಿದವರು ॥೨೦॥

ಷಡಗರದೆ ಗುರುವರನ ಬೆಂಬಳಿ ।
ವಿಡಿದು ಪೋಗುತೆ ಸತಿಪತಿಗಳುರೆ ।
ನೋಡಿ ನಲಿದರು ಗಿರಿಯ ಮಲ್ಲೇಶ್ವರನ ಯೋಗಿಯು ತಾಂ ॥
ಮಿಡುಕದಕ್ಷಿಗಳಿಂದೆ ನಲವಿನ ।
ಕಡಲೆನಿಸಿದಾ ಲಿಂಗಮೂರ್ತಿಯ ।
ನಡೆ ನಿರೀಕ್ಷಿಸಿದನು ಸುಖಾಶ್ರುಗಳುದುರೆ ನೇತ್ರಗಳಿಂ ॥೨೧॥

ನೋಡಿ ತಣಿಯದು ದಿಟ್ಟ ಗುಡಿಯೊಳು ।
ಕೂಡಿ ಕಿಕ್ಕಿರಿಯುತ್ತೆ ಲಿಂಗವ ।
ನೋಡುವಲ್ಲಿಯ ಯಾತ್ರಿಕರು ಮೇಲ್ವರಿವುದನು ಕಂಡು ॥
ಬೇಡವೀ ಸಮಯದೊಳಗಿಲ್ಲಿಯೆ ।
ವಾಡಿ ಜಾಸಿಸುತಿರುವುದೆಂದೊಡ ।
ಗೂಡಿಕೊಂಡಾ ಭಕ್ತರನು ಮರಳಿದನು ಗುರುಸುತನು ॥೨೨॥

ನಿಲದೆ ಬರುತಾ ಯೋಗಿ ಗುಡಿ ಹೊರ ।
ವಳಯಕೈತರುತಿರಲನೂಟಿಯ ।
ಕೆಲರು ಭಕ್ತೋತ್ತಮರು ತನ್ನನೆ ಜನರ ಮಧ್ಯದೊಳು ॥
ಕೆಲಬಲದೊಳರಸುತ್ತೆ ಬರುವುದ ।
ತಿಳಿದು ಕಂಡೊಡನೆನ್ನನಿಲ್ಲಿಯೆ ।
ಉಳಿಯಗೊಡರಿವರೆಂದು ಬಗೆದನು ಮನದೊಳೀ ತೆರದೇ ॥೨೩॥

ಗಿರಿಯ ಮಲ್ಲೇಶ್ವರನು ಮತ್ತಂ ।
ಚರಸುವೇಷದೆ ನನಗೆ ತಾಂ ಗೋ ।
ಚರಿಸಿ ನನ್ನಿಷ್ಟಾರ್ಥವೀಯುವವರೆಗೆಮೀನೆಲೆಯಾ ॥
ತೊರೆಯೆ ನಾನದರಿಂದಮೀಗಳೆ ।
ತೊರೆಯುತಿವರೆಲ್ಲರನು ಮರೆಯಾ ।
ಗಿರುವೆನೀಗಿರಿವನದ ನಿರ್ಜನದೆಡೆಯೊಳಾ ಬಳಿಕೇ ॥೨೪॥

ಸಲ್ಲಲಿತ ಚರವೇಷವಾಂತಾ ।
ಮಲ್ಲಿಕಾರ್ಜುನನಿಂ ಮದಿಷ್ಟವ ।
ನೆಲ್ಲವನು ನಾಂ ಪಡೆದ ಸಮನಂತರದೊಳೀ ನೆಲೆಯೊಳ್ ॥
ನಿಲ್ಲದೆಯೆ ದೇಶಕ್ಕೆ ತೆರಳು ।
ತ್ತಲ್ಲಿ ತಾಯ್ತಂದೆಗಳೆ ಮೊದಲಾ ।
ದೆಲ್ಲರಂ ಮೇಣೀ ಸುದಂಪತಿಗಳನು ಕಾಣುವೆನು ॥೨೫॥

ಎಂದು ಮನದೊಳು ಬಗೆದು ಭಕ್ತರ ।
ಮುಂದೆ ನಿಮ್ಮುಪಚಾರದೊಳಗೇ ।
ನೊಂದು ಕೊರತೆಯದಿಲ್ಲದಂತೀ ಕ್ಷೇತ್ರಕೈತಂದು ॥
ಇಂದು ಮಲ್ಲೇಶ್ವರನ ದರ್ಶನ ।
ವೊಂದಿ ಧನ್ಯತೆಯೊಂದಿದೆನು ಮ ।
ತ್ತೊಂದು ನೋಡುವುದಿಲ್ಲ ಬಗೆಯಳಿದೆಡಗೆ ಪೋಗುವೆನು ॥೨೬॥

ಎಂದೊರೆಯುತನಿತರೊಳದೃಶ್ಯತೆ ।
ಯೊಂದೆ ಗುರುವಾ ಭಕ್ತರಚ್ಚರಿ ।
ಯೊಂದಿ ಜನಮಧ್ಯದೊಳು ಸುತ್ತಲು ನೋಡಿ ಕಾಣದೆಯೇ ॥
ಬಂದ ಕಣ್ಣೀರಿಂದ ಮೀಯುತೆ ।
ನಿಂದು ಚಿಂತೆಯ ಹೊರೆಯ ಹೊತ್ತಿರ ।
ದಂದು ತಲೆಯಂ ಕೊಡಹಿ ಕುಳಿತರು ನಿಂದ ತಾಣದೊಳೇ ॥೨೭॥

ದುರಿತತಮಮಂ ಕಳೆವ ಗುರು ಭಾ ।
ಸ್ಕರನು ತಾನಡಗಿದನೆ ತದ್ವರ ।
ಚರಣ ಸೇವೆಯ ಪರಮ ಸೌಖ್ಯವು ಕರಗಿದುದೆ ನಮಗೇ ॥
ದೊರೆತ ಸಿರಿ ಬಯಲಾಯ್ತೆ ಪುಣ್ಯದ ।
ಪರುಷವದು ದೂರಾಯ್ತೆ ಮತ್ತಿ ।
ನ್ನಿರುವುದಿಲ್ಲೇಕೆನುತಳಲ್ದಳು ಭಕ್ತನಾ ಭಾರ್ಯೆ ॥೨೮॥

ಆವ ಪೂರ್ವದ ಪುಣ್ಯದೊಳೊ ಗುರು ।
ದೇವನೆಮ್ಮೊಡನಿರ್ದು ನಮ್ಮಯ ।
ಸೇವೆಯಂ ಕೈಕೊಂಡನಿನ್ನೆಗಮಿಲ್ಲಿ ನಿಮಿಷದೊಳೇ ॥
ತೀಪಿದೀ ಜನವಲ್ಲಿ ಮೈಗರೆ ।
ದಾವ ನೆಲೆಯನೊ ಸೇರಿದನು ಪರಿ ।
ಭಾವಿಸುವೊಡಿನ್ನಾಗದಾತನ ದರ್ಶನಮದೆಂದು ॥೨೯॥

ನುಡಿಯುತಳಲುವ ಭಕ್ತಪುಂಗವ ।
ನೆಡೆಗೆ ತದ್ಗುರುತಿಲಕನನೆ ಸಲೆ ।
ಹುಡುಕುವಾತುರದಿಂದೆ ಬಂದರಸೂಟಿಯೂರವರು ||
ನಡೆದ ವಿಷಯವ ಭಕ್ತಮುಖದಿಂ ।
ಬಿಡದೆ ಕೇಳುತೆ ತಮ್ಮ ಗ್ರಾಮದೆ ।
ನಡೆದ ತದ್ಗುರುವರನ ವಿಸ್ಮಯಲೀಲೆಯುಸುರಿದರು ||೩೦||

ಸೇಳಲಿಂತಾ ಸತಿಪತಿಗಳಿದ ।
ನಾಲಿಸುತೆ ಕಡು ದುಃಖದಿಂ ಕ್ಷಣ ।
ಕಾಲದಿಂ ಮೊದಲಿಲ್ಲಿಗೈತಂದಿರಲು ನೀವುಗಳು||
ಬಾಲಕನ ಸಲೆ ನಿಲ್ಲಿಸಲ್ಕನು ।
ಕೂಲವಿತ್ತೇಗೈವುದಿಲ್ಲಿಯೆ ।
ಲೀಲೆಯಾಣ್ಮನು ಮಾಯವಾದನು ನಮ್ಮ ದುರ್ವಿಧಿಯಿಂ ||೩೧||

ಒರೆಯುತಿಂತತಿ ದುಃಖಭಾರದೊ ।
ಳಿರುವ ತದ್ದಂಪತಿಗಳೊಡನಾ ।
ಪರಮಭಕ್ತರು ಕೊಳ್ಳಗಳ ಬಳ್ಳಿಗಳ ಪೊದೆಗಳೊಳು ||
ಗಿರಿಯ ಗುಹೆಗಳೊಳಿನ್ನುಳಿದ ಭೀ ।
ಕರದ ನೆಲೆಗಳೊಳಂ ಬಿಡದೆ ತಾ ।
ವರಸತೊಡಗಿದರೇನೊರೆವೆನಾ ಬಾಲಯೋಗಿಯನು ||೩೨||

ವಿಲಸಿತವ ಶಿಖರೇಶ್ವರಾದಿ ।
ಸ್ಥಲಗಳೊಳು ಪಾತಾಳ ಗಂಗೆಯ ।
ನೆಲೆಯೆ ಮೊದಲಾದಖಿಳತೀರ್ಥಂಗಳೊಳು ಸಂಚರಿಸಿ ||
ಕಳೆಯುತನ್ನೋದಕದ ಚಿಂತೆಯ ।
ಬಳಲಿ ಬೆಂಡಾಗುತ್ತೆ ಹಗಲನು ।
ಕಳೆದೊಡಂ ಗುರು ಕಾಣಲಿಲ್ಲವದಾವೆಡೆಗಳೊಳಗಂ ||೩೩||

ಅರಸಿ ನಿಮ್ಮಣುಗನನು ಬಿಡದೆಯೆ ।
ಕರೆದುಕೊಂಡೈತರುವೆವೆಂದಿದ ।
ನೊರೆದು ಬಂದೆವು ಗುರುವಿನಾ ಜನನೀ ಜನಕರಿದಿರೊಳ್ ||
ದೊರೆದುದಿಲ್ಲವು ಗುರುಕುಮಾರನು ।
ತಿರುಗಿ ಪೋಗುವುದೆಂತೆನುತೆ ನಿ ।
ರ್ಭರದ ಚಿಂತೆಯನೊಂದಿ ಕುಳಿತರಸೂಟಿಯೂರವರು ||೩೪||

ಪಡೆವೆನೆನ್ನಯ ಗುರುವನೆಂಬಾ ।
ಕಡು ಮುದದ ಕಡಲಾಗಿ ಕಲ್ಮ ।
ಳ್ಪಿಡಿದ ಕಾಡೊಳು ಭಕ್ತಭಾರ್ಯೆಯು ಪತಿಯ ಬೆಂಬಳಿಯಾ ॥
ಪಿಡಿದು ತಾನುಂ ಕಂಡ ನೆಲೆಯೊಳು ।
ಪುಡುಕೆ ಕಾಣದೆ ತಮ್ಮ ಜೀವಿತ ।
ದೊಡೆಯನನು ನೆಲಕೊರಗಿದಳು ದುಃಖಾತಿರೇಕದೊಳು ॥೩೫॥

ಕಾಂತನಾ ಗುರುಭಕ್ತಿ ಮೋಹ ।
ಸ್ವಾಂತೆಯಂ ನಿಜಕಾಂತೆಯಂ ತಾ ।
ನೆಂತೊ ನಲ್ನುಡಿಯಿಂದೆ ಸಂತೈಸುತ್ತಿರಲು ಒಳಿಕೇ ॥
ಕಂತುಹರ ಮಲ್ಲಯ್ಯನೆಲ್ಲರ ।
ಚಿಂತೆಗಳೆಯಲು ವೃದ್ಧ ಜಂಗಮ ।
ನಂತೆ ವೇಷವನಾಂತು ಬಂದನು ಭಕ್ತರಿದ್ದೆಡೆಗೇ ॥೩೬॥

ಎಲ್ಲರುಂ ಸಂಮ್ಮುಖದೊಳಾ ಗುರು ।
ಮಲ್ಲಿಕಾರ್ಜುನ ದರ್ಶನಾದಿಗ ।
ಳಲ್ಲಿ ತೊಡಗಿರೆ ನೀವು ಚಿಂತಾಕ್ರಾಂತಮನರಾಗಿ ॥
ಇಲ್ಲಿರುವುದೇಕೀ ವನಿತೆ ನೆಲ ।
ದಲ್ಲಿ ಮಲಗಿದುದೇಕೆ ನಿಮ್ಮಗ ।
ಳಲ್ಲಿರುವ ವಸ್ತುಗಳ ಕಳವಾಗಿರುವುದೇನಯ್ಯಾ ॥೩೭॥

ಎಂದು ನುಡುಗುವ ಮೆಲ್ಸರದೆ ಬಗೆ ।
ನೊಂದವೋಲ್ ಕೇಳುತಿರೆ ಸರ್ವರು ।
ವಂದಿಸುತ್ತುಚಿತಾಸನದೆ ಕುಳ್ಳಿರಿಸಿ ಜಂಗಮನಾ ॥
ಬಂದಿರಿಲ್ಲಿಗೆ ತಕ್ಕ ಸಮಯಕೆ ।
ತಂದೆ ಮಲ್ಲಯ್ಯನ ಕೃಪಾಬಲ ।
ದಿಂದೆ ನೀವೆನುತಧಿಕ ವಿನಯದೆ ನಿಂದು ಕೈಮುಗಿದು ॥೩೮॥

ವಸ್ತು ಕಳೆದಡೆ ಚಿಂತಿಸೆವು ಪರ ।
ವಸ್ತು ಕಳೆದಿದೆ ನಾವು ಧರಿಸುವ ।
ಮಸ್ತಕದ ಮಣಿ ಕಳೆದು ಪೋಗಿದೆ ಜಂಗಮೋತ್ತಮನೇ ॥
ದುಸ್ತರದ ಚಿಂತೆಯಿದು ಪ್ರಶ್ನೆಯ ।
ಪುಸ್ತಕವದಿರೆ ನೋಡಿ ಪೇಳಾ ।
ಪುಸ್ತಕವೆ ನಲೆ ಹೊತ್ತುಕೊಳ್ಳುವೆವಯ್ಯ ನಿಮ್ಮಡಿಯಾ ॥೩೯॥

ಎಂದು ಮೊದಲಿಂ ಕೊನೆವರೆಗೆ ನಡೆ ।
ದಂದನುಂ ವಿವರಿಸಲು ಕಿರುನಗೆ ।
ಯಿಂದವರಿಗಾ ವೃದ್ಧ ಜಂಗಮನಿಂತು ವಚಿಸಿದನು ॥
ಒಂದು ಯೋಚನೆ ಬೇಡ ಹುಡುಕುವ ।
ದಂದುಗವ ನಿಲ್ಲಿಸಿರಿ ಯಾತ್ರಿಕ ।
ವೃಂದದಂತೀ ಕ್ಷೇತ್ರದೆಲ್ಲಾ ಪುಣ್ಯಕೃತಿಗಳನು ॥೪೦॥

ಮುಗಿಸಿ ಪಯಣವನೆಸಗಿರಿನ್ನಾ ।
ಸುಗುಣಿ ಬಾಲಕನಮಿತ ಮಹಿಮನು ।
ಸಿಗನು ನಗದೊಂದೆಡೆಯೊಳಾ ಶ್ರೀಮಲ್ಲಿಕಾರ್ಜುನನಂ ॥
ಸೊಗಸಿನಿಂ ನಿಜಲಿಂಗಪೂಜಾ ।
ದಿಗಳ ಬಲದಿಂದೊಲಿಸಿ ತನ್ನಿ ।
ಷ್ಟಗಳ ಪಡೆದೈತರುವನಿಲ್ಲಿರದಂತೆ ನಿಮ್ಮೆಡೆಗೇ ॥೪೧॥

ಎಂದುಸುರ್ದು ಗುಡಿಯೊಳಗೆ ಪೋಗುವೆ ।
ನೆಂದು ಮೆಲ್ಲಗೆ ನಡೆದದೃಶ್ಯತೆ ।
ಯೊಂದೆಯವನವರೀಕ್ಷಿಸುತೆ ವಿಸ್ಮಿತ ಹೃದಯದಿಂದೇ ॥
ತಂದೆ ಮಲ್ಲಯ್ಯನೆ ಚರಾಕೃತಿ ।
ಯಿಂದೊಲಿದು ಬಂದಿಂತು ಪೇಳಿದ ।
ನೆಂದು ತದ್ವಾಕ್ಯದೊಳು ನಂಬಿಕೆಯಿಟ್ಟು ತಾಂ ಬಳಿಕೇ ॥೪೨॥

ಮೆಲ್ಲ ಮೆಲ್ಲನೆ ಬಿಡುತೆ ಚಿಂತೆಯ ।
ನೆಲ್ಲರಂತಿರೆ ತಾವು ತದ್ಗಿರಿ ।
ಮಲ್ಲಿಕಾರ್ಜುನದರ್ಶನಾದಿಯ ಗೈದು ತಮ್ಮೂರ್ಗೇ ॥
ಇಲ್ಲದಿರೆ ಮೊಗದಲ್ಲಿ ನಗೆ ಮುದ ।
ವಿಲ್ಲದೆಂತೋ ಮರಳಿ ನಡೆದುದ ।
ನೆಲ್ಲವನು ಪೇಳಿದರು ಗುರುಜನನೀ ಜನಕರಿದಿರೊಳ್ ॥೪೩॥

ಒರೆದುದನು ಕಿವಿದೆರೆದು ಕೇಳಲು ।
ಹೊರಡೆ ನಿಟ್ಟುಸಿರುದಿರೆ ಕಂಬನಿ ।
ಯೊರಗಿ ನೆಲಕುರುಳಾಡಿ ದುಃಖಿಸತೊಡಗಿ ಶರಭಾಂಬೇ ॥
ಗಿರಿಯ ಯಾತ್ರೆಗೆ ಪೋದ ಭಕ್ತರು ।
ಕರೆದು ತರುವರು ತನುಭವನನೆಂ ।
ದುರು ಮುದದೆ ಕಾದಿರಲು ಬರಿಗೈಯಿಂದೆ ಮರಳಿದಿರಾ ॥೪೪॥

ಮಗನ ಶಿವತೇಜೋಮಯದ ನಗೆ ।
ಮೊಗವನಿನ್ನೆಂದೀಕ್ಷಿಪೆನೊ ನಗೆ ।
ಮಿಗೆ ತದುಕ್ತಿಯ ಸುಧೆಯನೀಂಟುವುದೆಂದಿಗೋ ಕಿವಿಯಿಂ ॥
ಬಗೆವೊಡೀ ಮಠಕೆಂದು ತಾಂ ನ ।
ಲ್ಮಗನು ನಡೆತಂದಿಲ್ಲಿ ಪೂಜಾ ।
ದಿಗಳನೆಸಗುತೆ ಸರ್ವರಿಗೆ ಸೊಗವೀವನೋ ತಿಳಿಯೇಂ ॥೪೫॥

ಇಂತು ಪಲಬಗೆಯಿಂ ಪ್ರಲಾಪಮ ।
ನಂತವಿಲ್ಲದೆ ಗೈವ ದುಃಖಾ ।
ಕ್ರಾಂತ ಮಾತೆಯ ಬಳಿಗೆ ಭಕ್ತರು ಬಂದು ಸಂತೈಸಿ ॥
ಚಿಂತೆ ಬಿಡು ನೀಂ ಜಂಗಮೋತ್ತಮ ।
ನಿಂ ತಿಳಿದುಕೊಂಡಾ ಭವಿಷ್ಯ ।
ಕ್ಕೆಂತುಮಿಲ್ಲವು ಸಟೆಯು ನಾವದ ನಂಬಿರುವೆವಮ್ಮಾ ॥೪೬॥

ಎಂದು ಪೇಳಿದ ಭಕ್ತರೊಡನೈ ।
ತಂದಿರುವ ತದ್ದಂಪತಿಗಳುಂ ।
ಮುಂದುವರಿಯುತೆ ಜಂಗಮನ ವಾಕ್ಯವನೆ ಬಲಪಡಿಸಿ ॥
ಸಂದೆಗವನುಳಿ ತಾಯೆ ವಿಶ್ವಸು ।
ವಂದ್ಯನಾದಾ ಗುರುವು ತಪ್ಪದೆ ।
ಬಂದು ನಿಮಗಾನಂದವಾಗಿಸದಿರನು ಕೆಲ ದಿನಕೇ ॥೪೭॥

ಇಂತೆನುತೆ ಜನನಿಯನು ಮೌನವ ।
ನಾಂತಿರುವ ಗುರುಜನಕನುಮನುರೆ ।
ಶಾಂತಹೃದಯರನಾಗಿಸುತೆ ಕೆಲದಿನಗಳಾ ಮಠದೇ ॥
ಸಂತಸದೆ ಗುರುಪಿತೃಗಳಂಘ್ರಿಗ ।
ಳಂತಿಕದೊಳಿರ್ದುಪಚರಿಸುತಂ ।
ತಾಂ ತಳರ್ದರು ಪಡೆದು ಪರಕೆಯನವರು ತಮ್ಮೂರ್ಗೇ ॥೪೮॥

ತನುಜನೆಮ್ಮೆಡೆಗಾಗಮಿಸುವಂ ।
ತನಘನೇ ಶ್ರೀಶೈಲಪತಿಯೇ ।
ಘನಕೃಪೆಯ ಮಾಡೆಂದು ಲಿಂಗಾರ್ಚನೆಯು ಮುಗಿದೊಡನೇ ॥
ಅನುದಿನದೆ ತನ್ಮಲ್ಲಿಕಾರ್ಜುನ ।
ನನು ನೆನೆದು ದಿನಗಳೆಯುತಿರ್ದರು ।
ಮನವ ಮಗನಲ್ಲಿಟ್ಟು ಗುರುಜನನೀ ಜನಕರವರು ॥೪೯॥

**॥ ಮುಗಿದುದು ॥ ಒಟ್ಟು ಪದಗಳು ॥೩೧೪॥**

|| ಓಂ ಫಲಾಹಾರೇಶಾಯನಮಃ ||

# ಎಂಟನೆಯ ಸಂಧಿ

**ಸೂಚನೆ:—** ಗುರುಸುತಗೆ ಚರವೇಷದಿಂದೈ ।
ತರುತೆ ಗಿರಿವರ ಮಲ್ಲಿಕಾರ್ಜುನ ।
ನುರು ಮುದದೆ ವೈದೋರ್ಧ್ವನಾತನ ಭಕ್ತಿವಶನಾಗಿ ॥

ಯಾತ್ರೆ ಮುಗಿಯುವವರೆಗಮಾಸುಪ ।
ವಿತ್ರ ಬಾಲಕನಳ್ತಿಯಿಂ ಕಾ ।
ಲತ್ರಯದೊಳರ್ಚಿಸುವ ಲಿಂಗಕೆ ತಾಂ ಸಮರ್ಪಿಸಿದ ॥
ಪತ್ರಫಲದಶನದೊಳೆ ಮಾನವ ।
ನೇತ್ರಗೋಚರನಾಗದಂತೆ ವಿ ।
ಚಿತ್ರತರ ಗಿರಿವನದ ಮಧ್ಯದೆ ದಿನಗಳೆದು ಬಳಿಕೇ ||೧||

ಘನತರದ ತದ್ಗಿರಿಯ ನಿರ್ಜನ ।
ವನದ ಮಧ್ಯದೆ ಪೆರ್ಮರದ ಗುಂ ।
ಪಿನೊಳು ಪೂಗಳ ಕಂಪಿನೊಳು ಮೆಲ್ಲೆಲರ ಸೋಂಕಿನೊಳಂ ॥
ಇನಿದನಿಯ ಪಕ್ಕಿಗಳೊಳಂ ತ ।
ಣ್ಪನು ತಳೆದ ತಿಳಿಗೊಳದೊಳಂ ತಾಂ ।
ಮನವೆಳೆವ ನೆಲೆಯೊಂದ ಹುಡುಕುತ್ತಲ್ಲಿ ನೆಲಸಿದನು ||೨||

ಶಿಶಿರ ಋತು ತಾಂ ಪೋಗೆ ಬಂದುದು ।
ಮಿಸುಪ ಮಧುಮಾಸಮದು ಸಿಂಗರ ।
ದ ಸಿರಿಯಂ ವನದೇವಿಗರ್ಪಿಸುವರ್ಚಕನ ತೆರದೇ ॥
ಎಸೆದುದೆಲ್ಲೆಡೆಯಲ್ಲಿ ಪಲ್ಲವ ।
ವಿಸರದಿಂ ನವಕುಸುಮದಿಂ ಶೋ ।
ಭಿಸುವ ತರುಲತೆಗಳ ನಿವಹವಾ ಕಾನನಾಂತರದೇ ||೩||

ನಗೆಯುಮರೆ ನವಮಲ್ಲಿಗೆಗೆ ತುಂ ।
ಬಿಗೆ ಮದಂ ಪಿರಿದಾಯ್ತು ತರುಗಳೊ ।
ಳೊಗೆಯೆ ತಳಿರೇರಿದುದು ಸವಿ ಕೋಗಿಲೆಗೆ ಕೊರಳಲ್ಲಿ ॥
ಮೊಗಮಲರೆ ತಾವರೆಗೆ ಹಂಸಿಗೆ ।
ಮಿಗಿಲೆನಿಸಿದುದು ಗಮನದೊಳು ಸಿರಿ ।
ಸೊಗಸು ಪೆರ್ಚಿರೆ ಪಣ್ಗೆ ನಾಲಿಗೆ ಹಿಗ್ಗಿದುದು ಗಿಳಿಗೇ ||೪||

ಅಳಿಗಳಿಗೆ ಸುಮಮಧುವ ಕುಡಿಸುತೆ ।
ಗಿಳಿಗಳಿಗೆ ಫಲರಸವ ನೀಂಟಿಸು ।
ತೆಳೆದಳಿರನುಣಿಸುತ್ತೆ ಕೋಗಿಲೆಗಳಿಗೆ ನೆರಳಲ್ಲಿ ॥
ಮಲಗಿಸುತೆ ಮಿಗವಿಂಡ ತಾನವು ।
ಗಳನು ಪೊರೆವೀ ಗುಣದೆ ಚೂತಂ ।
ಗಳಿಸುದುದು ಮಾನುರವೆಸರಸಫಲತೆಯ ಚೈತ್ರದೊಳು ॥೫॥

ಏರೆ ದಿನಮಣಿಕರದೆ ಬಿಸಿ ತಾ ।
ನೇರಿಮುದು ತಿಳಿಗೊಳಮೊಡಲ ತ ।
ಣ್ಪೇರೆ ವನಲಕ್ಷ್ಮಿಯೊಳಗೈಸಿರಿ ವಿರಹಿಗಳ ಮನದೇ ॥
ಏರಿಮುದು ಸಂಕಟವು ಜಗಮುಪ ।
ಕಾರಿಯೆಂಬ ಬಸಂತನೊಳಗಂ ।
ತೋರಲಿಲ್ಲವು ಸಮತೆಯದ ಸಾಧಿಸುವುದರಿದಲ್ತೇಂ ॥೬॥

ಜನರೊಳನುರಾಗಮುದರಲ್ದು ನಿಜ ।
ವನಿತೆಯರನೊಡಗೊಂಡು ರತಿಸುಖ ।
ವನುಭವಿಸತೊಡಗಿದರು ಸಾಧಕರಾದ ತಾಪಸರು ॥
ಮನದ ಚಾಂಚ್ಯಲ್ಯದೊಳು ಜಪತಪ ।
ವನೆ ತೊರೆದರಿನ್ನಾ ವಸಂತದೆ ।
ಗಣಿಸಲಸಗಳಮೆಲ್ಲರಿಗಮನುಕೂಲವೆಸಗುವುದು ॥೭॥

ಬಾಲಯೋಗಿಯು ತದ್ವಸಂತಸು ।
ಕಾಲಮೊಳು ನಿಜಲಿಂಗ ಪೂಜಾ ।
ಶೀಲಕನುಕೂಲವ ತದಮಳಸ್ಥಲದೆ ನೆಲಸುತ್ತೇ ॥
ಕಾಲಹರನಾ ಮಲ್ಲಿಕಾರ್ಜುನ ।
ನಾಲಯುವನುಳಿದಲ್ಲಿಯೇ ಸುವಿ ।
ಶಾಲಭಕ್ತಿಯೊಳಾ ಗುರುವನೊಲಿಸಲ್ಕೆ ತೊಡಗಿದನು ॥೮॥

ಪ್ರತಿದಿವಸದುದಯದೊಳು ಲಿಂಗ ।
ವ್ರತಿಯು ತಿಳಿಗೊಳದಲ್ಲಿ ಮಜ್ಜನ ।
ಕೃತಿಯ ಮುಗಿಸುತೆ ಪತ್ರಪುಷ್ಪಾದಿಗಳನಳವಡಿಸಿ ॥
ಅತಿಮುದದೆ ತಾನೆಸಗಿ ವಿಧಿಸ ।
ಮ್ಮತದ ಲಿಂಗಾರ್ಚನೆಯ ಬಳಿಕು ।
ನ್ನತ ಶಿವಧ್ಯಾನದೊಳೆ ಬಹು ವೇಳೆಯನು ಕಳೆಯುವನು ॥೯॥

ಶಿವಸಮನು ಮನವೆಳಸೆ ವನದಾ ।
ನವಫಲವನೊಮ್ಮೊಮ್ಮೆ ಭುಂಜಿಸಿ ।
ಸುವಿಮಳೋದಕವೀಂಟಿ ತಣಿವೇನೊಂದ ಬಯಸದೆಯೇ ॥
ಶಿವಪರಧ್ಯಾನಸ್ಥನಾಗಿರೆ ।
ದಿವಸವೆಲ್ಲವು ಪೋದೊಡಂ ಸಂ ।
ಭವಿಸವೆಚ್ಚರವೇನೊರೆವೆನಾತನ ಮನೋಬಲವಾ ॥೧೦॥

ಲಿಂಗಗತ ಚಿಚ್ಛಕ್ತಿಯೇ ವರ ।
ಜಂಗಮಾಕೃತಿವೆತ್ತು ತನ್ನಯ ।
ಕಂಗಳೊಳು ಹೊಳೆದಂತೆ ಕಾಣಲು ಜಾನವನು ನಿಲಿಸಿ ॥
ಮಂಗಳಾಕರ ಬಾರ ಜಂಗಮ ।
ಲಿಂಗರೂಪನೆ ಬಾರ ನಿನ್ನ ಪ ।
ದಂಗಳನು ನಲಿ ತೋರಿನ್ನೈ ವಂದಿಸುವೆನೆಂದೆರೆದು ॥೧೧॥

ದಿಟ್ಟಿಯಗಲಿಸಿ ನೋಡೆ ಮುಂದಿನ ।
ಬಟ್ಟೆಗೊಂಡೋಡುತ್ತೆ ತಳುವದೆ ।
ಬೆಟ್ಟದೊಳು ಚರಮೂರ್ತಿ ಮರೆಯಾದವೊಲು ಕಾಣಿಸಲು ॥
ಥಟ್ಟನೇ ನಗುತೆಲೆ ಗುರೂತ್ತಮ ।
ಪುಟ್ಟನಾದೆನ್ನೊಡನೆ ಬಿನದದ ।
ಗೊಟ್ಟಿಯಿದನಿನ್ನೆಷ್ಟುದಿನವೆಸಗುವಿಯೊ ನಾನರಿಯೇಂ ॥೧೨॥

ಎನುತೆ ಮತ್ತಂ ಸ್ಥಿರತೆ ಮನದೊಳು ।
ಘನತೆಯೊಂದುತ್ತಿರಲು ಗುರುಬಾ ।
ಲನು ನೆಗಳ್ಚುವ ಲಿಂಗಪೂಜಾಧ್ಯಾನಕಾರ್ಯವದು ॥
ದಿನದಿನಕೆ ಪೆರ್ಚುತ್ತೆ ನಿದ್ರಾ ।
ಶನವ ಬಿಡಿಸಿದುದಾತನನು ಕಾ ।
ನನದೆ ಪೊರೆವರು ಮಲ್ಲಿಕಾರ್ಜುನನಲ್ಲದಾರುಂಟು ॥೧೩॥

ಧ್ಯಾನಕಾಲದೊಳಲ್ಲದಾವಗ ।
ಮಾ ನಿರಂಜನ ಜಂಗಮಾಕೃತಿ ।
ಕಾನನದ ಗಿಡುಬಳ್ಳಿ ಪೊದೆಗಳೊಳೆಲ್ಲಿ ನೋಡಿದೊಡಂ ॥
ಕಾಣುತಿರೆ ಕಂಡವನು ತದ್ಗುರು ।
ಸೂನು ನಮಿಸುತೆ ಪೊಗಳಿ ಗುರುವೇ ।
ನೀನು ಕಾಡುವುದೇಕೆ ಮಾಯೆಯೊಳೆನ್ನ ನೀಪರಿಯಿಂ ॥೧೪॥

ನಂಬದಿರುವೆನೆ ನಿನ್ನ ಪಾದವ ।
ನಿಂಬುಗೊಂಡಿದೆ ದೋಷವೆನ್ನೊಳು ।
ನಂಬಿ ಕರೆದರೆ ಓ ಎನುವ ಶಿವನೆಂಬ ವಾಕ್ಯವನು ॥
ನಂಬಿ ನಿನ್ನ ಪದಾಂಬುರುಹದೊಳು ।
ತುಂಬಿಯಾಗುವೆನಯ್ಯ ಬಾರಾ ।
ಸಾಂಬನೇ ಗುರುಮಲ್ಲಿಕಾರ್ಜುನನೇ ದಯಾಂಬುಧಿಯೇ ॥೧೫॥

ಇಂತೆನಿತೊ ಸದ್ಭಕ್ತಿಗುಂಫಿತ ।
ವಿನಯವಾಕ್ಯದೆ ಕರೆದೊಡಂ ತಾಂ ।
ತನಗೆ ಮೈದೋರದಿರೆ ಮಾಯಾಮಯನು ಶಂಕರನು ॥
ಮನದೆ ಧೃತಿಗುಂದದೆಯೆ ಯೋಗ್ಯಾ ।
ಸನದೆ ಮಂಡಿಸಿ ಗೈದು ಲಿಂಗಾ ।
ರ್ಚನೆಯ ತದ್ಧ್ಯಾನದೊಳು ಮೈಮರೆದನು ತದರ್ಭಕನು ॥೧೬॥

ಕರಸರೋಜದ ಲಿಂಗಮುಧ್ಯದೆ ।
ಚರಸುವೇಷವು ಕಂಗೊಳಿಸಲದ ।
ಪರಿಕಿಸುತ್ತನಿಮಿಷದ ದಿಟ್ಟಿಯೊಳಿರುವ ಗುರವರಗೇ ॥
ಪರಮ ಸಂಮುದವೊದಗೆ ಮೈಯೊಳ್ ।
ನೆರೆ ನಿಮಿರೆ ನವಿರೋಳಿಯೈಸಲೆ ।
ಸುರಿಯುತಿರೆ ಸುಖಬಾಷ್ಪಮುಚಲಿತನಾಗಿ ಕುಳಿತನು ತಾಂ ॥೧೭॥

ಮೊದಲ ತೆರದಿಂ ಸ್ನಾನಪೂಜಾ ।
ವಿಧಿಯ ಕಾಲದ ಸಂಸ್ಮರಣಮಿ ।
ಲ್ಲದಿಸದಂತೆ ಸಮಾಧಿಗತನಾಗಿರುವ ಗುರುಸುತನಾ ॥
ಕದಲದಂಗದ ಮೇಲೆ ಬಂದೆರ ।
ಗಿದ ಖಗಂಗಳು ಪೋಗೆ ಹರಿದಾ ।
ಡಿದವು ಪಾವುಗಳಾದೊಡಂ ಸ್ಮೃತಿಯಿಲ್ಲದೇನೊರೆವೇಂ ॥ ೧೮ ॥

ಚಿತ್ತಜಾರಿಧ್ಯಾನಮಗ್ನನ ।
ಚಿತ್ತವೃತ್ತಿಯೆ ಜಂಗಮಾಕೃತಿ ।
ವೆತ್ತುದಿನ್ನಾ ತನುಕರಣಚೇಷ್ಟೆಗಳು ಬತ್ತಿದವು ॥
ಮತ್ತೊರೆವುದೇಂ ಬಾಲಯೋಗಿಯ ।
ವೃತ್ತಿಯಿದ ತಿಳಿದೆದೆ ಕರಗಿ ತಾ ।
ನಿತ್ತಲೈತರತೊಡಗಿದನು ಗಿರಿಮಲ್ಲಿಕಾರ್ಜುನನು ॥ ೧೯॥



ಶ್ರೀ ಬಾಲತಪಸ್ವಿ ಫಲಾಹಾರ ಶಿವಯೋಗಿಯ ಶ್ರೀಶೈಲ ತಪೋಽನುಷ್ಠಾನವು.

ಕಾವಿಯುಡೆ ವರಮಸ್ತಕದ ಸಲೆ ।
ತೀವಿರುವ ಜಡೆ ಫಾಲತಲದ ।
ಶ್ರೀವಿಭೂತಿಯು ಕಂಠಗತ ರುದ್ರಾಕ್ಷಿಗಳ ಮಾಲೇ ॥
ಪಾವನದ ಕೈಬೆತ್ತವಡಿಗಳ ।
ಹಾವುಗೆಯು ಕಂಗೊಳಿಸೆ ಜಂಗಮ ।
ದೇವವೇಷದ ಮಲ್ಲಿಕಾರ್ಜುನನಲ್ಲಿಗೈತರಲು ॥ ೨೦ ॥

ಇತ್ತಲಾ ಜಂಗಮಸದಾಕೃತಿ ।
ವೆತ್ತ ತನ್ನಯ ಚಿತ್ತವದು ತಾಂ ।
ಪೆತ್ತುದೊಯ್ಯನೆ ಶೂನ್ಯವೃತ್ತಿಯ ಯೋಗಿಯದನರಿದು ॥
ಬಿತ್ತರದ ವಿಸ್ಮಯದೆ ತಾನೆ ।
ಚ್ಚತ್ತು ಮುಂದೆಯೆ ಸುಪ್ರಭೆಯು ಮೈ ।
ವೆತ್ತು ಬರುವಂತಿರ್ಪ ಚರಮೂರ್ತಿಯನು ನೋಡಿದನು ॥ ೨೧ ॥

ನೋಡಿದೊಡನೆಯೆ ತಾಯಿ ತುರುವೆಡೆ ।
ಗೋಡಿ ಬರುತಿಹ ಕರುವಿನಂದದೊ ।
ಳೋಡಿ ಬಂದಾ ಬಾಲಕನು ನಿಜಗುರುವಿನಡಿಗಳಿಗೇ ॥
ನೀಡಿದನು ಮಸ್ತಕವನದರೊಳ್ ।
ಸೂಡಿದನು ತತ್ಪಾದಧೂಳಿಯ ।
ನೀಡಿದೆಯ ದರ್ಶನ ಸುಭಾಗ್ಯವನಿಂದು ಮತ್ಪ್ರಭುವೇ ॥ ೨೨ ॥

ಮಂಗಳಾಂಗನೆ ಜಂಗಮನೆ ಭವ ।
ಭಂಗನೇ ಭಕ್ತಾಂತರಂಗಸು ।
ಸಂಗನೇ ವರಲಿಂಗರೂಪನೆ ಶಿವನೆ ಚಿನ್ಮಯನೇ ॥
ಅಂಗಭವಗರ್ವಾದ್ರಿಕುಲಿಶನೆ ।
ತುಂಗಚರಿತನೆ ಲೋಕಪೂಜ್ಯನೆ ।
ಕಂಗಳುತ್ಸವಮೂರ್ತಿಯೇ ಗಿರಿಮಲ್ಲಿಕಾರ್ಜುನನೇ ॥ ೨೩ ॥

ಎಂದು ನುತಿಸುವ ನಾಲಿಗೆಯು ತಣಿ ।
ವೊಂದದಿರೆ ತದ್ದರ್ಶನಪರಾ ।
ನಂದದಿಂದೆವೆಯಿಕ್ಕದಿರೆ ಕಣ್ ಮುಗಿದ ಕರದಿಂದೇ ॥
ತಂದೆ ಬಾರೈ ತಪ್ಪನೊಂದಿದ ।
ಚಂದದೆನ್ನೆಡೆಯಂ ತ್ವದಂಘ್ರಿಗ ।
ಳಿಂದೆ ಸೋಂಕುತೆ ಪಾವನವನಾಗಿಸು ದಯಾಘನನೇ ॥ ೨೪ ॥

ಎಂಬ ನುಡಿಗೇಳುತ್ತೆ ತತ್ಕರು ।
ಣಾಂಬುನಿಧಿಗೆದೆಯಲ್ಲಿ ಮೋಹವು ।
ತುಂಬಿ ಬರಸೆಳದಪ್ಪಿಕೊಳ್ಳಂತಾದೊಡಂ ಮಗನೇ ॥
ಡಂಭದೀ ಜಂಗಮಸುವೇಷವ ।
ನಂಬಿ ನನ್ನನೆ ಮಲ್ಲಿಕಾರ್ಜುನ ।
ನೆಂಬ ಭಾವವು ನಿನಗೆ ಜನಿಸಿದುದಿದು ಮರುಳುತನವು ॥ ೨೫ ॥

ಬೆಟ್ಟಗಾಡಿನ ಮನುಜನಿರುವೆನು ।
ಹೊಟ್ಟೆಯನು ಹೊರೆವುದಕೆ ಮೋಸದೆ ।
ಕಟ್ಟಿಕೊಂಡೀ ವೇಷವನು ಗಿರಿಯುಳಿದು ನಾನೊಂದು ॥
ಪಟ್ಟಣಕೆ ಪೋಗುವುದಕಾಗೀ ।
ಬಟ್ಟೆಗೊಂಡೈತಂದೆನೆನ್ನಯ ।
ಗುಟ್ಟನಿದನರಿಯದೆಯೆ ಮರುಳಾಗುವುದು ಸರಿಯೇನು ॥ ೨೬ ॥

ಎಂದು ಬಿನದಕೆ ಪೇಳೆ ಬಾಲನು ।
ಮಂದಹಾಸದೆ ಮೋಸದೀ ನುಡಿ ।
ಯಿಂದೆ ನನ್ನ ಪರೀಕ್ಷಿಸಲ್ಕೈತಂದೆಯಾ ನೀನು ॥
ತಂದೆಯೇ ನನ್ನಿಷ್ಟಲಿಂಗದೊ ।
ಳಿಂದು ಬಯಲಾಗುತ್ತೆ ಕೃಪೆಯಿಂ ।
ಮುಂದೆ ಮೈದೋರಿರ್ಪುದಿದ ನಾನರಿಯೆನೇಂ ಶಿವನೇ ॥ ೨೭ ॥

ಎಂದಿಗಂ ನಿನ್ನಂಘ್ರಿಯಂ ಬಿಡೆ ।
ನೆಂದು ನಿಜಚರಣಗಳ ಪಿಡಿದಾ ।
ನಂದನನ ಮೇಲೆತ್ತಿ ಬಿಗಿದಪ್ಪುತ್ತೆ ವರಶಿವನು ॥
ತಂದೆತಾಯ್ಗಳ ಬಿಟ್ಟು ಬಾಲ್ಯದೆ ।
ಬಂದು ನಿರ್ಜನವನದೊಳೀ ತೆರ ।
ದಿಂದೆ ನೀಂ ಶಿವಯೋಗಬಲದಿಂದೆನ್ನ ನೊಲಿಸಿದೆಯಾ ॥ ೨೮ ॥

ಕಂದನೇ ಮೆಚ್ಚಿದೆನು ನಿನ್ನೆದೆ ।
ಯೊಂದಿದನುಪಮ ಭಕ್ತಿಭಾವಕೆ ।
ಮುಂದೆ ನಿನ್ನಂ ಸ್ಕಂದನಿಂ ಮಿಗಿಲಾಗಿ ಪ್ರೀತಿಸುವೇಂ ॥
ಎಂದು ಮತ್ತಂ ಮತ್ತೆ ಪರಮಾ ।
ನಂದದಿಂ ಮೈದಡವಿ ಮುದ್ದಿಸಿ ।
ಬಂದು ಕುಳಿತನು ಬಾಲಕನ ಪೂಜಾಸ್ಥಲದೊಳಂದು ॥ ೨೯ ॥

ಭೋಗಿಭೂಷನು ಮಹಿತ ಜಂಗಮ |
ನಾಗಿ ಮೈದೋರಿದನೆನುತ್ತಾ |
ಯೋಗಿ ಸಂಮುದ ನೀರಜಾಕರಹಂಸನೇ ಆಗಿ ||
ಶ್ರೀಗುರುಪದಾಂಭೋಜ ಮಧುಕರ |
ನಾಗಿ ಭಕ್ತಿಸುಧಾಂಬುನಿಧಿ ಶಶಿ |
ಯಾಗಿ ತಚ್ಚರವರನ ವಾದಾರ್ಚನೆಗೆ ತೊಡಗಿದನು || ೩೦ ||

ವಾಡಿ ಮಂಗಳ ಗೀತೆಗಳ ಮುದ |
ಗೂಡಿ ತಚ್ಚರವಾದಪೂಜೆಯ |
ಮಾಡುತಂ ವರವೀರಶೈವಾಚಾರವಿಧಿಯಿಂದೇ ||
ನಾಡೆ ತತ್ತೀರ್ಥಪ್ರಸಾದವ |
ಬೇಡಿಕೊಂಡದ ಭೋಗಿಸುತ ಕೊಂ |
ಡಾಡಿದನು ನಿಜಭಕ್ತವಶನಾದಾ ಶಿವನ ಕೃಪೆಯಾ || ೩೧ ||

ಬಳಿಕೆ ಗುರುವರ ಮಲ್ಲಿಕಾರ್ಜುನ |
ನೆಲೆ ಮಗನೆ ನೀನಿಂತು ಶೈಲದ |
ನೆಲೆಗೆ ಬಂದತಿಕಷ್ಟದೀ ಲಿಂಗಾಂಗಯೋಗದೊಳು ||
ಬಳಲಿ ನನ್ನನು ಕಂಡು ಬೇಡುವ |
ಫಲವದೇನುಸಿರೆಂದು ಸುಲಿಪ |
ಲ್ಪೊಳಗ ಚಲ್ಲುವ ನಗೆಯೊಡನೆ ಕೇಳಿದನು ಶಿಷ್ಯನನು || ೩೨ ||

ಗುರುಚರಣನಖರುಚಿಯ ಜೊನ್ನವ |
ಪರಿಕಿಸುವ ನಿಜನೇತ್ರಕೈರವ |
ವರಳೆ ಹೃದಯ ಚಕೋರಮುಂ ಪರಿದಾಡೆ ನಲವೇರಿ ||
ಗುರುವೆ ಭಕ್ತಾಮರತರುವೆ ನಿ |
ನ್ನರು ದಯಾಕಾಸಾರ ವಿಹರಣ |
ಪರನೆನಿಸಿದೀ ಬಾಲಹಂಸಗೆ ಬಳಲಿಕೆಯದುಂಟೇ || ೩೩ ||

ಬಡವಗೈಸಿರಿ ದೊರೆದವೋಲ್ ನಿ |
ನ್ನಡಿಯು ಲಭಿಸಿದುದೆನಗೆ ಗುರುವೇ |
ಪಡೆಯುತ್ತೈದೆ ಶಿವಾನುಭವಬೋಧೆಯನು ನಿನ್ನಿಂದೇ ||
ಪೊಡವಿಯೊಳ್ ಭಕ್ತರನು ಪೊರೆವಾ |
ಕಡು ಮುದದ ಕಾಯಕವನೇ ನಾಂ |
ನಡೆಸುತಂ ಲಿಂಗಾಂಗಸಮರಸಸೌಖ್ಯದಲ್ಲಿರುವೇಂ || ೩೪ ||

ಇದನುಳಿದು ಮತ್ತಾವ ಸತ್ಫಲ ।
ಪದವಿಯೊಲ್ಲೆನೆನುತ್ತೆ ತನ್ನಯ ।
ಪದಪಯೋಜಕ್ಕೆರಗಿದಾ ಶಿಷ್ಯನನು ಮೈದಡವಿ ॥
ಮುದದ ಮೂರ್ತಿಯೆ ಆಗಿ ನಿನ್ನಿ ।
ಷ್ಟದವೊಲೆಸಗುವೆನೆಂದು ಸಲೆ ಪರ ।
ಸಿದನು ಕರುಣಾಕರನು ಜಂಗಮ ಮಲ್ಲಿಕಾರ್ಜುನನು ॥ ೩೫ ॥

ಬಳಿಕೆ ನಡೆ ನನ್ನಾಲಯಕೆ ಸಲೆ ।
ತಿಳಿಸುವೆನು ಲಿಂಗಾಂಗಯೋಗದೆ ।
ಗಳಿಸುತಿರ್ಪ ಶಿವಾನುಭವವನು ನಿನಗೆನುತೆ ಶಿವನು ॥
ಕೆಳೆಯ ನೇಹದೆ ಶಿಷ್ಯನಾ ಕರ ।
ತಲವ ಪಿಡಿದಾಗಮಿಸಿದನು ತಾಂ ।
ಪಲವಗೆಯ ತರುಖಗಮೃಗಾದಿಯ ತೋರಿಸುತೆ ನಲಿದು ॥ ೩೬ ॥

ಬರುತೆ ಪಥದೊಳಗಾವೆಡೆಯೊಳಾ ।
ಗುರುಸುಶಿಷ್ಯರ ದಿಟ್ಟಿ ಹರಿದುದೊ ।
ತೊರೆದು ವೈರವ ನೇಹದಿಂದೊಡಗೂಡಿ ಖಗಮೃಗಗಳ್ ॥
ನಿರಿಕಿಸುತೆ ನಿಂತಿರ್ದವಲ್ಲೀ ।
ಶ್ವರನು ಶಿವಮೂರ್ತಿಗಳ ಕರುಣಾ ।
ಭರಿತ ದೃಷ್ಟಿಯು ಕಳೆಯದೇಂ ಪ್ರಾಣಿಗಳ ದುರ್ಗುಣವಾ ॥ ೩೭ ॥

ಮಲ್ಲಿಕಾರ್ಜುನನೊಡನೆ ಬರುತಿರೆ ।
ಕಲ್ಲು ಚಿಂತಾಮಣಿಯೆನಿಸಿ ಮರ ।
ಬಳ್ಳಿಗಳು ಸುರಭೂಜವಲ್ಲರಿಯಾಗಿ ಗೋವುಗಳು ॥
ಸಲ್ಲಲಿತ ಸುರಧೇನುವಾಗು ।
ತ್ತೆಲ್ಲ ನೀರುಂ ಸಿದ್ಧರಸವಾ ।
ಗಲ್ಲಿ ತೋರಿದವೇನೊರೆವೆನಾ ಗುರುಸುತನ ಕಣ್ಗೇ ॥ ೩೮ ॥

ಶಿವನ ಕೃಪೆಯಂ ಪಡೆದ ಯೋಗಿಯು ।
ಶಿವಮಯದ ದೃಷ್ಟಿಯೊಳು ನೋಡಲು ।
ಸುವಿಮಲ ಕ್ಷೇತ್ರದ ಶಿಲಾತರು ಮುಖ್ಯವಸ್ತುಗಳು ॥
ದಿವದ ವಸ್ತುಗಳಾಗಿ ಪರಿಣಮಿ ।
ಸುವುದಿದೇನಚ್ಚರಿಯು ಯಾತ್ರಿಕ ।
ನಿವಹಕಿರೆ ಸದ್ಭಕ್ತಿದೃಷ್ಟಿಯು ಕಾಣವೇನಿಂತು ॥ ೩೯ ॥

ಭೂತಲದ ಕೈಲಾಸವೆಂಬ ।
ಖ್ಯಾತಿಯಾಂತಾ ಶ್ರೀಗಿರಿಯೊಳಾ ।
ಪೂತಜಂಗಮದೇವನೊಡನೈತರುತೆ ಗುಡಿಗಿಂತು ॥
ಸಾತಿಶಯ ಮುದದಿಂದಮಾಚೆ ।
ಜ್ಯೋತಿಮೂರ್ತಿಯ ಪರಮಪದಜಲ ।
ಜಾತಪೂಜೆಗೆ ತೊಡಗಿದನು ಮೇಣಲ್ಲಿ ಗುರುಸುತನು ॥ ೪೦ ॥

ಪೇಳಲೇನಾ ಪೂಜ್ಯಪೂಜಕ ।
ಲೀಲೆಯಾ ಸಂಭ್ರಮದ ಸಿರಿಯನು ।
ಶೂಲಧರನಾ ಪಾದಪೂಜೆಯ ಸುಖದ ಸುಗ್ಗಿಯೊಳೇ ॥
ಲೋಲನಾಗಿರುತಿರ್ಪ ತದ್ವರ ।
ಬಾಲಯೋಗೀಶ್ವರನಿಗಂದಿನ ।
ಕಾಲವೇ ಘನಪುಣ್ಯಮಯ ಶಿವರಾತ್ರಿಯೆನಿಸಿದುದು ॥ ೪೧ ॥

**॥ ಮುಗಿದುದು ॥ ಒಟ್ಟು ಪದಗಳು ॥ ೩೫೫ ॥**



ಓಂ ಫಲಾಹಾರಚರಾಚಾರ್ಯಾಯನಮಃ

## ಒಂಭತ್ತನೆಯ ಸಂಧಿ

---

**ಸೂಚನೆ :—** ಹರನು ನಿಜಶಿಷ್ಯಂಗೆ ಷಟ್‌ಸ್ಥಲ ।
ಸರಣಿಗತ ಶಿವಯೋಗಸಿದ್ಧಿಯ ।
ಪರಮಫಲವ ಶಿವಾನುಭವವಂ ಬೋಧಿಸಿದನೊಲಿದು ॥

ವೇದವಾಣಿಗಭೇದ್ಯನಾ ಜಗ ।
ದಾದಿಪುರುಷನ ಶಿವನ ವಿಲಸ ।
ತ್ಪಾದಪೂಜಾನಂದತುಂದಿಲನಾಗಿ ಶಿಷ್ಯನು ತಾಂ ॥
ಶ್ರೀದಯಾಘನದೇವ ಭಕ್ತಾ ।
ಮೋದದಾಯಕಭಾವ ಚಿರಸುಖ ।
ದಾದಿಯಾದ ಶಿವಾನುಭವವನು ಬೋಧಿಸೈ ಗುರುವೇ ॥ ೧ ॥

ಎಂದು ವರಸಾಷ್ಟಾಂಗವಂದನ ।
ದಿಂದೆ ಯಾಚಿಸಿದೊಡನೆ ಲೋಕಾ ।
ನಂದದಾಯಕ ಮಲ್ಲಿಕಾರ್ಜುನಮುಖಸುಧಾನಿಧಿಯಿಂ ॥
ಮಂದಹಾಸದ ಚಂದ್ರಿಕೆಯು ತ ।
ಣ್ಪೊಂದಿಸುತ್ತಿರೆ ಶಿಷ್ಯಚಿತ್ತ ।
ಕ್ಕಂದು ಬೋಧಾಮೃತದ ಲಹರಿಯು ಬಂದುದೀತೆರದೇ ॥ ೨ ॥

ನಿನಗೆ ದೀಕ್ಷಾಕಾಲದೊಳ್ ಗುರು ।
ವಿನಮುಖದೆ ಲಿಂಗಾಂಗಯೋಗದೊ ।
ಳನುಭವವನೊಡರಿಸುವ ಬೋಧೆಯದಾದುದದರಿಂದೇ ॥
ಜನಿಸಿದುನ್ನತ ಶಕ್ತಿಯಿಂದೆ ।
ನ್ನನು ನಮರ್ಚಿಸುತೊಲಿಸಿಕೊಂಡೈ ।
ತನುಭವನೆ ಮತ್ತೇಕೆ ತದ್ಬೋಧಕ್ಕೆ ಫಲವೇನೋ ॥ ೩ ॥

ಶಿವನೆ ನೀನಾಗಿರ್ದು ನಿನ್ನೊಳ್ ।
ಶಿವನನುಭವಮುದಿರದೆ ಮರೆಯಾ ।
ಗುವುದೆ ವೇಳಿಂತಾದೊಡಂ ಚರರೂಪದಿಂ ನಾನು ॥
ತವೆ ಸುಬೋಧೆಯ ಗೈಯಬೇಕೆಂ ।
ಬುವ ಬಯಕೆ ನಿನಗಾದ ಕತದಿಂ ।
ಕುವರನೇ ವಿವರಿಸುವೆನಾಲಿಸು ತದ್ರಹಸ್ಯವನು ॥ ೪ ॥



ಶ್ರೀ ಬಾಲತಪಸ್ವಿ ಫಲಾಹಾರೇಶನಿಗೆ ಶ್ರೀಶೈಲ ಮಲ್ಲಿಕಾರ್ಜುನನು ಜಂಗಮರೂಪದಿಂದ ಪ್ರತ್ಯಕ್ಷನಾಗಿ ಶಿವಾನುಭವಬೋಧೆಯನ್ನು ಮಾಡಿ ಚರಾಧಿಕಾರವನ್ನು ಕೊಟ್ಟದ್ದು.

ಮಗನೆ ಪೂರ್ವದೊಳಿನ್ನ ಮುಖದಿಂ ।
ದೊಗೆದ ಶೈವಾಗಮದ ಸಾರವೆ ।
ಜಗದೆ ತಾಂ ವರವೀರಶೈವಮದೆನಿಸಿ ಮೆರೆಯುವುದು ॥
ಸುಗಮವಾದಾ ಮತದ ಮಾರ್ಗವೆ ।
ಬಗೆಯೆ ಷಟ್‌ಸ್ಥಲತತ್ವವಿನ್ನದ ।
ರಗಲದೊಳು ತುಂಬಿರ್ಪುದೈ ಲಿಂಗಾಂಗಯೋಗವದು ॥ ೫ ॥

ಯೋಗವೆಂಬರು ಪ್ರಕೃತಿಪುರುಷವಿ ।
ಯೋಗವನು ಕೆಲರಿನ್ನು ಹಲವರು ।
ಯೋಗವೆಂಬುದು ಚಿತ್ತವೃತ್ತಿನಿರೋಧವೆಂಬುವರು ॥
ಯೋಗವದು ಸುಖದುಃಖಸಮತೆಯು ।
ಯೋಗವದು ಕರ್ಮದೊಳು ಕುಶಲತೆ ।
ಯಾಗಿರುವುದೆಂದೊರೆವರಿನ್ನು ಳಿದವರು ಕೇಳ್ ಮಗನೇ ॥ ೬ ॥

ಜ್ಞಾನಭಕ್ತಿಕ್ರಿಯೆಯೆ ಮೊದಲಾ ।
ದೇನನೊಂದನು ಪಿಡಿದು ನನ್ನನು ।
ಕಾಣಲೆಳಸುವ ಸತ್ಪಥಗಳಾವಿರ್ಪವೋ ಅವು ತಾಂ ॥
ಜ್ಞಾನಯೋಗಾದಿಗಳ ಪೆಸರಿಂ ।
ಕ್ಷೋಣಿಯಲ್ಲಿ ಪ್ರಸಿದ್ಧಿವಡೆದವು ।
ಮಾನವಪ್ರಕೃತಿಗಳಿಗನುಗುಣವಾಗಿ ಬಹುವಿಧದಿಂ ॥ ೭ ॥

ಯೋಗದರ್ಥಗಳಿಂತು ಬಹುವಿಧ ।
ವಾಗಿರಲು ಲಿಂಗಾಂಗಗಳ ಸಂ ।
ಯೋಗವೇ ಶಿವಯೋಗವೆನಿಸುವುದಿನ್ನು ಸಂಗ್ರಹದಿಂ ॥
ಯೋಗಭೇದಗಳನು ತಿಳಿಯಲೈ ।
ದಾಗಿರುವವವುಗಳೊಳು ತಾಂ ಶಿವ ।
ಯೋಗವೇ ಮೇಲೆನಿಸಿಕೊಳ್ಳುದು ವೀರಶೈವರೊಳು ॥ ೮ ॥

ಒಂದೆರಡುಮೂರೆಂಟು ವರ್ಣಗ ।
ಳಿಂದಿರುವ ಮಂತ್ರಗಳೊಳೆಳಸಿ ।
ದೊಂದವನ್ನೈಸಲೆ ಜಪಿಸುತಿರುವುದು ಮಂತ್ರಯೋಗವದು ॥
ಬಿಂದುವಿನರೂಪದೊಳೊ ನಾದವ ।
ನೊಂದಿಯೋ ಮಾನಸವು ಭೇದವ ।
ನೊಂಬದಸುಗೂಡಿರಲು ತಾಂ ಲಯಯೋಗವೆನಿಸುವುದು ॥ ೯ ॥

ಬರಿಯ ಕುಂಭಕದೊಳೊ ಸುಮುದ್ರಾ |
ಕರಣದೊಳೊ ಅಷ್ಟಾಂಗಮಾರ್ಗದೆ |
ಮರುತನನು ನಿಗ್ರಹಿಸಲದು ಹಠಯೋಗವೆನಿಸುವುದು ||
ಪರಿವ ಮನಸಿನ ವೃತ್ತಿ ಕರಿಗೊಂ |
ಡರುವಿನಿಂ ಲಕ್ಷ್ಯತ್ರಯದೊಳೀ |
ಶ್ವರನ ಸಾಕ್ಷಾತ್ಕರಿಸಿಕೊಳ್ವುದೆರಾಜಯೋಗವದು || ೧೦ ||

ಶಿವನ ವಿದ್ಯೆಯು ಶಿವಸುಭಕ್ತಿಯು |
ಶಿವನ ಪೂಜಾಧ್ಯಾನಸುವ್ರತ |
ವಿವುಗಳೈದನು ತಳ್ತಿರಲು ಶಿವಯೋಗವೆನಿಸುವುದು ||
ಕುವರನೇ ಕೇಳುಳಿದ ಯೋಗದ |
ವಿವಿಧ ಮಾರ್ಗಗಳಾವು ಸರಿಯೆನಿ |
ಸವು ವಿಚಾರಿಸಿ ನೋಡಲೀ ಶಿವಯೋಗನತ್ಪಥಕೇ || ೧೧ ||

ಶಿವನಿರುವನೆಂಬುದನು ವಿದ್ಯೆಯಾ |
ಳವಧರಿಸಿ ತದ್ಭಕ್ತಿಯಿಂದಂ |
ಶಿವಸಮರ್ಚನೆ ಗೈದು ಶಿವನಾಮದ ಸುಮಂತ್ರವನು ||
ತವೆ ಜಪಿಸಿ ತದ್ಧ್ಯಾನಗೈವುದೆ |
ಶಿವಮಹಾವ್ರತವಿವುಗಳಿಂ ಸಂ |
ಭವಿಸುವುದು ಶಿವಯೋಗಸಿದ್ಧಿಯು ವೀರಶೈವರಿಗೇ || ೧೨ ||

ವೀರಶೈವರು ತಮಗೆ ಪಂಚಾ |
ಚಾರವೇ ಪ್ರಾಣಂ ತದನುಳಾ |
ಚಾರಯುತದಷ್ಟಾವರಣವೇ ಅಂಗವೆಂದರಿದು ||
ಸಾರತರ ಷಟ್‌ಸ್ಥಲದ ಮಾರ್ಗದೆ |
ಸಾರುತಿರೆ ಶಿವಯೋಗಸಿದ್ಧಿಯು |
ತೋರುವುದು ತಾನಾಗಿಯೇ ಕೇಳದನು ವಿವರಿಪೆನಾಂ || ೧೩ ||

ಲಿಂಗವೇ ಶಿವನಿನ್ನು ದೀಕ್ಷೆಯ |
ಸಂಗದಿಂ ಶುಚಿಯಾದ ಜೀವನೆ |
ಅಂಗನಿವರೀರ್ವರೊಳೊಗೆದ ತಾದಾತ್ಮ್ಯಭಾವವದೇ ||
ಅಂಗಲಿಂಗಸುಯೋಗನಾಮದೆ |
ಕಂಗೊಳಿಸಿ ಪಾಲ್ ಪಾಲು ಕೂಡಿದ |
ಭಂಗಿಯಿಂ ಶಿವಜೀವರೈಕ್ಯಮದೆನಿಸಿಕೊಳ್ಳುವುದು || ೧೪ ||

ಅಂಗನೆನಿಸಿದಿರ್ದಾತ್ಮನಾ ಶಿವ ।
ಲಿಂಗವನು ನಿಜತನುಕರಣ ಭಾ ।
ವಂಗಳೊಳು ನೆಲೆಗೊಳಿಸಿ ಭಕ್ತಿಮಯಾರ್ಚನಾದಿಗಳಿಂ ॥
ಲಿಂಗಮಯ ಭಾವನೆಯ ಗಳಿಸಲು ।
ಭೃಂಗಕೀಟನ್ಯಾಯದಿಂ ತಾಂ ।
ಲಿಂಗರೂಪವ ಪಡೆವನೀಷಟ್‌ಸ್ಥಲದ ಮಾರ್ಗದೊಳು ॥ ೧೫ ॥

ಚಲಸಿದರೆ ದಿಟ್ಟಿಯದು ಮನಮುಂ ।
ಚಲಿಸದಿರುವುದು ತನ್ಮನದೆ ಶಿವ ।
ಕಳೆಯ ಭಾವಿಸುತಿರಲು ಜನಿಪುದು ಭಾವಶುದ್ಧಿಯದು ॥
ತಳೆದ ಶುದ್ಧಿಯ ಭಾವದೊಳು ಶಿವ ।
ಕಳೆಯು ತಾಂ ಸಲೆ ರೂಪುಗೊಳ್ಳುದು ।
ಬಳಿಕೆ ತದ್ಭಾವಿಕನು ಶಿವತೇಜದೊಳು ಬೆಳಗುವನು ॥ ೧೬ ॥

ದಿಟ್ಟಿ ನಿಲಿಸುವುದಕ್ಕೆ ಪರಮೋ ।
ತ್ಕೃಷ್ಟ ಸಾಧನವಿಷ್ಟಲಿಂಗವು ।
ನೆಟ್ಟ ದಿಟ್ಟಿಗೆ ಕಟ್ಟುವಡೆವುವು ಪ್ರಾಣ ಚಿತ್ತಗಳು ॥
ಬಿಟ್ಟೊಡಿದನಾ ಷಟ್‌ಸ್ಥಲದೊಳಿಹ ।
ಗುಟ್ಟು ತಿಳಿಯದು ತನುಭವನೆ ಕೇ ।
ಳಿಷ್ಟಲಿಂಗದ ಕಳೆಯೆ ತತ್ಪಥದೋರ್ಪ ಬೆಳಕಹುದು ॥ ೧೭ ॥

ಅಂಗನಿಗೆ ತದ್ವ್ಯಜ್ಮನೋಭಾ ।
ವಂಗಳನು ಬಲಿಸುವುದಕಾಗಿಯೆ ।
ಲಿಂಗವಿಷ್ಟಪ್ರಾಣಭಾವಸುನಾಮದಿಂದವನಾ ॥
ಅಂಗದೊಳ್ ಪ್ರಾಣಾತ್ಮಗಳೊಳಂ ।
ಕಂಗೊಳಿಸುವುದು ತತ್ತ್ರಿವಿಧ ವರ ।
ಲಿಂಗದಮಳೋಪಾಸನೆಯು ಶಿವಯೋಗದೊಳು ಘನವು ॥೧೮॥

ಭೋಗದೊಳ್ ಮಮಕಾರಭಾವ ।
ತ್ಯಾಗವೇ ತ್ಯಾಗಾಂಗವೆನಿಪುದು ।
ಭೋಗವನು ಲಿಂಗಪ್ರಸಾದವನಾಗಿಸುತ್ತದನು ॥
ಭೋಗಿಸಲು ಭೋಗಾಂಗವೀದೃಶ ।
ಭೋಗದೊಳೆ ತಾನಿರುತೆ ಶಿವಸಂ ।
ಯೋಗಸುಖವನು ಪಡೆಯುವುದೆ ಯೋಗಾಂಗವೆನಿಸುವುದು ॥೧೯॥

ಇಂತು ಮೂರು ಸ್ಥಲದೊಳಂಗನು ।
ತಾಂ ತಳೆಯುತೀದ್ವಶದ ಭೋಗವ ।
ನಾಂತು ಮೇಣ್ ಭಕ್ತಾದಿಯಾದಾ ಷಟ್‌ಸ್ಥಲವನಲ್ಲಿ ॥
ತಾಂ ತದಾಚಾರಾದಿ ಲಿಂಗಗ ।
ಳಂ ತಳೆದು ಪಂಚೇಂದ್ರಿಯದೆ ಹೃದ ।
ಯಾಂತರದೊಳಂ ಭೋಗಿಸಲು ತೊಡಗುವನು ತನ್ಮುಖದೇ ॥೨೦॥

ಅಂಗನಾವಗಮೀತೆರದೆ ಸ ।
ರ್ವಾಂಗಲಿಂಗಿಯೆ ಆಗಿ ತಾನಾ ।
ಲಿಂಗವರಭೋಗೋಪಭೋಗದೊಳೆಸೆಯುತಿರಲದನೇ ॥
ಲಿಂಗತತ್ವವನರಿದವರು ಲಿಂ ।
ಗಾಂಗಯೋಗದ ಸೌಖ್ಯವೆಂಬರು ।
ಮಂಗಳಾಂಗನೆ ಭಕ್ತಿಯೇ ಕಾರಣಮದೀಸ್ಥಿತಿಗೇ ॥ ೨೧ ॥

ಅಂಗನಮಳಿನ ಶಕ್ತಿಯನೆ ಲಿಂ ।
ಗಾಂಗಿಗಳು ವರಭಕ್ತಿಯೆಂಬರು ।
ಲಿಂಗದಂಗಸ್ಥಲಗಳಲ್ಲಿ ವಿಕಾಸವಾಗುತ್ತೇ ॥
ಲಿಂಗವೇ ತಾನಾಗುತದು ಸಲೆ ।
ಕಂಗೊಳಿಸುವುದು ಕಡೆಗೆ ಕೇಳಿದ ।
ರಿಂಗಿತವನರಿದಾಚರಿಸೆ ಶಿವಯೋಗಿಯೆನಿಸುವುದಾ ॥ ೨೨॥

ಭಕ್ತನಾತ್ಮಕ್ಷೇತ್ರದೊಳಗಾ ।
ಸಕ್ತಿಯಿಂ ಬಿತ್ತಿರುವ ಪರಶಿವ ।
ಭಕ್ತಿ ಬೀಜವು ಬೆಳೆದು ಲಿಂಗಾಕಾರತರುವಾಗಿ ॥
ಭುಕ್ತಿ ಮುಕ್ತಿ ಸುಫಲಗಳನು ತ ।
ದ್ಭಕ್ತಗೀಯುವುದಾದಕತದಿಂ ।
ಭಕ್ತಿಯೇ ಪುರುಷಾರ್ಥವೀಷಟ್‌ಸ್ಥಲದ ಮಾರ್ಗದೊಳು ॥ ೨೩ ॥

ಭಕ್ತಿಯದು ಪರಮಾರ್ಥದಾಯಿನಿ ।
ಭಕ್ತಿಯದು ಶಿವತತ್ವಬೋಧಿನಿ ।
ಭಕ್ತಿಯದು ಶಿವಭಾವಕಾರಿಣಿ ಭವನಿವಾರಿಣಿಯು ॥
ಭಕ್ತಿಯಿದನಲ್ಲದೆಯೆ ಕೇಳರು ।
ಮುಕ್ತಿಯನು ವರವೀರಶೈವರು ।
ಭಕ್ತಿಯೇ ತಾನೈದನೆಯ ಪುರುಷಾರ್ಥವಾದುದರಿಂ ॥ ೨೪ ॥

ನಂಬುವುದೆ ಲಿಂಗವನು ಶ್ರದ್ಧೆಯು ।
ನಂಬಿಗೆಯು ಬಲಿಯುವುದೆ ನಿಷ್ಠೆಯು ।
ನಂಬಿಗೆಯ ಮರೆಯದುದದವಧಾನವು ನಡೆಯೆ ನಂಬಿ ॥
ಸಂಭವಿಪುದನುಭವಮುದನುಭವ ।
ದಿಂ ಬರುವುದಾನಂದವಾನಂ ।
ದಾಂಬುನಿಧಿಯೊಳು ಬೆರೆಯುವುದೆ ಸಮರಸಮುದೆನಿಸುವುದು ॥ ೨೫ ॥

ಭಾವಿಸಲು ಮಧುರಾದಿಯಾದ ಸು ।
ಭಾವವನು ಜಲವೆಂತು ತಳೆವುದೊ ।
ಭೂವಿಭೇದಸ್ಥಲವನಾಶ್ರಯಿಸುತ್ತೆಯದರಂತೇ ॥
ಈ ವಿಧದೆ ಶ್ರದ್ಧಾದಿನಾಮವ ।
ನಾ ವಿಮಳ ಶಿವಭಕ್ತಿ ಪಡೆಯುವು ।
ದಾ ವಿದಿತ ಭಕ್ತಾದಿಯಾದಂಗಸ್ಥಲವನೊಂದಿ ॥ ೨೬ ॥

ಬಿತ್ತಿಗೆಯುಮುಂಕುರಿಸಲರ್ಹತೆ ।
ಮತ್ತಮುಂಕುರಿಸುವುದು ತಳಿರಿಡಿ ।
ಯುತ್ತಿರುವುದುಂ ಪೂಬಿಡುವುದುಂ ಪಣ್ತು ಬೆಳಗುವುದೇ ॥
ಉತ್ತಮದ ಶಿವಭಕ್ತಿಬೀಜವು ।
ದುತ್ತರೋತ್ತರವಾಗಿ ಷಟ್‌ಸ್ಥಲ ।
ವೃತ್ತಿಯಾಗಿ ವಿಕಾಸವನು ಪಡೆಯುತ್ತಿರುವ ಕ್ರಮವು ॥ ೨೭ ॥

ಇಂತು ಷಟ್‌ಸ್ಥಲದಲ್ಲಿ ಸಾಧಕ ।
ರಂತರಂಗದ ಭಕ್ತಿ ವಿಕಸನ ।
ವಾಂತು ಕಡೆಯ ಸ್ಥಲದೆ ಸಮರಸಭಕ್ತಿವೆಸರಿಂದೇ ॥
ತಾಂ ತಳೆದು ಲಿಂಗಾಂಗಯೋಗದ ।
ನಂತ ಸೌಖ್ಯವ ಬೆಳಗುತಿರ್ಪುದ ।
ರಿಂ ತಿಳಿಯೆ ತದ್ಭಕ್ತಿಯೇ ಶಿವಯೋಗಸಾಧನವು ॥ ೨೮ ॥

ಸಲ್ಲಲಿತ ತನುಜಾತನೇ ಕೇಳ್ ।
ಬೆಳ್ಳಿಯಾ ಬೆಟ್ಟದೊಳು ಮತ್ತಿ ।
ನ್ನೆಲ್ಲಿಯುಂ ಶ್ರೀಶೈಲಮುಖ್ಯಸ್ಥಲದೊಳಂ ನಿರುತಂ ॥
ನಿಲ್ಲಲಾರೆನು ನಾನದಾವೆಡೆ ।
ಯಲ್ಲಿ ನನ್ನಯ ಭಕ್ತರಿರ್ಪರೊ ।
ಅಲ್ಲಿಯೇ ಸಂಫುಲ್ಲಮಾನಸನಾಗಿ ನೆಲಸುವೆನು ॥ ೨೯ ॥

ಇಂತು ನೆಲಸಿದ ನನ್ನೊಡನೆ ನಿ ।
ಶ್ಚಿಂತ ಭಕ್ತರು ತಮ್ಮ ಭೋಗವ ।
ಸಂತತಂ ಭೋಗಿಸುವುದೇ ಶಿವಯೋಗವೆನಿಸುವುದು ॥
ಶಾಂತಮೂರ್ತಿಯೆ ಕೇಳು ನೀಂ ಸಿ ।
ದ್ಧಾಂತವಿದು ತದ್ಯೋಗ ಸುಖಮಂ ।
ಚಿಂತಿಸುವನಿಗೆ ಭಕ್ತಿಯೇ ಚಿಂತಾಮಣಿಯು ಜಗದೇ ॥ ೩೦ ॥

ಸುತನೆ ಕೇಳ್ಳೆ ಭಕ್ತಿ ಮಾರ್ಗ ।
ಸ್ಥಿತಿಯಿದನೆ ಭಕ್ತರ್ಗೆ ಬೋಧಿಸು ।
ವತಿಮಹಿತ ಕಾಯಕದೊಳಿರು ನೀಂ ನೆನೆದ ಕಾಲದೊಳು ॥
ಹಿತದೆ ಮೈದೋರುತ್ತೆ ನಿನಗೇಂ ।
ಚ್ಯುತಿಯದಾಗದ ಮಾಳ್ಕೆಯಿಂ ತ್ವ ।
ತ್ಕೃತಿಗೆ ನೆರವೀಯುತ್ತಿರುವೆನೆಂದುಸುರ್ದನಾಶಿವನು ॥ ೩೧ ॥

ಮದನಹರಬೋಧಾಮೃತದ ಪಾ ।
ನದ ಸುಖವ ಪಡೆದಿಂತು ಮುಕ್ತಿ ।
ಪ್ರದದ ತತ್ಪದಪಂಕಜಕ್ಕೆರಗುತ್ತೆ ಶಿಷ್ಯನು ತಾಂ ॥
ಸದಯನೇ ಮದ್ಗುರುವೆ ನನ್ನ ।
ಭ್ಯುದಯಮೂರ್ತಿಯೆ ಧನ್ಯನಾದೆನು ।
ವಿದಿತವಾಯ್ತು ಶಿವಾನುಭವತತ್ವವಿದೆನುತೆ ಬಳಿಕೇ ॥ ೩೨ ॥

ಜಗದಗಲದೊಳು ತುಂಬಿರುವ ನಿ ।
ನ್ನಗಣಿತದ ಕೃಪೆಯಿಂದೆ ಭಕ್ತ ।
ರ್ಗೊಗೆಯದೇಂ ತದ್ಭಕ್ತಿಮಾರ್ಗವು ಗೈವೆನಿದನೆಂದು ॥
ಬಗೆದುದಜ್ಞಾನವಿದು ನನ್ನದು ।
ನಿಗಮನುತ್ಯನೆ ನಿನ್ನ ಬಳಿಯೊಳೆ ।
ಸೊಗದೊಳಿಲ್ಲಿರುತಿರ್ಪೆನಾವುದನೊಲ್ಲೆನೈ ಗುರುವೇ ॥ ೩೩ ॥

ಇಂತೆರೆದ ಶಿಷ್ಯಂಗೆ ನಿನಗೀ ।
ಭ್ರಾಂತಿ ಎತ್ತಣಿನೊಗೆದುದೈ ನಿ ।
ನ್ನಂತಿರುವ ಮಹಿತಾತ್ಮರೊಡಲೊಳೆ ನೆಲಸಿ ನಾನೊಲವಿಂ ॥
ಸಂತತಂ ಭುವಿಯಲ್ಲಿ ಭಕ್ತರ ।
ಸಂತತಿಯ ಪೊರೆಯುವೆನು ಬೇರೊಡ ।
ಲಂ ತಳೆವ ಸಂಕಲ್ಪಮೆನಗುಂಟಾಗದದರಿಂದೇ ॥ ೩೪ ॥

ನೀನು ಗೈಯುವುದೇನು ನಿನ್ನೊಳ ।
ಗಾನಿರುತ್ತಾಗಿಸುವೆನೆಲ್ಲವ ।
ನಾನು ಮಾಡುವೆನೆಂಬಹಂಕಾರವನುಳಿಯೆ ನಿನಗೇ ॥
ಕ್ಷೋಣಿಯೊಳು ಮಾಳ್ಪಾವ ಕಾರ್ಯದೆ ।
ಕಾಣಿಸದು ಬನ್ನಮದು ಕೇಳ್ ಮ ।
ತ್ತೂನುವೇ ದಾಸೋಹಮೆಂಬುದೆ ಭಕ್ತಿಪಥಮಲ್ತೇ ॥ ೩೫ ॥

ನೀನುಮೀ ಪಥದಲ್ಲಿ ನಡೆದೀ ।
ಕ್ಷೋಣಿಯವರನು ನಡೆಸುವುದೆ ನಿ ।
ರ್ವಾಣಪದದೊಳು ಹಿರಿದು ನೀನಿದನೆಸಗುವುದನುಳಿದು ॥
ಕಾನನದೊಳೆನ್ನೆಡೆಯೊಳೋರ್ವನೆ ।
ನೀನು ಚಿರಸುಖದಿಂದಿರಲು ಸು ।
ಜ್ಞಾನಿಗಳು ತಾಂ ಸ್ವಾರ್ಥಪರನವನೆನರೆ ನಿನ್ನನು ಕೇಳ್ ॥ ೩೬ ॥

ಎಂದು ತಿಳುಹಿದ ಬಳಿಕೆ ತದ್ಯೋ ।
ಗೀಂದುವಾತ್ಮಪ್ರಭುವನಗಲಲು ।
ಬಂದ ದುಃಖವನೆಂತೊ ತಡೆಗೈಯುತ್ತೆ ಮಡ್ಡುರುವೇ ॥
ಕಂದನನು ಕಾಪಾಡುವಳ್ತಿಯು ।
ತಂದೆಯಪ್ಪಣೆಯಂತೆ ನಡೆಯುವೆ ।
ನೆಂಮ ತತ್ಪಾದಕ್ಕೆರಗುವನಿತರೊಳು ಪರಶಿವನು ॥ ೩೭ ॥

ಕರುಣಿಸುತೆ ಜಂಗಮದ ಪದವಿಯು ।
ಶಿರದೊಳಿಟ್ಟಾ ವರದ ಹಸ್ತದೆ ।
ಪರಸಿ ಬಳಿಕಾ ಸ್ವಾಮಿ ಲಿಂಗದೊಳಡಗುತಿರೆ ಕಂಡು ॥
ಗುರುವೆ ಜಂಗಮರೂಪಮಂ ನೀಂ ।
ತೊರೆದು ಬಟ್ಟೆಯ ತಳುವದೆನುತಂ ।
ಭರದೆ ಬಿಗಿಯಪ್ಪಿದನು ಶಿಷ್ಯನು ಲಿಂಗಮೂರ್ತಿಯನು ॥ ೩೮ ॥

ಅಪ್ಪಿದಾ ಶಿಷ್ಯಾಂಗವನು ಮರ ।
ಳ್ದಪ್ಪೆ ತಣ್ಪಿನ ತಣಿವು ಲಿಂಗಮ ।
ದೊಪ್ಪೆ ನಾಡೆ ಮೃಕಂಡುಸುತನಿಂ ತೆಕ್ಕೆಗೊಂಡಂತೇ ॥
ಅಪ್ಪ ಮಲ್ಲಯ್ಯನೆ ಮಹಾತ್ಮನೆ ।
ಮುಪ್ಪೊಳಲನುರುಹಿದನೆ ತಳುವದೆ ।
ತಪ್ಪಿಸಿದೆಯಾ ನಿನ್ನ ಜಂಗಮರೂಪದರ್ಶನವಾ ॥ ೩೯ ॥

ಎಂದಿಗಿನ್ನೀ ರೂಪದರ್ಶನ ।
ದಿಂದೆ ನೀಂ ವರಸೌಖ್ಯವೀವುದೊ ।
ಎಂದು ಮತ್ತಂ ಕವಿದ ಮೋಹದ ಬಿಸಿಲ ತಾಪವನು ॥
ಮಂದ ಮಾರುತನಂತೆ ಸುಳಿಯುತೆ ।
ಬಂದು ಪರಿಹರಿಸುವಿಯೊ ಪೇಳ್ದೈ ।
ತಂದೆಯೇ ಮುಕ್ಕಣ್ಣನೇ ಗಿರಿಮಲ್ಲಿಕಾರ್ಜುನನೇ ॥ ೪೦

ಇಂತು ಪೊಗಳುತೆ ಗುಡಿಯೊಳಗೆ ಲಿಂ ।
ಗಾಂತಿಕದೆ ಕುಳಿತಿರ್ದು ಮುಗಿಯೆ ದಿ ।
ನಾಂತಮದು ಬಳಿಕೆಸಗಿ ಮಜ್ಜನಮುಖ್ಯಕೃತಿಗಳನು ॥
ಚಿಂತೆಯಂ ಕಳೆವಿಷ್ಟಲಿಂಗಸು ।
ಶಾಂತಿಮಯ ಪೂಜೆಯೊಳು ತೊಡಗಿದ ।
ನಾಂತಸಂಮುದದಿಂದಮಾಶಿವಯೋಗಿಪುಂಗವನು ॥ ೪೧ ॥

**॥ ಮುಗಿದುದು ॥ ಒಟ್ಟು ಪದಗಳು ॥ ೩೯೬ ॥**



॥ ಓಂ ಸದ್ಭಕ್ತಚಿಂತಾಹರಾಯನಮಃ ॥

# ಹತ್ತನೆಯ ಸಂಧಿ

---

**ಸೂಚನೆ :—** ಉಳಿದು ಗಿರಿಯಂ ಸಂಚರಿಸುತಂ ।
ಕೆಲವು ಪುಣ್ಯಸ್ಥಲಗಳೊಳು ಬಂ ।
ದೊಲಿದು ಸಂತೈಸಿದನು ತನ್ನವರೆಲ್ಲರನು ಯೋಗಿ ॥

ತುಂಬಿ ಕಣ್ಣೊಳ್ ವಿಶ್ವದಗಲದೆ ।
ತುಂಬಿರುವ ಗುರುವರನ ಮೂರ್ತಿಯ ।
ತುಂಬಿ ತದ್ಬೋಧಾಮೃತವ ನಿಜಹೃದಯಕಲಶದೊಳು ॥
ತುಂಬಿ ನಾಲಿಗೆಯಲ್ಲಿ ತತ್ಕರು ।
ಣಾಂಬುಧಿಯ ನಾಮಸ್ಮರಣೆಯನು ।
ಸಾಂಬನಾ ತಾಣವನು ಮಗಳ್ದುಂ ಮಗಳ್ದು ಮೋಕ್ಷಿಸುತೇ ॥ ೧ ॥

ಪರತರದ ರಜತಾದ್ರಿಯಿಂದಂ ।
ಧರೆಗೆ ಜಂಗಮರೂಪದಿಂದವ ।
ತರಿಪ ಶಂಕರನಂದದಿಂ ಶ್ರೀಶೈಲದೆಡೆಯಿಂದೇ ॥
ಗುರುತನಯನಿಳಿತಂದು ತನ್ನಯ ।
ಚರಣಸಂಸ್ಪರ್ಶನದೆ ಧರಣೀ
ತರುಣಿಗಮಳತೆಯಾಗಿಸುತೆ ಸಂಚರಿಸತೊಡಗಿದನು ॥ ೨ ॥

ಚರಿಸುತಂ ಶಿವಶರಣರಾ ಕಲು ।
ಬುರಿಗಿ ವರಕಲ್ಯಾಣ ಸೊನ್ನಲ ।
ಪುರವೆ ಮೊದಲಾದಖಿಳ ಪುಣ್ಯಕ್ಷೇತ್ರಗಳ ಕಂಡು ॥
ಅರಸಿ ನಾನೊಂದೀ ಬಗೆಯೊಳಿ ।
ರ್ಪುರು ಮುದದ ನಿರ್ಮಳದ ನೆಲೆಯಂ ।
ನೆರೆ ಶಿವಾರ್ಚನೆ ಗೈಯುತಲ್ಲಿರವೇಳ್ಕುಮೆನುತಂದು ॥ ೩ ॥

ಮೊದಲು ತಾಯ್ತಂದೆಗಳ ಚಿತ್ತ ।
ಕ್ಕೊದಗಿಸುತೆ ಸುಖಶಾಂತಿಗಳ ಬಳಿ ।
ಕಿದನು ನಾಂ ನಡೆಸುವುದು ಸಮುಚಿತಮೆಂದು ಗುರುಸುತನು ॥
ಸದಯ ಹೃದಯರ ಪಿತೃಗಳೂರಿಗೆ ।
ಪೊದಪಿನಿಂ ಕಾಷಾಯವಸ್ತ್ರದ ।
ಸದಮಲದಜಂಗಮದ ವೇಷದೆ ಬಂದುದನು ಕಂಡು ॥ ೪ ॥

ಉಕ್ಕೆ ಭಕ್ತಿಯ ರಸವು ಹೃದಯದೊ ।
ಳುಕ್ಕೆ ಸುಖಬಾಷ್ಪವದು ಕಣ್ಣೊಳು ।
ತೆಕ್ಕೆಗೊಂಡಿರೆ ನವಿರು ಮೈಯನು ಕಂಡ ಜನತತಿಯು ||
ಇಕ್ಕೆ ನೆಲಕೊಡಲೆರಗಿ ತತ್ಪಾ ।
ದಕ್ಕೆ ಪೊಗಳುತೆ ಬಳಸೆ ಪಥದು ।
ದ್ದಕ್ಕೆ ಮಠಕಾಗಮಿಪ ನಿಜನಂದನನ ನಿರುಕಿಸುತೇ || ೫ ||

ಜನನಿಯೋಡುತೆ ಬಂದು ಗೈಯುತೆ ।
ಘನತರಾಲಿಂಗನವ ಕಣ್ಣೊಳು ।
ಜನಿಸಿದಾನಂದಾಶ್ರುಗಳಿನಭಿಷೇಕವೆಸಗುತ್ತೇ ||
ಅನಿಮಿಷದ ಕಡು ನೇಹದಿಟ್ಟಿಗ ।
ಳೆನಿಪ ಪೂಗಳ ಸೂಡಿದಳು ನಿಜ ।
ತನುಜನಾ ಶ್ರೀಪಾದದಿಂ ಮುಸ್ತಕದ ಪರ್ಯಂತಂ || ೬ ||

ನೋಡಿದೊಡನೆಯೆ ಸಮ್ಮುದಂ ಮಾ ।
ತಾಡದಂತೆಸಗಿರಲು ತಂದೆಯು ।
ಗೋಡೆಯಾ ಚಿತ್ರದವೊಲಲುಗದೆ ನಿಂದಿರುವ ಪರಿಯಾ ||
ನೋಡುತ್ತೈತಂದಾ ಜನಕನಂ ।
ನಾಡೆ ಬಿಗಿಯಪ್ಪುತ್ತೆ ಚಿಂತೆಯ ।
ನೋಡಿಸುತೆ ಸಲೆ ಬಾಲಯೋಗಿಯು ನಿಂದಿರಲು ಬಳಿಕೇ || ೭ ||

ಕವಿದ ದುಃಖದ ಕತ್ತಲೆಯು ಕಳೆ ।
ಯುವ ಸುತೇಜೋವಲಯಯುತಸುತ ।
ರವಿಯು ದರ್ಶನದಿಂದೆ ಭಕ್ತರ ನೇತ್ರಕಮಲಗಳು ||
ತವೆ ವಿಕಾಸವನೊಂದಿರಲು ಪಡೆ ।
ದವರ ಹೃನ್ನಳಿನೋದಿತಾಮೋ ।
ದವದು ಪೆರ್ಚುತ್ತಿರಲು ಶರಭಾಂಬಿಕೆಯು ನೆರೆದವರೊಳ್ || ೮ ||

ಕಳೆದ ಮಠದೈಸಿರಿಯು ದೊರೆತುದು ।
ಕುಲದ ಗುರುಸುರತರುವು ಬಂದುದು ।
ಮಲರಹಿತ ಭಕ್ತರ ಸುಚಿಂತಾಮಣಿಯು ಲಭಿಸಿದುದು ||
ಪಲವು ಮಾತೇನೆಮ್ಮ ಪುಣ್ಯದ ।
ಫಲವು ಮೇಣ್ ಕೈಸೇರ್ದುದೆನುತಾ ।
ಗಳೆ ನಿಜಾತ್ಮಜಮುಖವನೀಕ್ಷಿಸುತಿಂತು ಕೇಳಿದಳು || ೯ ||

ತನುಭವನೆ ನೀನಿಂತು ಜನನೀ ।
ಜನಕರಿಗೆ ತಿಳಿಸದೆಯೆ ಯಾತ್ರೆಗೆ ।
ಮನೆಯವರನುಳಿದೋರ್ವನೇ ತೆರಳಿದುದು ಸರಿಯೇನು ॥
ಇನಿತು ಕಾಲಮದಾವ ನೆಲೆಗಳೊ ।
ಳೆನಿತು ಕಷ್ಟವನನುಭವಿಸಿದೆಯೊ ।
ಕೊನೆಗೆ ನಮ್ಮಯ ಪುಣ್ಯದಿಂದೈತಂದೆಯಾ ಮಠಕೇ ॥ ೧೦ ॥

ಭಾವಿಸಲು ಪೋಗಿರ್ದ ನಮ್ಮಯ ।
ಜೀವವೇ ಮರಳಿದವೊಲಾಯ್ತಿ ।
ನ್ನೀವುದೀ ವಿಧದಿಂದೆ ತಿಳಿಸದೆ ಪೋಗದಿರು ಮುಂದೇ ॥
ಆವ ಕಠಿಣೋಕ್ತಿಯೊಳು ನಿನ್ನಗೆ ।
ನೋವನಾಗಿಸಲಾರೆನೈ ಬಾ ।
ದೇವರೇ ಮಜ್ಜನಸುಪೂಜಾದಿಗಳಿಗೆನೆ ಬಳಿಕೇ ॥ ೧೧ ॥

ನೆರೆದವರು ತನುಭವನ ಮೇಲಾ ।
ವರಿಸಿರುವ ತಾಯ್ಕರುಳಬಳ್ಳಿಯ ।
ಮರುಕದಲರ್ಗಳ ಮಾಳ್ಕೆಯಾ ನುಡಿಗಚ್ಚರಿಯನೊಂದೇ ॥
ಕಿರುನಗೆಯ ಮಲ್ಲಿಗೆಯ ಪಿತೃಗಳ ।
ಚರಣಕರ್ಪಿಸಿ ಪೇಳುವಾ ಮಗ ।
ನರಲ್ದ ಮೊಗದಾವರೆಯಿನೊಗೆದುದು ವಚನ ಮಧುವಿಂತು ॥೧೨॥

ಜನನಿ ನನಗಂ ನಿಮಗಮೀ ತ್ರಿಭು ।
ವನಕೆ ಗುರು ತನ್ಮಲ್ಲಿಕಾರ್ಜುನ ।
ನನುಪಮಿತ ಕೃಪೆಯಿಂದೆ ನಿಜಸನ್ನಿಧಿಗೆ ಬರುವಂತೆ ॥
ಘನದ ಲಿಂಗಧ್ಯಾನದೊಳು ಮೇಣ್ ।
ಕನಸಿನೊಳು ವೈದೋರಿ ಬೆಸಸಿದ ।
ನೆನಗೆ ಕೇಳಾ ಜಾಲಿಹಾಳಸುಪೂತಮಠದೊಳಗೇ ॥೧೩॥

ಕನಸಿನೊಳು ಕಂಡಾ ಗುರೂತ್ತಮ ।
ನನಘ ಜಂಗಮವೇಷದೊಳೆ ಮನ ।
ವನು ನಿಲಿಸಿ ಮರೆದೆಲ್ಲರನು ತೆರಳಿದೆನು ಕೇಳಮ್ಮಾ ॥
ನನಗೆ ತಾನಾ ಶ್ರೀಗಿರಿಯ ನಿ ।
ರ್ಜನದ ವನಮಧ್ಯದೊಳು ಚರರೂ ।
ಪಿನೊಳು ದೃಗ್ಗೋಚರಿಸಿ ಶಿವಯೋಗದ ರಹಸ್ಯವನು ॥೧೪॥

ಎಂತೊ ದಯೆಯಿಂ ಬೋಧಿಸಿವನೆಂ ।
ದಿಂತು ಸಂಗ್ರಹವಾಗಿ ಮೇಣಾ ।
ದ್ಯಂತವಿಷಯವ ನಡೆದುದೆಲ್ಲವ ಬಿತ್ತರಿಸಿ ಕೊನೆಗೇ ॥
ಸಂತಸದೆ ಚರಿಸುತ್ತೆ ಭಕ್ತರ ।
ಸಂತತಿಯ ರಕ್ಷಿಪ ವಿಧಾನವ ।
ಕಂತುಹರನೆಂತೊರೆದನೆಂಬುದ ವಿವರಿಸುತೆ ಬಳಿಕೇ ॥೧೫॥

ತಾಯೆ ನಿಮ್ಮ ಪವಿತ್ರಗರ್ಭದೆ ।
ಕಾಯವಿಡಿದೈತಂದ ಪುಣ್ಯದೆ ।
ತೋಯಜಾಕ್ಷ ವಿರಿಂಚಿ ಮುಖ್ಯರಿಗಂ ಲಭಿಸದಿರ್ಪಾ ॥
ಕಾಯಜಾರಿಶ್ರೀಪದವ ಮುನಿ ।
ಗೇಯವಂ ನಾಂ ಕಂಡೆಸಿದರಿಂ ।
ಶ್ರೇಯವಲ್ಲದೆ ನಿಮಗಮಿೂ ಭಕ್ತರ್ಗಮೆಂದೊರೆದಂ ॥೧೬॥

ಸಡಗರದೆ ಕಿವಿವಾಯ್ಗಳಿಂದಂ ।
ಕುಡಿದು ತಮ್ಮ ಗುರುನಂದನನ ನ ।
ಲ್ನುಡಿಯಮೃರ್ದನು ಪಡೆದವರು ಮತ್ತಲ್ಲಿ ನೆರೆದವರುಂ ॥
ಪಡೆದ ಪರಮಾನಂದಮಯುದಾ ।
ಕಡಲೊಳೀಸಾಡಿವರು ಮೈಯ ।
ಲ್ಲಡರಿದವು ಪುಳಕಗಳುದುರ್ದವು ಸುಖದ ಬಾಷ್ಪಗಳು ॥೧೭॥

ಎನಿತೊ ಪೂರ್ವದ ಪುಣ್ಯದಿಂದಂ ।
ಜನಿಸಿ ಶಿವಭಕ್ತರೊಳು ಲಿಂಗಾ ।
ರ್ಚನೆಯ ದಿನದಿನದಲ್ಲಿ ನಾವೆಸಗುತಿರೆ ಲಿಂಗದೊಳು ॥
ಮನವೆ ನಿಲ್ಲಮು ಮುಪ್ಪಡರ್ದುದು ।
ಗಣಿಸಲೆಳೆತನದಲ್ಲಿ ಕೆಲವೇ ।
ದಿನದೊಳೀತನು ಶಿವನ ಕಂಡುದು ಧರೆಗೆ ಪೊಸತಲ್ತೇ ॥೧೮॥

ಎಂದು ವೃದ್ಧರು ಕೆಲರು ಬಂಣಿಸೆ ।
ತಂದೆ ತಾಯ್ಗಳದಾವ ನೋಂಪಿಯೊ ।
ಳಿಂದುಧರನಂ ಕಂಡು ಬಂದೀ ಸುತನ ಪಡೆದಿಹರೋ ॥
ಎಂದುಸುರೆ ಕೆಲರುಳಿದವರು ನಮ ।
ಗಿಂದು ಶಿವನೇ ಗುರುಸುರೂಪದೆ ।
ಬಂದು ದರ್ಶನವಿತ್ತುದೆಲ್ಲರ ಪಣ್ಯವೆನುತಿರಲು ॥೧೯॥

ಈ ವಿಧದೊಳಿನ್ನೆಂತೊ ನಿಜಗುರು ।
ದೇವನಂ ಬಣ್ಣಿಸುತೆ ತಮ್ಮಯ ।
ದೇವರೆಂದೇ ನಂಬಿ ನಮಿಸುವ ಸರ್ವಭಕ್ತರನು ॥
ಶೀವಿದೊಲವಿಂ ಪರಸಿದಾ ಕರು ।
ಣಾವಲಂಬನ ಸುತನ ಮಠದೊಳ ।
ಗಾ ವಿಮಳೆ ಶರಭಾಂಬೆ ಕರೆದೊಯ್ದಳು ಸುಮಜ್ಜನಕೇ ॥೨೦॥

ನಲವು ಮಿಗೆ ಮೈದೊಳೆದು ಪೂಜೆಗೆ ।
ತಳುವದೆಲ್ಲವನಿರಿಸೆ ಜನನಿಯು ।
ಚಲುವೆಸೆವ ಮಡಿಯುಟ್ಟು ಪೂಜಾನಿಳಯಕೈತಂದು ॥
ಕುಳಿತು ಭದ್ರಾಸನದೆ ವಿಧಿಯಿಂ ।
ತಳೆದ ಭಸ್ಮ ಶಿವಾಕ್ಷಿಗಳು ಕಂ ।
ಗೊಳಿಸೆ ನಿಜಲಿಂಗಾರ್ಚನೆಗೆ ತೊಡಗಿದನು ಗುರುಸುತನು ॥೨೧॥

ಮಗನು ಮಾಡುವ ಲಿಂಗಪೂಜೆಯ ।
ಬಗೆಯು ತಾನದುವರೆಗೆ ನೋಡಿದ ।
ಮಿಗಿಲೆನಿಪ ಗುರುಚರರ ಲಿಂಗಾರ್ಚನೆಗೆ ನೂರ್ಮಡಿಯಿಂ ॥
ಮಿಗಿಲೆನಿಸಿದುದ ಕಂಡ ತಾಯಿಯ ।
ಮೊಗವು ಬೆರಗಿನ ಬಟ್ಟಲಾದುದು ।
ಬಗೆವಡಿಂತೆಸಗುವುದು ನಮಗಸದಳವದೆಂದರಿದು ॥ ೨೨ ॥

ದಿಟ್ಟಿಯೊಳು ಲಿಂಗವನು ಲಿಂಗದ ।
ಬಟ್ಟೆಯೊಳು ಹರಣವನು ಹರಣದೊ ।
ಳಿಟ್ಟ ಭಾವವನೊಂದುಗೂಡಿಸಿ ಜಾನಿಪುದರಿಂದೇ ॥
ಇಷ್ಟಲಿಂಗದ ಚಿತ್ಕಳೆಯು ತಾಂ ।
ಗಟ್ಟಿಗೊಂಡೊಳಹೊರಗೆ ಬೆಳಗಲು ।
ನೆಟ್ಟನದರೊಳು ಮುಳುಗಿ ಕುಳಿತಿರ್ದನು ಮಹಾಯೋಗಿ ॥ ೨೩ ॥

ಕುವರನಿಗೆ ಮೈದೋರಿ ಕೃಪೆಯಿಂ ।
ಶಿವನು ಸಲೆ ಸದ್ಬೋಧೆ ಗೈದಾ ।
ಸುವಿಮಳದ ಶಿವಯೋಗವಿದೆ ದಿಟವೆಂದು ನಿರುಕಿಸುತೇ ॥
ತವೆ ವಿಚಾರಿಸಲೆಮ್ಮಗೀತನೆ ।
ಶಿವನು ತನುಭವನೆಂದರಿವ ಮೋ ।
ಹವನೆ ತೊರೆಯುವುದುಚಿತಮೆಂದಳು ಸುಜ್ಞೆ ಶರಭಾಂಬೇ ॥ ೨೪ ॥

ತುಂಬೆ ಕಣ್ಮನಗಳೊಳು ಮಹಿಮಾ ।
ಲಂಬನಾ ಶಿವತೇಜವಾ ಶರ ।
ಭಾಂಬೆ ಪತಿಯಂ ಕರೆದು ತೋರಿಸಲಾ ಮಹೇಶ್ವರನು ॥
ಸಾಂಬನಾದ್ಭುತ ತೇಜವನು ಮೈ ।
ದುಂಬಿಕೊಂಡಾ ಸುತನ ನಿಶ್ಚಲ ।
ದಂಬಕದೆ ನಿರುಕಿಸುತೆ ಸತಿಗಿಂತೆಂದನಚ್ಚರಿಯಿಂ ॥ ೨೫ ॥

ಅಂಬುಜಾಕ್ಷಿಯೆ ನನ್ನ ಮನದೊಳು ।
ನಂಬಿಕೆಯು ಜನಿಸಿರ್ಪುದೀತನೆ ।
ಸಾಂಬಶಿವನೆಂದಿನ್ನಡಗಿದುದು ಜನಕಭಾವವದು ॥
ಮುಂಬರಿವುದತಿಭಕ್ತಿಯೊಗಳೆ ।
ಕುಂಬಿಡುವ ಬುದ್ಧಿಯದು ಪುಟ್ಟಿದು ।
ದೆಂಬೆನಿನ್ನೇನೀತನುದ್ಧಾರಕನು ಸರ್ವರಿಗೇ ॥ ೨೬ ॥

ತೆಗೆಯುತಿಂತತಿಭಕ್ತಿಯುದ್ಧಾ ।
ರಗಳ ನಿಜಭಕ್ತರನು ಕರೆಯಿಸಿ ।
ನಿಗಮಸನ್ನುತ ಪರಶಿವಧ್ಯಾನೈಕಮನನಾದಾ ॥
ಮಗನ ಪರಿಯನು ತೋರಿಸಲು ಕೈ ।
ಮುಗಿದು ಪರಿಕಿಸುತಖಿಳರುಂ ಬೊಂ ।
ಬೆಗಳ ತೆರದಿಂ ಕದಲದಂತಿರೆ ನಿಲ್ಲಲನಿತರೊಳು ॥ ೨೭ ॥

ಧಾನ್ಯವಿಮುಖತೆಯೊಂದೆ ತದ್ಗುರು ।
ಸೂನು ಕಂಡತಿಭಕ್ತಿಯಿಂದೀ ।
ಶಾನತೇಜೋವಲಯದಾತನ ಮುಖವಿಕಾಸವನು ॥
ಸ್ನಾನಪರಿಪೂತಾಂಗ ಭಕ್ತ ।
ಶ್ರೇಣಿ ತತ್ಪಾದಾರ್ಚನೆಯ ಸವಿ ।
ಧಾನದಿಂ ಗೈದಿಂತು ಗೀತೆಯ ಹಾಡತೊಡಗಿದುದು ॥ ೨೮ ॥

ಶ್ರೀಗಿರಿಯ ಸುಕ್ಷೇತ್ರಯಾತ್ರೆಗೆ ।
ಪೋಗಿ ಕಿರಿವರೆಯದೊಳೆ ಜಂಗಮ ।
ನಾಗಿ ತಾಂ ದೃಗ್ಗೋಚರಿಸಿದಾ ಮಲ್ಲಿಕಾರ್ಜುನನಿಂ ॥
ಯೋಗಗಳೊಳತ್ಯುತ್ತಮದ ಶಿವ ।
ಯೋಗದನುಭವ ಬೋಧೆಯಂ ಪಡೆ ।
ದಾಗಮಿಸಿದ ವಿರಾಗಮೂರ್ತಿಯೆ ನಿನಗೆ ಮಂಗಳವು ॥ ೨೯ ॥

ಗುರುಕುಲಾಕಾಶ ಪ್ರಭಾಕರ ।
ವರಪಿತೃಪ್ರಮುದಾಬ್ಧಿ ಹಿಮಕರ ।
ಚರಣಕಮಲಾಶ್ರಿತ ಸಮಸ್ತಸುಭಕ್ತಮಂದಾರ ॥
ಪರಮ ಕರುಣಾಕರ ದುರಿತಸಂ ।
ಹರ ಪರಾತ್ಪರ ಚಿತ್ಕಳಾಭಾ ।
ಸುರ ಮಹೇಶ್ವರ ನಿನಗೆ ಜಯಮಂಗಳವು ಸಂತತವು ॥ ೩೦ ॥

ಇಂತು ಪಾಡಿದ ಮಂಗಳದ ಸಮ ।
ನಂತರದೆ ತತ್ಪಾದತೀರ್ಥವ ।
ಸಂತಸಂ ಮಿಗೆ ಕೊಂಡು ಸರ್ವರು ಸವಿಯುಣಿಸುಗಳನು ॥
ಆಂತ ನಲವಿಂ ನೀಡಲೈತರೆ ।
ನಾಂ ತೆಗೆದುಕೊಳೆನೊಂದುಮಂ ಫಲ ।
ದಿಂ ತಣಿವೆನುಳಿದಶನಮಂ ತೊರೆದಿರ್ದೆನಾ ಗಿರಿಯೊಳ್ ॥ ೩೧ ॥

ಎಂದುದನು ಕೇಳ್ದೊಡನೆ ಮಿಗೆ ಬಗೆ ।
ನೊಂದ ಮಾತೆಯು ಮಹಿತ ಸುತನೆಡೆ ।
ಯೊಂದಿ ಬಾಲ್ಯದೊಳನ್ನವಿಲ್ಲದೆ ಬೆಳೆಯದೈ ತನುವು ॥
ಎಂದು ಬಗೆಬಗೆಯಿಂದೆ ಬೇಡಲು ।
ಮಂದಹಾಸದ ಮಗನು ವಿನಯವ ।
ನೊಂದಿ ವಿಜ್ಞಾಪಿಸಿದನಾ ಹಡದಮ್ಮಗೀತೆರದೇ ॥ ೩೨ ॥

ತನುವನೊಂದೇ ಬೆಳೆಯಿಸಿದರೇಂ ।
ಘನತೆಯಪ್ಪುದೆ ಮಾತೆ ಶಿವನಂ ।
ನೆನೆವ ಮನಮಂ ಚಲಿಸದಂತಿರೆ ಪೆರ್ಚಿಸುವುದದನು ॥
ಮನವು ನಿಶ್ಚಲವಾಗಿ ಶಿವಸುಖ ।
ದನುಭವದೊಳಿರೆ ದೇಹದೊಳು ಸಂ ।
ಜನಿಸದೇನಾರೋಗ್ಯ ಕಾಂತಿ ಸುಪುಷ್ಟಿ ಸಂಪದವು ॥ ೩೩ ॥

ಗಿರಿಯೊಳೈದೆ ಫಲಾಶನದೆ ನಾ ।
ಗಿರಿಜೆಯಾಣ್ಮನ ಜಾನಸೊಗದೊಳ ।
ಗಿರುವ ಕಾಲದೊಳಿತರ ಭೋಜನ ವಾಂಛೆ ಬಯಲಾಯ್ತು ॥
ಸೊರಗಿದುದೆ ನನ್ನೊಡಲು ಮೊದಲಂ ।
ತಿರದೆ ಶಕ್ತಿಯು ಪೆರ್ಚುತಿದೆ ನೀಂ ।
ಬರಿದೆ ಚಿಂತಿಸಬೇಡ ನನ್ನಾಹಾರವಿಷಯದೊಳು ॥ ೩೪ ॥

ಎಂದು ಪಡೆದವರಾತ್ಮವದು ನಲ ।
ವೊಂದುವಂತಿರೆ ಪೇಳ್ದು ತೃಪ್ತಿಯ ।
ನೊಂದಿದನು ಲಿಂಗಾರ್ಪಿತದ ತನಿವಣ್ಗಳಿಂ ಸುತನು ॥
ಅಂದುಮೊದಲಾತನು ಫಲಾಶನ ।
ದಿಂದಿರಲು ವಿಖ್ಯಾತಮಾದುದು ।
ಮುಂದೆಯಾಯೋಗಿಗೆ ಫಲಾಹಾರೇಶನಾಮವದು ॥ ೩೫ ॥

ಬಳಿಕೆ ಗುರುವರನಾಗಮಿಸಿದುದ ।
ತಿಳಿದು ಯಾತ್ರೆಯೊಳಾಮಹಾತ್ಮನ ।
ಕಳೆದುಕೊಂಡಾ ಭಕ್ತವರದಂಪತಿಗಳಾನೆಲೆಗೇ ॥
ತಳುವದೈತಂದಮಿತ ಮಹಿಮಾ ।
ನಿಳಯನಾತನ ಪಾದಧೂಳಿಯ ।
ತಳೆದು ತಲೆಯೊಳು ಪೊಗಳುತಿರೆ ಭಕ್ತಿಪ್ರಮೋದದೊಳು ॥ ೩೬ ॥

ಕಳೆದು ಕೆಲದಿನವಿಲ್ಲಿ ನಿಮ್ಮೆಡೆ ।
ಗೊಲವಿನಿಂ ಬರವೇಳ್ಕುಮೆಂದಿರೆ ।
ತಳುವದಾಗಮಿಸಿದಿರಿ ನೀವೇ ಭಕ್ತಪುಂಗವರೇ ॥
ಒಳಿತೆ ಆದುದು ಮೊದಲು ಬನ್ನಿರಿ ।
ಸಲಿಸುವುದು ಮಠದ ಪ್ರಸಾದವ ।
ಬಳಿಕುಳಿದ ಮಾತೆಂದು ನಕ್ಕನು ತದ್ಗುರೂತ್ತಮನು ॥ ೩೭ ॥

ಪಡೆಯೆ ದರ್ಶನಸುಪ್ರಸಾದವ ।
ನೊಡಲು ತುಂಬಿತು ತಣಿವಿನಿಂದಂ ।
ಮೃಡಸಮನೆ ನಿನ್ನಗಲಿಕೆಯ ದುಃಖಾತಿರೇಕವನು ॥
ಪಡೆದು ನಿನ್ನಾಗಮನವನೆ ಕ ।
ಣ್ಣೊಡೆವವೋಲ್ ದಿನದಿನದೆ ನೋಡಿದ ।
ಪಡೆದವರ ತಪ್ತಿಯದು ಸರ್ವರ ತೃಪ್ತಿಯೆನಿಸಿದುದು ॥ ೩೮ ॥

ಎಂದು ತದ್ದಂಪತಿಗಳಮಿತಾ ।
ನಂದದಿಂ ಕೊಂಡಾಡಲವರನು ।
ಬಂದು ಕರೆದೊಯ್ದುಪಚರಿಸಿ ಶರಭಾಂಬಿಕೆಯು ಬಳಿಕೇ ॥
ಮಂದಭಾಗ್ಯಳಿಗೆನಗೆ ಶಿವಸಮ ।
ನಂದನನ ದರ್ಶನಮಿದಾಯ್ತೆಲೆ ।
ತಂದೆ ತಾಯ್ಗಳೆ ನಿಮ್ಮೊಳಿರ್ಪತಿಭಕ್ತಿಬಲದಿಂದೇ ॥ ೩೯ ॥

ಒರೆವೆನೇಂ ನಿಮ್ಮಿಷ್ಟಗುರು ತಾಂ ।
ವಿರತಿಮೂರ್ತಿಯು ಪಣ್ಗಳಶನದೊ ।
ಳಿರುವನಾವುದ ಸವಿಯುಣಿಸನುಣನಾರು ಪೇಳಿದೊಡಂ ॥
ಇರನು ನಮ್ಮೆಡೆಯಲ್ಲಿ ಭಕ್ತರ ।
ಪೊರೆವ ಕಜ್ಜಕೆ ಪೋಪೆನೆಂಬನು ।
ಗಿರಿಸುತಾಪತಿಯಿಚ್ಛೆಯಿದ್ದಂತಾಗಲಿನ್ನೇನು ॥ ೪೦ ॥

ಎಂದೊರೆವ ಶರಭಾಂಬಿಕೆಗೆ ಪತಿ ।
ಯೆಂದನೆಲೆ ಕೋಮಲೆಯೆ ನಾವೇ ।
ನಂದನನು ಸದ್ಭಕ್ತರಕ್ಷಕನಾಗಿರುವ ವರವಾ ॥
ಅಂದು ಕೋರಿದೆವಲ್ತೆ ನಮ್ಮಾ ।
ನಂದದಾಯಕದಿಷ್ಟಲಿಂಗದೊ ।
ಳಿಂದು ಯೋಚಿಸಲನುಚಿತಮಿದೆಂಬುದನು ಕೇಳುತ್ತೇ ॥ ೪೧ ॥

ಭಕ್ತಭಾರ್ಯೆಯು ಪೇಳ್ದಳೆಲೆ ವರ ।
ಮುಕ್ತಿಯಾಣ್ಮನ ತಾಯೆ ನಿನ್ನನು ।
ರಕ್ತಿಯಾ ಪ್ರತಿಬಿಂಬಮೆನಿಸಿದ ಸುತನ ಕಾಯಕವು ॥
ಯುಕ್ತಮದು ಭಕ್ತೋದ್ಧರಣದಾ ।
ಸಕ್ತಿ ಪುಟ್ಟಿದುದಲ್ತೆ ಪೂಜ್ಯ ವಿ ।
ರಕ್ತ ಮೂರ್ತಿಗೆ ಮಗನಿಗಿದರಿಂ ಲೋಕಮಾತೆಯು ನೀಂ ॥ ೪೨॥

ಇಂತು ತದ್ಭಕ್ತಪ್ರಿಯೆಯು ತಾಂ ।
ನಂತವಿಸುತಿರೆ ತನ್ನ ತಾಯಿಯ ।
ನೆಂತೊ ನಲವಿಂ ನಗುತೆ ಯೋಗಿಯು ಪೇಳ್ದನೀತೆರದೇ ॥
ಕಂತುಹರಭಕ್ತೋತ್ತಮಳೆ ನೀ ।
ನಿಂತು ನುಡಿಯುತೆ ಮಾತೃಚಿತ್ತವ ।
ಶಾಂತವಾಗಿಸೆ ನಾನೊರೆವ ಭಾರವದು ಬಯಲಾಯ್ತು ॥ ೪೩ ॥

ಎನೆ ಜನನಿಯೊಡನೆಲ್ಲರುಂ ಫ ।
ಕ್ಕನೆ ನಗುತೆ ತದ್ಯೋಗಿ ವರನಂ ।
ಮನೆ ಮನಂಗಳ ದೇವರೆಂದುರೆ ನಂಬಿ ಭಕ್ತಿಯೊಳು ॥
ದಿನದಿನದೊಳುಪಚರಿಸಿ ಪಾದಾ ।
ರ್ಚನೆಯನೆಸಗುತೆ ಪಡೆಯುತಿರ್ದರು ।
ಮನದೆ ಬಯಸಿದ ಸರ್ವ ಫಲವನಸೂಟಿಯೂರೊಳಗೇ ॥ ೪೪ ॥

ಕೆಲದಿನಂಗಳ ಕಳೆದು ತನ್ಮಠ ।
ದೊಳಗೆ ಗುರುಸೇವೆಯೊಳು ವಾಂಛಿತ ।
ಫಲವ ಪಡೆದಾ ಭಕ್ತದಂಪತಿಗಳು ತೆರಳೆ ಬಳಿಕೇ ||
ಬಳೆಯುತಿರೆಯುಂ ವಿರತಿಭಾವವು ।
ದುಳಿದು ಮಠಮಂ ಮನವದೆಳಸುವ ।
ನೆಲೆಯನರಸುವ ಬಯಕೆ ಪಿರಿದಾಯ್ತಾಗುರೂತ್ತಮಗೇ || ೪೫ ||

|| ಮುಗಿದುದು || ಒಟ್ಟು ಪದಗಳು ||೪೪೧||



|| ಓಂ ಸದ್ಭಕ್ತರಕ್ಷಕಾಯನಮಃ ||

# ಹನ್ನೊಂದನೆಯ ಸಂಧಿ

---

**ಸೂಚನೆ:—** ಪರಮ ಯೋಗಿಯು ಪಿತೃಗಳಿಂದಂ ।
ದೊರೆಯೆ ಪಯಣಕ್ಕಪ್ಪಣೆಯು ತಾಂ ।
ತೆರಳಿದನು ಕೊಂಣೂರ ಮಠಕೆ ಶಿವಪ್ಪನವರೊಡನೇ ||

ಕ್ಷೇತ್ರವಾದುದಸೂಟಿಯೂರಾ ।
ಕ್ಷೇತ್ರಪತಿ ಯೋಗೀಶ್ವರನ ಸುಪ ।
ವಿತ್ರದರ್ಶನ ಭಾಗ್ಯಮಂ ಪಡೆವುದಕೆ ನಾಡವರು ||
ಪುತ್ರಮಿತ್ರಾದಿಗಳೊಡನೆ ತಾ ।
ಪತ್ರಯವ ಪರಿಹರಿಪನಾಸುಚ ।
ರಿತ್ರ ಗುರುವೆಂದರಿದು ಬರುವುದು ಹಿರಿದೆನಿಸುತಿರಲು || ೧ ||

ಬಂದವರು ತದ್ಯೋಗಿಚಂದ್ರನು ।
ನಿಂದೆ ವಾಂಛಿತ ಫಲಪದಂಗಳ ।
ನೊಂದಿ ಪೋಪುದನರಿಯುತುಳಿದ ಫಲಾಭಿಲಾಷಿಗಳ ||
ವೃಂದವಾಗಮಿಸುವುದು ವೃದ್ಧಿಯ ।
ನೊಂದೆ ತಜ್ಜನದಿಂದೆ ಪೂಜಾ ।
ನಂದಕವಕಾಶಮದೆ ಸಿಗದಂತಾದುದಾ ಗುರುಗೇ || ೨ ||

ಬಳಿಕೆ ಯೋಗಿಯು ಪೂಜ್ಯ ಮಾತೆಯ ।
ಬಳಿಗೆ ಬಂದೆನಗಿನ್ನು ಸಾಕೀ ।
ನೆಲೆಯು ಪೂಜಾದಿಗಳಿಗೆಡರಡಸುವುದು ಜನರಿಂದೇ ||
ನಲವು ಮಿಗೆ ಬೀಳ್ಕೊಡುವುದೆನ್ನನು ।
ತಿಳಿದೆಡೆಗೆ ತೆರಳುವೆನು ಜನನಿಯೆ ।
ತಳೆಯದಿರ್ಪುದು ಚಿಂತೆಯಂ ನೀನುಂ ಪಿತನುಮೆಂದು || ೩ ||

ತಳೆದ ನಮ್ರತೆಯೊಡನೆ ಬೇಡಲು ।
ಬಳಬಳನೆ ಬಿಡದಿಳಿವ ಕಣ್ಣೀ ।
ರ್ಗಳನೊರಸಿಕೊಳುತಂಬಿಕೆಯು ನಿಜಸುತನ ಕರವಿಡಿದು ||
ಗಳಿತಮಾದುದೆ ವಯವು ನಿನಗಿ ।
ನ್ನೆಳೆತನದೊಳೇ ನಮ್ಮನಗಲುವ ।
ಛಲವಿದೇತಕೆ ವಿರತಿ ಭೂತವು ಪಿಡಿದುದೇಕಿಂತು || ೪ ||

ಜನರನಾರನು ಬರಗೊಡೆನು ನಿ ।
ರ್ಜನದ ನೆಲೆಯನು ನಿನಗೆ ಲಿಂಗಾ ।
ರ್ಚನೆಗೆ ನಾನನುಗೊಳಿಸುವೆನು ಕೇಳಿನ್ನ ನುಡಿಗಳನು ॥
ತನಯನಿಗೆ ತಾಯ್ತಂದೆಗಳ ರ ।
ಕ್ಷಣವೆ ಮುಖ್ಯಮದಲ್ತೆ ದುಃಖದ ।
ವನಧಿಯೊಳು ನೂಂಕುತ್ತೆ ನಮ್ಮನು ಪೋಪುದೇಂ ಘನವೇ ॥ ೫ ॥

ಬಂದಿರುವುದೇ ಮುಪ್ಪು ನಿನಗೆಲೆ ।
ಕಂದ ಭಕ್ತರ ಪೊರೆವ ಕಜ್ಜಕೆ ।
ಮುಂದೆ ಬಹುಕಾಲದ ವಯವು ನಿನಗಿರ್ಪುದದರಿಂದೇ ॥
ಇಂದು ಪೋಗಲ್ಕಾತುರವಿದೇ
ಕೆಂದು ನಿಟ್ಟುಸಿರೊಡನೆ ನಡುಕವ ।
ನೊಂದಿರುವ ದನಿಯಿಂದೊರೆದಳೀದೈನ್ಯದುಕ್ತಿಗಳಾ ॥ ೬ ॥

ವರಸುತನ ಶಿವಯೋಗ ಮಹಿಮೆಯ ।
ನರಿದುಮರಿಯದ ವನಿತೆಯರವೋಲ್ ।
ಸುರಿಸಿ ದುಃಖಾಶ್ರುಗಳನೀವಿಧವಾಕ್ಯಗಳನೊರೆದಾ ॥
ಪರಿಯ ಕೇಳುತೆ ಪಡೆದ ಮಾತೆಯ ।
ಕರುಳ ಹಂಬಲವೆನಿತು ಘನವದು ।
ಮರವನೀವುದು ಸನ್ಮತಿಗಮೆಂದರಿದನಾಪಿತನು ॥ ೭ ॥

ತಿಳಿದು ತಾಯೆದೆಗೊಳದೆ ತುಂಬಿ ।
ರ್ದಲಘುಪುತ್ರಪ್ರೇಮದಾಳವ ।
ನೊಳಗೊಳಗೆ ಕಿರಿದಾಯ್ತು ಯೋಗಿಯ ವಿರತಿಭಾವವದು ॥
ತಿಳಿಯೆ ನಿರ್ಜಿತ ಚಿತ್ತರಿಗಮಸ ।
ದಳವು ಮಾತೃಪ್ರೇಮರೂಪದ ।
ಬಲೆಯನರಿದೊಗೆಯುತ್ತೆ ಪೋಗುವುದೀಧರಿತ್ರಿಯೊಳು ॥ ೮ ॥

ಕಾಣುತಂ ನಿಜಜನನಿಯಳಲವಿ ।
ಧಾನಮಂ ಬಿತ್ತರಿಸಿ ಕಂದಿ ।
ರ್ದಾನನವನೆದೆಗಿರಿದ ಶೂಲದ ನೋವನನುಭವಿಸಿ ॥
ಮೌನಮುದ್ರೆಯನೊಂದುತಾ ಸು ।
ಜ್ಞಾನಿಪುತ್ರನು ನಿಲಿಸಿ ಬಿಟ್ಟನ ।
ದೇನೊರೆವೆನಾತ್ಮಪ್ರಯಾಣವ ಕೆಲದಿನದವರೆಗಂ ॥ ೯ ॥

ಮೊದಲ ಮಾಳ್ಕೆಯ ಸವಿನುಡಿಗಳಿಂ ।
ಮುದವನೀಯದೆ ಮಗನು ನಿಜಲಿಂ ।
ಗದ ಸುಪೂಜಾಧ್ಯಾನದೊಳೊ ಮೌನದೊಳೊ ತಾನಿರಲು ॥
ಒದಗಿತೋ ನಮ್ಮಿಂದ ಬೇಸರ ।
ವದು ಸುಪುತ್ರಂಗೆಂದು ಚಿಂತೆಯ ।
ದೊದಗುವದು ಶರಭಾಂಬಿಕೆಗೆ ತಾಯ್ತನಮದಿಂತಲ್ತೇ ॥ ೧೦ ॥

ಜನದ ಮಧ್ಯದೊಳಿರದೆ ಲಿಂಗಾ ।
ರ್ಚನೆಯನುಳಿದಾವುದನು ಬಯಸದೆ ।
ನೆನೆಯುತೇನನೊ ಮೌನಮುದ್ರೆಯೊಳಿರುವನನವರತಂ ॥
ತನುಭವಂಗೀ ಸ್ಥಿತಿಯದೇತಕೆ ।
ಜನಿಸಿದುದೊ ನಾಂ ಕಾಣೆನೆಂದಾ ।
ಜನನಿ ತಾನೊಂದಿರುಳೊಳಾತ್ಮಜಗೊರೆದಳೀತೆರದೇ ॥ ೧೧ ॥

ನಗದೆ ನಲಿಯದೆ ಮುಗ್ಧನಂತಿರೆ ।
ಸೊಗವನೆಳಸದೆ ಬಂದಜನರಿಂ ।
ದಗಲುತೊಯ್ಯನೆ ಮಠದ ಮೂಲೆಯನೊಂದಿ ಮೌನದೊಳು ॥
ತೆಗೆಯದುಸಿರನು ಕುಳಿತುಕೊಳ್ಳುವ ।
ಬಗೆಯಿದೇನೆಮ್ಮೊಡನೆ ಬೇಸರ ।
ವೊಗೆದುದೇ ಪೇಳಣ್ಣ ನನ್ನೊಡನಿರ್ದ ಸಂಗತಿಯಾ ॥ ೧೨ ॥

ಎಂದು ಕೇಳುತ್ತಿರಲು ಕೂರ್ಮೆಯ ।
ನೊಂದಿ ಯೋಗೀಶ್ವರನು ಕಿರುನಗೆ।
ಯಿಂದೆ ಕೇಳೆಲೆ ತಾಯೆ ನಿಮ್ಮಯ ಸನ್ನಿಧಿಯೊಳೆನಗೇ ॥
ಒಂದಿನಿತು ಬೇಸರಮದಿಲ್ಲಾ ।
ನಂದದಿಂ ನಾನಿರ್ಪೆನೀಪರಿ ।
ಸಂದೆಯವನೊಡರಿಸಿತು ಪುತ್ರಪ್ರೇಮವದು ನಿನಗೇ ॥ ೧೩ ॥

ಮಾನಿನೀಯಳೆ ಮಾತೆ ಲಿಂಗ ।
ಧ್ಯಾನಜನಿತಾನಂದಮದು ತಾಂ ।
ಮೌನವೀಯುವುದಲ್ಲದಾರೊಡನಿಲ್ಲ ಬೇಸರವು ॥
ಕಾಣುವುದು ಗುರಮಲ್ಲಿಕಾರ್ಜುನ।
ನಾನನವು ಕುಳಿತೆಡೆಯೊಳಾತನ ।
ಧೀನನಾಂ ತನ್ನಿಚ್ಛೆಯಂತಾಗಿಸಲಿ ಮತ್ಕೃತಿಯಾ ॥ ೧೪ ॥

ಎಂದು ತಾಯೊಡನೊರೆದು ತದ್ಗುರು ।
ನಂದನನು ಸಮನಂತರದೆ ತಾಂ ।
ತಂದೆಯೇ ಗಿರಿಮಲ್ಲಿಕಾರ್ಜುನ ನನ್ನ ಪಿತೃಜನರಾ ॥
ದಂದುಗವ ಕಳೆದವರ ಪರಕೆಯ ।
ನೆಂದು ನೀಂ ಕೊಡಿಸುವಿಯೊ ಪೋಗುವೆ ।
ನಂದು ಭಕ್ತರ ಪೊರೆವ ಕಜ್ಜಕ್ಕೆಂದು ಬೇಡಿದೆನು ॥ ೧೫ ॥

ಮಗನ ಮನದುತ್ಕಟದ ಕಾಂಕ್ಷೆಯ ।
ಬಗೆಯದಿಂತಿರಲರಿದು ಮಾತೆಯು ।
ತೆಗೆಯದೆಯೆ ಮತ್ತಾವ ನುಡಿಗಳನಂದಿನಿರುಳಿನೊಳು ॥
ಬಗೆಯೊಳಾತ್ಮಜವಿಷಯವನೆ ತಾಂ ।
ಬಗೆಯುತಂ ಪವಡಿಸೆ ಕನಸಿನೊಳು ।
ನಗೆಮೊಗದ ಜಂಗಮದ ರೂಪದೆ ಮಲ್ಲಿಕಾರ್ಜುನನು ॥ ೧೬ ॥

ಕೊಟ್ಟು ದರ್ಶನವೆಲೆ ಮಗಳೆ ನೀಂ ।
ಬಿಟ್ಟು ಕಳೆ ದುಗುಡವನು ನಿಮ್ಮಗೆ ।
ಪುಟ್ಟಿದಣುಗನು ಲೋಕರಕ್ಷಕನಾಗಿ ಬೆಳಗುವನು ॥
ಕೊಟ್ಟು ನಲ್ವರಕೆಗಳನೀತನ ।
ಬಟ್ಟೆಗೆಡರಾಗಿಸದೆ ಕಳಿಹಿಸು ।
ಪುಟ್ಟುವನು ನಿಮ್ಮನ್ವಯವ ಪೊರೆವೆರಡನೆಯ ಸುತನು ॥ ೧೭ ॥

ವರದ ಹಸ್ತವನೆತ್ತಿ ನಗೆಯಿಂ ।
ಪರಸುತೀಬಗೆಯಿಂದೆ ತಾಂ ವ್ಯೈ ।
ಗರೆಯಲೆಚ್ಚರವೊಂದಿ ಶರಭಾಂಬಿಕೆಯು ನಡೆದುದನು ॥
ಒರೆಯೆ ನಿಜವಲ್ಲಭನಿಗೀರ್ವ್ವರು ।
ಪರಮ ಮೋದಾಬ್ಧಿಯೊಳಗೀಸುತೆ ।
ಪರಶಿವನ ಕರುಣೆಯನು ಕೊಂಡಾಡುತಿರೆ ಬೆಳಗಿನೊಳು ॥ ೧೮ ॥

ಇತ್ತಲಾ ಕೋಣ್ಣೂರ ಮಠದೊಳು ।
ಸುತ್ಯಗೃಹಿಧರ್ಮದೊಳು ತಾಂ ಸ ।
ದ್ವೃತ್ತಳೆನಿಸಿದ ಪಾರ್ವತೀನಾಮಕ ಸುಸತಿಯೊಡನೇ ॥
ನಿತ್ಯಮುಂ ದಾಸೋಹಮೆಂಬುವ ।
ಭೃತ್ಯಭಾವದ ಕಾಯಕವ ನಲಿ ।
ವುತ್ತೆ ನಡೆಯಿಸುತಿರ್ದನೈದೆ ಶಿವಾಖ್ಯಗುರುವರನು ॥ ೧೯ ॥

ಬಂದನಾ ಶಿವಯೋಗಿ ದರ್ಶನ ।
ಕೆಂದು ಕೊಣ್ಣೂರಿಂದೆ ಗುರುಪದ ।
ವೊಂದಿ ಮೆರೆವ ಶಿವಾಭಿಧಾನಸ್ವಾಮಿಯಳ್ತಿಯೊಳು ॥
ಅಂದು ಕಂಡಾ ದಂಪತಿಗಳೊಲ ।
ವಿಂದೆ ಬಂದಿದಿರ್ಗೊಂಡು ನಲಿ ಕರೆ ।
ತಂದು ಗದ್ದುಗೆ ಯಿಕ್ಕೆ ಮಂಡಿಸದಂತೆ ಶಿವಗುರುವು ॥ ೨೦ ॥

ಎಲ್ಲಿ ನಿಮ್ಮಯ ಸುತ ಮಹೇಶ್ವರ ।
ನೆಲ್ಲಿ ಸಾಕ್ಷಾತ್ಕೃತಧರಾಧರ ।
ಮಲ್ಲಿಕಾರ್ಜುನ ಗುರುವರನು ಶಿವಯೋಗಭಾಸುರನು ॥
ಎಲ್ಲಿರುವನಾಶ್ರಿತಸುರದ್ರುಮ ।
ನೆಲ್ಲಿರುವನೆನಗಾಗಿಸಿರಿ ನ ।
ಮೆಲ್ಲರುದ್ಧಾರಕನ ಪಾದಪಯೋಜದರ್ಶನವಾ ॥ ೨೧ ॥

ಎಂದುಕೇಳ್ವನಿತರೊಳೆ ಸಮ್ಮುಖ ।
ವೊಂದಿರುವ ತನ್ನಂಘ್ರಿಕಮಲಕೆ ।
ವೊಂದಿಸುತ್ತಿರುವಾ ಶಿವಾರ್ಯನ ಕೈವಿಡಿದು ಯೋಗಿ ॥
ಮಂದಹಾಸಪ್ರಭೆಯೊಳುರೆ ತ ।
ಣ್ಪೊಂದಿಸುತೆ ಕಣ್ಮನಗಳಿಗೆ ಕರೆ ।
ತಂದನಾ ಕೊಣ್ಣೂರ ಮಠದ ಪ್ರಭುವ ಗದ್ದುಗೆಗೇ ॥ ೨೨ ॥

ಕುಳಿತುಕೊಳ್ಳಲು ಪೇಳ್ವ ಯೋಗಿಯ ।
ನೊಲವಿನಿಂ ಸೆಳೆದಾ ಶಿವಾರ್ಯನು ।
ಬಳಿಯ ಗದ್ದುಗೆಯಲ್ಲಿ ಕುಳ್ಳಿರಿಸುತ್ತೆ ತಾಂ ನಿಂದು ।
ತಲೆಯ ಬಾಗಿಸಿ ಕೈಮುಗಿದು ಗುರು ।
ತಿಲಕನೇ ನಿನ್ನಮಳ ದರ್ಶನ ।
ಕೆಳಸಿ ಬಂದೆನು ಸಫಲಮಾದುದು ಜನ್ಮವೀದಿನದೇ ॥ ೨೩ ॥

ಸ್ವಾಮಿಯೇ ಕೊಣ್ಣೂರ ಮಠಕೆ ।
ಪ್ರೇಮದಿಂದಾಗಮಿಸಿ ಪಾದ ।
ಪ್ರೇಮಿಯಾದೆನ್ನಿಂದೆ ಸೇವೆಯ ಕೊಂಡು ಕರುಣದೊಳು ॥
ಭೂಮಹಿತದಾ ವೀರಶೈವದ ।
ಸಾಮರಸ್ಯದ ದಿವ್ಯತರ ಬೋ ।
ಧಾಮೃತವನೀಂಟಿಸುತೆ ಭವರೋಗವನು ಕಳೆಯೆಂದು ॥ ೨೪ ॥

ಬೇಡಲಾ ಮಠದಾರ್ಯನುರೆ ಕೈ ।
ಗೂಡಿತೆನ್ನಯ ಕೃತಿಯೆನುತೆ ನಗೆ ।
ಗೂಡಿ ನಿಮ್ಮಯ ವಾಂಛೆಯಂತಾಂ ನಡೆದುಕೊಳ್ಳುವೆನು ॥
ಬೇಡಯೋಚನೆಯೆಂದು ತಾಂ ಮುದ ।
ಗೂಡಿ ಮಜ್ಜನ ಭೋಜನಾದಿಯ ।
ಮಾಡಿಸಿದನಾ ಸ್ವಾಮಿಗೈಸಲೆ ಮಠದೆ ಶಿವಯೋಗೀ ॥ ೨೫ ॥

ಬಳಿಕೆ ತಾಯ್ತಂದೆಗಳು ಮಗನನು ।
ಕಳಿಸಿಕೊಡುವದಕೀನಿಮಿತ್ತವ ।
ಸುಲಭದಿಂ ತಂದೊಡ್ಡಿದನು ಮಲ್ಲಯ್ಯನೇ ಎಂದು ॥
ತಿಳಿದು ಮನದೊಳು ಬೇರೆ ಮಾತನು ।
ಬಳಸದೆಯೆ ಕೊಣ್ಣೂರ ಪಯಣಕೆ ।
ಸಲಿಸಿದರು ಸಮ್ಮತಿಯನಾತ್ಮಪ್ರಿಯ ಕುಮಾರನಿಗೇ ॥ ೨೬ ॥

ಪಡೆದವರು ಕೊಣ್ಣೂರ ಪಯಣಕೆ ।
ಕೊಡಲು ತನಗೊಪ್ಪಿಗೆಯನಾಗಳೆ ।
ಪಡೆದು ಕಡು ಸಮ್ಮುದವ ಬಗೆವಂದೆಡೆಗೆ ತೆರಳುತ್ತೇ ॥
ಪೊಡವಿಯವರನು ಪೊರೆವ ಕಜ್ಜವ ।
ನಡೆಸ ತೊಡಗುವೆನೆಂದು ಮತ್ತಂ ।
ಪಡೆದನಾ ಪಿತೃಜನರನುಜ್ಞೆಯ ವಿನಯದಿಂ ಯೋಗೀ ॥ ೨೭ ॥

ಊರವರು ತಿಳಿದಿದನು ಮಠದೊಳು ।
ಸೇರಿ ತತ್ಪಾದಕ್ಕೆ ಮಂಗಳ ।
ದಾರತಿಯನೆಸಗುತ್ತೆ ಶುಭತರವಾದ್ಯರವದೊಡನೇ ॥
ಭೂರಿ ಸಂಭ್ರಮದಿಂದೆ ತಮ್ಮೋ ।
ದ್ಧಾರಕನ ಗುರುವರನ ಬೀಳ್ಕೊಡು ।
ವಾರುಚಿರತರದುತ್ಸವದೆ ಭಾಗವ ವಹಿಸೆ ಬಳಿಕೇ ॥ ೨೮ ॥

ಕೊಟ್ಟು ನಲ್ವರಕೆಗಳನೈಸಲೆ ।
ಬಿಟ್ಟು ಸುತಮೋಹವನು ಹೃದಯದೊ ।
ಳಿಟ್ಟು ಲೋಕೋದ್ಧಾರಪರಗುರುವೆಂಬ ಭಕ್ತಿಯನು ॥
ನೆಟ್ಟನಾಶಿವಯೋಗಿ ಫಾಲದೊ ।
ಳಿಟ್ಟು ಶುಭದಾರತಿಯ ತಿಲಕವ ।
ಹುಟ್ಟಿದೂರಿಗದೊಮ್ಮೆ ಪಾದವನಿಟ್ಟು ಪೊರೆಯೆಂದು ॥ ೨೯ ॥

ಅಂಬಕಂಗಳಿನಿಳಿಯುತಿರ್ಪ ಸು ।
ಖಾಂಬುವಿಂ ನಾಂದೆದೆಯೊಳಾ ಶರ ।
ಭಾಂಬಿಕೆಯು ನುಡಿದೊಡನೆ ನೆರೆದವರೆಲೆ ಗುರುವೇ ॥
ನಂಬಿದವರನು ಮರೆಯದಿರು ಕರು ।
ಣಾಂಬುಧಿಯೊಳೀ ಸಾಡಿಸೆಮ್ಮನು ।
ಸಾಂಬಶಿವಮಹಿಮಾವಲಂಬನಮೂರ್ತಿಯೆಂದೆರೆಯೇ ॥ ೩೦ ॥

ಯೋಗಿಯೆಲ್ಲರಿಗುಚಿತ ವಾಕ್ಯದೊ ।
ಳಾಗಿಸುತೆ ಸಂಮುದವ ಮೇಣ್ ತನ ।
ಗಾಗಿ ಯೇರ್ಪಟ್ಟಂದಣದೆ ಮಂಡಿಸುತೆ ಕೊಣ್ಣೂರ್ಗೆ ॥
ಆಗಮಿಸಲಾಗ್ರಾಮದವರನು ।
ರಾಗದಿಂದಿದಿರ್ಗೊಂಡು ಮಹಿತ ವಿ ।
ರಾಗಮೂರ್ತಿಯ ಕರೆದುತಂದರು ಮಠಕೆ ಸಂಭ್ರಮದೇ ॥ ೩೧ ॥

ತನ್ನ ಮಠಕೈತಂದಿರುವ ಮಹಿ ।
ಮೋನ್ನತಿಯ ಶಿವಯೋಗಿವರನನು ।
ತನ್ನ ಕರತಲದಿಷ್ಟಲಿಂಗವೆ ಜಂಗಮಾಕೃತಿಯಿಂ ॥
ಕಣ್ಣ ಮುಂದಕೆ ಬಂದುದೆನುತನು ।
ನನ್ಯ ಭಕ್ತಿಯೊಳುಪಚರಿಸಿದನು ।
ಮಾನ್ಯನೆನಿಸಿದಾ ಶಿವಪ್ಪಯ್ಯನು ಗುರೂತ್ತಮನು ॥ ೩೨ ॥

ಬಾಲಶಿವಯೋಗಿಯ ಶಿವಾರ್ಚನ ।
ಕಾಲದಾ ಲಿಂಗಾಂಗಯೋಗವಿ ।
ಶಾಲಸುಖಮಗ್ನತೆಯ ಕಂಡು ಶಿವಾರ್ಯನಚ್ಚರಿಯಾ ॥
ತಾಳುತೀತನು ಮನುಜನಲ್ಲವು ।
ಶೂಲಧರನಪರಾವತಾರದ ।
ಲೀಲೆಯಾಣ್ಮನು ನಿಕ್ಕುವಮಿದೆಂದೊರೆದನೆಲ್ಲರೊಳು ॥ ೩೩ ॥

ಗಿರಿಯ ಯಾತ್ರೆಗೆ ಪೋಗಿ ಮಲ್ಲೇ ।
ಶ್ವರನ ಸಾಕ್ಷಾತ್ಕರಿಸಿಕೊಂಡೈ ।
ತರುತೆ ಕಿರಿವರೆಯದೊಳೆ ನಿಜಮಠವುಳಿದು ವಿರತಿಯೊಳು ॥
ಧರೆಯವರಿಗಿಷ್ಟಾರ್ಥವೀಯುತೆ ।
ಚರಿಸಲೈತಂದಿರುವನೆಂಬುದ ।
ನರಿದೊಡನೆ ಕೊಣ್ಣೂರವರು ಕಿಕ್ಕಿರಿದರಾಮಠದೇ ॥ ೩೪ ॥

ಹೊಳೆವ ಶಿವಶಾಂತಿಪ್ರಭಾಸಂ ।
ಕಲಿತ ತದ್ಯೋಗೀಂದ್ರ ಮುಖಮಂ ।
ಡಲದ ಕಳೆ ವಂದಿಸುವರಘವನು ಕಳೆಯುತಿರಲವರು ||
ಕೆಲಬಲದೆ ಸಾಲ್ಗೊಂಡು ದಿಟ್ಟಗ ।
ಳಲುಗದಂತಿರೆ ನೋಡುತಲ್ಲಿಯೆ ।
ಕಳೆದೊಡಂ ಬಹುಕಾಲವದನರಿಯದೆಯೆ ನಿಂದಿರಲು || ೩೫ ||

ಇಂತು ನಿಂದವರೆದೆಯ ಬಯಕೆಗ ।
ಳಂ ತಿಳಿಯುತೊಳನೋಟದಿಂದಂ ।
ಸಂತಸದೊಳವರಲ್ಲಿ ಕರುಣಾದೃಷ್ಟಿಯನು ಚೆಲ್ಲಿ ||
ತಾಂ ತೆರಳುವಂತವರಿಗಪ್ಪಣೆ ।
ಯಂ ತವಮುಳಾತ್ಮನು ಕೊಡಲು ಫಲ ।
ಮಂ ತಳೆವರೆಳಸಿರ್ದ ಮಾಳ್ಕೆಯೊಳವರು ಶೀಘ್ರದೊಳೇ || ೩೬ ||

ನೆಟ್ಟನಿದನರಿಯುತ್ತೆ ಕವಪಿನೊ ।
ಳಿಟ್ಟ ಕೈಗಳಿನೆಲ್ಲರಚ್ಚರಿ ।
ವಟ್ಟು ತಾವೀ ಯೋಗಿಕುಲಶೇಖರನು ನಿಜಕೃಪೆಯಾ ||
ದಿಟ್ಟಿಯನು ನಸು ಚೆಲ್ಲಿ ಫಲಮಂ ।
ಕೊಟ್ಟು ಕಳೆವನು ಮನದ ಬಯಕೆಯ ।
ಪುಟ್ಟರೀತನ ತೆರದ ಯೋಗಿಗಳೆಂದು ಪೊಗಳಿದರು || ೩೭ ||

ಸಿರಿಯ ಪಡೆದವರೆಡೆಗೆ ಮೋಕ್ಷ ।
ತರುವುದೈ ಸಿರಿಯೆಂಬ ನುಡಿಯಂ ।
ತರಿವೊಡೆಮ್ಮಸ್ವಾಮಿಯುನ್ನತಮಹಿಮೆಯಾ ಮಠಕೇ ||
ಕರುಣದಿಂದೈತಂದನದ್ಭುತ ।
ತರದ ಮಹಿಮಾಮೂರ್ತಿಯೀತನು ।
ಪರಮ ಪುಣ್ಯವು ನಮ್ಮದೆಂದೂರವರು ಹಿಗ್ಗಿದರು || ೩೮ ||

ಇಂತು ಕೊಣ್ಣೂರಿನೊಳು ನಿಜಪದ ।
ದಂತಿಕಕೆ ಬರುವಖಿಳಭಕ್ತರು ।
ಚಿಂತಿಸಿದ ಫಲವೀವ ಚಿಂತಾಮಣಿಯೆನಿಸಿ ಯೋಗೀ ||
ಸಂತಸದೆ ಗುರುಮಠದೊಳಿರಲಾ ।
ಶಾಂತಮೂರ್ತಿಯ ಸೇವೆಯಂ ನಲ ।
ವಾಂತು ಗೈವ ಶಿವಾರ್ಯಗದು ಸಾಕೆನಿಸದಂತಾಯ್ತು || ೩೯ ||

|| **ಮುಗಿದುದು** || **ಒಟ್ಟು ಪದಗಳು** ||**೪೮೦**||

---

॥ ಓಂ ಪಂಚಾಚಾರಬೋಧಕಾಯನಮಃ ॥

# ಹನ್ನೆರಡನೆಯ ಸಂಧಿ

---

**ಸೂಚನೆ:—** ವೀರಶೈವ ಪ್ರಾಣಪಂಚಾ ।
ಚಾರವನು ಬೋಧಿಸಿದನಾ ಕೊ ।
ಣ್ಣೂರ ಮಠದೊಳು ಯೋಗಿ ಭಕ್ತಾನ್ವಿತ ಶಿವಾರ್ಯನಿಗೇ ॥

ಒರೆವೆನೇನಾನಿನ್ನ ಸೂಟಿಯೊ ।
ಳಿರುವ ಕಾಲದೆ ಸರ್ವಭಕ್ತ ।
ರ್ಪೆರಸಿ ಜನನೀಜನಕರುಪಚರಿಸಿದುದ ಮರೆವಂತೆ ॥
ಚರಣಸೇವೆಯನೆಸಗುತಂ ಸುಖ ।
ಶರಧಿಯೊಳಗೀಸಾಡಿಸಿದನಾ ।
ಗುರುವನುರುತರ ಭಕ್ತಿಯುತನು ಶಿವಾರ್ಯನಾ ಬಳಿಕೇ ॥ ೧ ॥

ನಶ್ವರಸ್ಥಿತಿಗಳನು ಕಳೆಯುತೆ ।
ಶಾಶ್ವತದ ಶಿವಸುಖವನೀಯುವ ।
ವಿಶ್ವಮಾನ್ಯದ ವೀರಶೈವದ ತತ್ವವುಸುರೆಂದು ॥
ವಿಶ್ವಪೂಜಿತನಾಫಲಾಹಾ ।
ರೇಶ್ವರನ ಪದಪದ್ಮಯುಗಳಕೆ ।
ಶಶ್ವದಭಿವಾದನವೆಸಗಿ ಶಿವವಿಭುವು ಬೇಡಿದನು ॥ ೨ ॥

ಚೆನ್ನಿಗನ ಶಿವಯೋಗಿಕುಲಸ ।
ನ್ಮಾನ್ಯನರಳ್ದ ಮುಖಾಬ್ಜದಿಂದು ।
ತ್ಪನ್ನವಾಣಿಯನಖಿಳಭಕ್ತರು ಕರ್ಣಪಥದಿಂದೆ ॥
ನನ್ನಿ ನಲ್ಮೆಯೊಳೆದೆಯ ಗದ್ದುಗೆ ।
ಗಿನ್ನು ಬಿಜಯಂಗೈಸಿ ಸೇವಿಸಿ ।
ಧನ್ಯರಾಗಲು ಬಯಸಿ ಮಠದಗಲದೊಳು ನೆರೆದಿರಲು ॥ ೩ ॥

ವಿಲಸಿತದ ಮಠಮಧ್ಯರಂಗದೆ ।
ಸಲೆವಿರಚಿಸಿದ ಪೀಠದೊಳು ತಾಂ ।
ಕುಳಿತು ಚಿತ್ಕಳೆ ಮೂರ್ತಿವೆತ್ತಂತಿರ್ಪ ಗುರುವರನು ॥
ಬಳಿಯ ಭಕ್ತರ ಕಣ್ಣಕುವಲಯ ।
ವಲರಿಸುತ್ತಿರೆ ನಿಜವದನಶಶಿ ।
ಕಳೆಯು ಬೋಧಿಸತೊಡಗಿದನು ಮೆಲ್ಲಗೆಯೊಳೀತೆರದೇ ॥ ೪ ॥

ಸದಯಹೃದಯರೆ ವೀರಶೈವಮ ।
ತದ ವಿಚಾರದ ಸಂಗ್ರಹವ ಸಂ ।
ಮುದದೆ ವಿವರಿಸುತಿರ್ಪೆನಾಲಿಸಿರರಿವೊಡೀ ಮತವು ॥
ಮೊದಲು ಪರಶಿವವಕ್ತ್ರದಿಂ ಜನಿ ।
ಸಿದ ಮಹಿತ ಶೈವಾಗಮಗಳೊಳು ।
ವಿದಿತವಾಗುವ ಸರ್ವತತ್ವದ ಸಾರವೆನಿಸಿಹುದು ॥ ೫ ॥

ವೀರಶೈವದ ಮುಖ್ಯವಿಷಯವು ।
ಮೂರು ಬಗೆಯಾಗುವುದು ಪಂಚಾ ।
ಚಾರಮಷ್ಟಾವರಣಮುಂ ಷಟ್‌ಸ್ಥಲಮೆನಿಪ ಪೆಸರಿಂ ॥
ವೀರಶೈವರ ವಿಶ್ವಮಾನ್ಯದು ।
ದಾರತರ ನೀತಿಗಳ ತತ್ವವಿ ।
ಚಾರವನು ತಿಳಿಸುವವು ಪಂಚಾಚಾರಗಳು ನಮಗೀ ॥ ೬ ॥

ವೀರಶೈವರ ಮತಭವನದಾ ।
ಧಾರಭೂತಸ್ತಂಭಗಳವೋಲ್
ಸಾರತರದಷ್ಟಾವರಣಗಳು ಬೆಳಗುತಂ ನಿರುತಂ ॥
ವೀರಶೈವ ಸಮಾಜಧರ್ಮೋ ।
ದ್ಧಾರವರತತ್ವಗಳ ವಿವರಿಸಿ ।
ತೋರಿಸುವವೆಮಗಿತರ ಧರ್ಮಸ್ಥಿತಿಗೆ ಮಿಗಿಲೆನಿಸಿ ॥ ೭ ॥

ವೀರಶೈವರ ತತ್ವಶಾಸ್ತ್ರವಿ ।
ಚಾರಪರಸಿದ್ಧಾಂತವಮ ವಿ ।
ಸ್ತಾರವಾಗೆಸೆಯುವುದು ತಾಂ ಷಟ್‌ಸ್ಥಲದ ಸರಣಿಯೊಳು ॥
ಭಾರತದ ಮತಗಳೊಳು ಕಾಣದ ।
ಚಾರುತರ ವೈಶಿಷ್ಟ್ಯವದರೊಳು ।
ತೋರುವುದು ಮತತತ್ವವರಿವರಿಗಚ್ಚರಿಯನಿತ್ತು ॥ ೮ ॥

ಸಾರನೀತಿಯು ನೆಲೆಯೆನಿಸಿದಾ ।
ಚಾರಪಂಚಕವಿಷಯವನು ಸುವಿ ।
ಚಾರಿಗಳೆ ಮೊದಲೊರೆವೆನಾಲಿಸಿರೇಕಚಿತ್ತದೊಳು ॥
ವೀರಶೈವವು ಕಟ್ಟಿರುವ ಸುವಿ ।
ಚಾರಸತ್ಕ್ರಿಯೆಯೆಂಬ ವಿಮಳೋ ।
ದಾರಭವನಕೆ ನೀತಿಯೇ ನೆಲಗಟ್ಟೆನಿಸುತಿಹುದು ॥ ೯ ॥

ದಯೆ ಸಮತೆ ಮೊದಲಾದ ಸದ್ಗುಣ ।
ಚಯವೆ ನೀತಿಗೆ ತನುವು ಸೌಖ್ಯಾ ।
ದಿಯನು ತನ್ನಂತನ್ಯರಿಗೆ ಬಯಸುವುದೆ ಆತ್ಮವದು ॥
ದಯೆಯೆ ಧರ್ಮದ ಮೂಲವೆಂಬು ।
ಕ್ತಿಯ ವಿಚಾರಿಸಿ ನೋಡೆ ಹಿಂಸಾ ।
ಮಯದ ಯಜ್ಞಾದಿಗಳು ನೀತಿಗೆ ದೂರವಾಗಿಹವು ॥ ೧೦ ॥

ಎಂಬುದರಿದಾ ವೀರಶೈವರು ।
ನಂಬದೆಯೆ ಯಜ್ಞಾದಿಫಲಗಳ ।
ನಾಂಬಮಯವು ಚರಾಚರಾತ್ಮಕ ಜಗವಿದೆಂಬುದನು ॥
ನಂಬಿ ತಮಗಂ ಪರರಿಗಂ ಸುಖ ।
ಮಂ ಬಯಸಿ ಸಮತೆಯೊಳು ನಡೆಯುವು ।
ದಂ ಬಿಡದೆ ಕಲಿಯುವರು ಪಂಚಾಚಾರ ಮುಖದಿಂದೇ ॥ ೧೧ ॥

ತಾನುಮಿತರರುಮಾಮಹೇಶನ ।
ಸೂನುಗಳು ಬೇರಲ್ಲವೆಂಬೀ ।
ಜ್ಞಾನಮೆಲ್ಲರೊಳಿರ್ದೊಡೇಂ ಫಲಮಪ್ಪುದದರಿಂದೇ ॥
ಜ್ಞಾನದಂತಾಚರಿಸಿ ಸುಖದುಃ ।
ಖಾನುಭವಮಂ ಸರ್ವರೊಡನೆ ಸ ।
ಮಾನವಾಗಿಯೆ ಪಡೆವುದೇ ಮಾನವಕುಲದ ನೀತಿ ॥ ೧೨ ॥

ಮನುಜಲೋಕವನುದ್ಧರಿಸುವೀ ।
ಘನತರದ ನೀತಿಯೆ ಸದಾಶಿವ ।
ನೆನಿಸಿ ಪಂಚಾಚಾರಗಳೆ ತತ್ಪಂಚಮುಖವಾಗಿ ॥
ಮಿನುಗುವವು ದಿಟವೆಂದು ನಿಜಜೀ ।
ವನದೊಳವನಳವಡಿಸಿ ನಡೆಯುವು ।
ದನುಪಮದ ತದ್ವೀರಶೈವದ ಮಾರ್ಗವೆನಿಸುವುದು ॥ ೧೩ ॥

ವೀರಶೈವನು ಲಿಂಗಗುಣದೊಳು ।
ಸೇರೆ ಲಿಂಗಾಚಾರಮದು ಮೇಣ್ ।
ಧೀರರೊಪ್ಪುವ ನಡತೆಯು ಸದಾಚಾರವೆನಿಸುವುದು ॥
ತೋರುವೀವಿಶ್ವದೊಳು ಶಿವನಾ ।
ಕಾರವನು ಕಾಣುವುದದು ಶಿವಾ ।
ಚಾರವಾ ಶಿವಧರ್ಮಕೈತಂದೆಡರನಡಗಿಸುವಾ । ॥ ೧೪ ॥

ಧೀರವೃತ್ತಿಯೊಳಿರ್ಪುದೆ ಗಣಾ ।
ಚಾರವಾಶಿವಭಕ್ತಜನರುಪ ।
ಚಾರದೊಳು ಕಿರಿತನವು ಭೃತ್ಯಾಚಾರವೆನಿಸುವುದು ॥
ವೀರಶೈವದೊಳಿಂತಿವೈದಾ ।
ಚಾರದೊಳು ನೈತಿಕಬಲವು ವ್ಯೆ ।
ದೋರಿಯಷ್ಟಾವರಣಕೃತ್ಯವ ಸಫಲಗೊಳಿಸುವುದು ॥ ೧೫॥

ಒರೆವೆನಾಷಟ್‌ಸ್ಥಲಗಳೊಳಗಾ ।
ಚರಿಸುವೈದಾಚಾರವಿವುಗಳ ।
ಪರಿಯ ಗುರುಕೃಪೆಯಿಂದೆ ಪಡೆದಾಚಾರಲಿಂಗವನು ॥
ಹರಿಸದಿಂ ಶ್ರದ್ಧೆಯೊಳು ಧರಿಸಿದ ।
ಕರವನೊಡ್ಡುತೆ ಜೇಡೆನೆಂಬುದೆ ।
ಪರಮ ಭಕ್ತಸ್ಥಲದ ಲಿಂಗಾಚಾರವೆನಿಸುವುದು ॥ ೧೬ ॥

ಧರಿಸಿ ಗುರುಲಿಂಗವನು ಕಕ್ಷೆಯೊ ।
ಳಿರುತೆ ನಿಷ್ಠೆಯೊಳಿಂದ್ರಿಯದ ಸುಖ ।
ಕೆರಗದಿರೆ ಮಾಹೇಶಲಿಂಗಾಚಾರವೆನಿಸುವುದು ॥
ಪರಮ ಶಿವಲಿಂಗವನು ಧರಿಸಿ ।
ರ್ದುರದೆ ಪರವನಿತೆಯರನಪ್ಪದ ।
ಪರಿಯೊಳೆಚ್ಚರವದು ಪ್ರಸಾದಿಯ ಲಿಂಗದಾಚರಣೆ ॥ ೧೭ ॥

ಶಿರದೊಳನುಭವಭಕ್ತಿಯಿಂದಂ ।
ಧರಿಸಿ ಚರಲಿಂಗವನು ಭವಿಗಳಿ ।
ಗೆರಗದಿರುವುದೆ ಪ್ರಾಣಲಿಂಗಿಯ ಲಿಂಗದಾಚರಣೆ ॥
ಧರಿಸಿ ಮುಖದೊಳು ಶೇಷಲಿಂಗವ ।
ನಿರುತೆ ಲಿಂಗಾನಂದಭಕ್ತಿಯೊ ।
ಳೊರೆಯದಿರೆ ಹುಸಿನುಡಿಯ ಲಿಂಗದ ನಡತೆ ಶರಣಂಗೇ ॥ ೧೮ ॥

ಸಮರಸದೊಳಿನ್ನಾ ಮಹಾಲಿಂ ।
ಗಮನಿರಿಸುತಮಳೈಕ್ಯದೊಳು ತಾಂ ।
ಮಮತೆಯಳಿಯುವುದೈಕ್ಯನಿಗೆ ತಲ್ಲಿಂಗದಾಚರಣೆ ॥
ಕ್ರಮದೊಳಿಂತಾರುಸ್ಥಲಂಗಳೊ ।
ಳಮಳಷಡ್ವಿಧಲಿಂಗದಾಚಾ ।
ರಮನರಿತು ಶ್ರದ್ಧಾದಿಭಕ್ತಿಗಳಿಂದೆ ನಡೆಸುವುದು ॥ ೧೯॥

ಸತ್ಯ ಶುದ್ಧದ ಕಾಯಕವನೆಸ ।
ಗುತ್ತೆ ಪಡೆದ ಸುವಸ್ತುಗಳ ತಾ ।
ನಿತ್ತು ಶ್ರದ್ಧಾಭಕ್ತಿಯಿಂ ಗುರುಲಿಂಗಜಂಗಮಕೇ ॥
ಭೃತ್ಯಭಾವದೊಳವರ ಸತ್ಕೃಪೆ ।
ವೆತ್ತು ಸುಖದಿಂದಿರ್ಪ ತಿಳಿನಡೆ ।
ಯುತ್ತಮದ ಭಕ್ತನ ಸದಾಚಾರಮದೆನಿಸುತಿಹುದು ॥ ೨೦ ॥

ಪರರ ಹಿಂಸಾದಿಗಳನೆಸಗದೆ ।
ಪರರ ಧನವನಿತಾದಿಗೆಳಸದೆ ।
ಕರಸರೋಜದ ಲಿಂಗಮಂ ಬಿಟ್ಟಿತರದೈವಕ್ಕೇ ॥
ಎರಗದೆಯೆ ಲಿಂಗಾಂಗಯೋಗದ ।
ಪರಮ ಸುಖದಿಂದಿರ್ಪ ನಿಷ್ಠಾ ।
ಪರತೆ ಮಾಹೇಶ್ವರ ಸದಾಚಾರಮದೆನಿಸುತಿಹುದು ॥ ೨೧ ॥

ತಿಳಿವೊಡಿಷ್ಟವ್ರಾಣಭಾವಂ ।
ಗಳ ಪೆಸರ ಲಿಂಗತ್ರಯಕ್ಕೈ ।
ಸಲೆ ಸಮರ್ಪಿಸಿ ರೂಪರುಚಿತೃಪ್ತಿಗಳ ಪರಿವಿಡಿಯಿಂ ॥
ಬಳಿಕೆ ಶುದ್ಧಾದಿ ತ್ರಿವಿಧತೆಯ ।
ತಳೆದ ತತ್ಪರಮುಪ್ರಸಾದವ ।
ಕೊಳುತಿರಲು ತಾನಾ ಪ್ರಸಾದಿಸದಾಚರಣಮುಕ್ಕುಂ ॥ ೨೨॥

ಕರಸರೋಜದ ಲಿಂಗವೇ ಹೃ ।
ತ್ಸರಸಿಜದ ಪೀಠದೊಳು ಬೆಳಗು ।
ತ್ತಿರಲು ತಲ್ಲಿಂಗಾನುಭವದೊಳೆ ತಾನಿರುತೆ ನಿರುತಂ ॥
ಅರಿದು ಸುಖದುಃಖಗಳ ಸಮತೆಯ ।
ಸರಿಯೆನಿಸೆ ಸಿರಿ ಬಡತನಂಗಳ ।
ಪರಿವೊಡಿನ್ನಾ ಪ್ರಾಣಲಿಂಗಿ ಸದಾಚರಣವಿದು ತಾಂ ॥ ೨೩ ॥

ತಿಳಿವೊಡಾಚಾರಾದಿ ಲಿಂಗ ।
ಸ್ಥಲಕೆ ಪಂಚೇಂದ್ರಿಯವು ಮೇಣ್ ಹೃ ।
ತ್ತಲವು ಷಣ್ಮುಖವಾಗಿರಲು ಗಂಧಾದಿಗಳನಲ್ಲಿ ॥
ನಲೆ ಸಮರ್ಪಿಸಿ ಲಿಂಗಪತಿಯೊಡ ।
ನಲಘುತರದಾನಂದಮಂ ತಾಂ ।
ಗಳಿಸುತಿರ್ಪುದೆ ಶರಣನ ಸದಾಚಾರವೆನಿಸುವುದು ॥ ೨೪ ॥

ತೀವೆ ಹೃದ್ಗತಲಿಂಗಕಳೆ ನಿಜ ।
ಭಾವದೊಳು ತದ್ಭಾವಲಿಂಗದೊ ।
ಳಾವಗಂ ಸಮರಸದ ಭಕ್ತಿಯೊಳೊಂದುಗೂಡುವುದೇ ॥
ಭಾವಿಸಲ್ಕೈಕ್ಯನ ಸದಾಚಾ ।
ರಾವಲಂಬನವದು ತಿಳಿಯಿರೈ ।
ಕೋವಿದರೆ ನೀವೆಂದು ಯೋಗಿಯು ಪೇಳುತಂ ಬಳಿಕೇ ॥ ೨೫॥

ಗುದದೊಳೆಸೆವಾಧಾರಚಕ್ರದೆ ।
ಮುದದೊಳಿರ್ಪಾಚಾರಲಿಂಗಕೆ ।
ವದನವೆಸಿಸಿದ ನಾಶಿಕೇಂದ್ರಿಯಕಖಿಳ ಗಂಧವನು ॥
ಪದುಳದಿಂ ತಾಂ ಕೊಟ್ಟು ಕೊಳ್ವುದು ।
ಸದಮಲದ ಗಂಧಪ್ರಸಾದವ ।
ನಿದು ಶಿವಾಚಾರವು ಸುಭಕ್ತಸ್ಥಲದ ಮಾರ್ಗದೊಳು ॥ ೨೬ ॥

ಅರಿಯೆ ಸ್ವಾದಿಷ್ಠಾನಚಕ್ರದೊ ।
ಳಿರುವ ಗುರುಲಿಂಗಕ್ಕೆ ಜಿಹ್ವೆಯು ।
ವರವದನದೊಳ್ ಸ್ವಾದು ಮೊದಲಾಗಿರ್ಪ ಷಡ್ ರುಚಿಯಾ ॥
ಹರಿಸದಿಂ ತಾನಿತ್ತು ಬಳಿಕಾ ।
ಪರತರದ ಶೇಷವನು ಕೊಳ್ಳುವ ।
ಪರಿಯು ಮಾಹೇಶ್ವರಶಿವಾಚಾರದ ಸುಪದ್ಧತಿಯು ॥ ೨೭॥

ಮೆರೆವ ಮಣಿಪೂರಕದ ಚಕ್ರದೊ ।
ಳಿರುವ ಶಿವಲಿಂಗಕ್ಕೆ ನೇತ್ರದ ।
ವರಮುಖದೊಳರ್ಪಿಸುತೆ ತಾಂ ಶ್ವೇತಾದಿ ರೂಪಗಳಾ ॥
ಮರಳಿ ತದ್ರೂಪಪ್ರಸಾದವ ।
ಪರಮ ಮುದದಿಂ ಕೊಂಡು ಸುಖಿಸುವ ।
ಪರಿ ಶಿವಾಚಾರವು ಪ್ರಸಾದಿಸ್ಥಲದ ಸರಣಿಯೊಳು ॥ ೨೮ ॥

ಪದುಳದಿಂದಮನಾಹತದ ಚ ।
ಕ್ರದೊಳು ನೆಲಸಿದ ಜಂಗಮಕೆ ನಂ ।
ಮುದದೆ ತಾಂ ತ್ವಙ್ಮುಖದೆ ಶೀತಾದಿಗಳ ಸೋಂಕುಗಳಾ ॥
ಮೊದಲು ಬಿಡದರ್ಪಿಸುತೆ ಬಳಿಕಾ ।
ಸದಮಲ ಸ್ಪರ್ಶವನು ಸಲೆ ಕೊ ।
ಳ್ವುದೆ ಶಿವಾಚಾರವದು ಪ್ರಾಣಸುಲಿಂಗಿ ಮಾರ್ಗದೊಳು ॥ ೨೯ ॥

ತೊಳಗುತಿರ್ಪ ವಿಶುದ್ಧಿ ಚಕ್ರ ।
ಸ್ಥಲದೊಳಿರ್ಪ ಪ್ರಸಾದ ಲಿಂಗಕೆ ।
ವಿಲಸಿತದ ಕರ್ಣಾನನದೆ ಭೇರೀರವಾದಿಗಳಾ ॥
ಸಲೆ ನಿವೇದಿಸುತಾಬಳಿಕೆ ತಾಂ ।
ನಲಿಯುತಾ ಶಬ್ದ ಪ್ರಸಾದವ ।
ಕೊಳೆ ಶಿವಾಚಾರವಿದು ಶರಣಸ್ಥಲದೊಳೊಪ್ಪುವುದು ॥೩೦॥

ಸದಮಲತರಾಜ್ಞೇಯ ಸಚ್ಚ ।
ಕ್ರದ ಮಹಾಲಿಂಗಕ್ಕೆ ಹೃದಯದ ।
ವದನದೊಳ್ ಗಂಧಾದಿಯಾದ ಪದಾರ್ಥಷಟ್ಕವನು ॥
ಮುದದೊಳರ್ಪಣವೆಸಗಿ ಸೌಖ್ಯಾ ।
ಸ್ಪದವ ತಚ್ಛೇಷವನು ತಾಂ ಕೊ ।
ಳ್ಪುದೆ ಶಿವಾಚಾರವಿದು ಪರಿಕಿಪೊಡೈಕ್ಯಮಾರ್ಗದೊಳು ॥ ೩೧ ॥

ವೀರಶೈವ ಪ್ರಾಣಪಂಚಾ ।
ಚಾರವೆಂದರಿದವುಗಳಮಳಾ ।
ಚಾರಮಂ ಬಿಡದಂತೆ ನಡೆಸಿ ತದಾಚರಣೆಗಿನ್ನು ॥
ಬೇರೆಯವರಿಂದಿನಿತು ವಿಘ್ನವು ।
ತೋರಲದ ಪರಿಹರಿಸಿಕೊಳ್ಳುವ ।
ಧೀರವೃತ್ತಿಯು ತಾಂ ಗಣಾಚಾರವಿದು ಭಕ್ತನೊಳು ॥ ೩೨ ॥

ಅಕ್ಷಿಮೂರುಳ್ಳೀಶ್ವರಂ ಪ್ರ ।
ತ್ಯಕ್ಷ ಗುರುರೂಪದೊಳು ನನ್ನಗೆ ।
ದೀಕ್ಷೆಶಿಕ್ಷೆಸುಮೋಕ್ಷಗಳ ಸುಖವಿತ್ತನೆಂದರಿದು ॥
ಅಕ್ಷ ಯಾತ್ಮಗೆ ಗುರುವಿಗಿರ್ಪ ನಿ ।
ರಕ್ಷರರ ನರನೆಂಬ ನಿಂದಾ ।
ಪಕ್ಷಮಂ ಖಂಡಿಪ ಗಣಾಚಾರವು ಮಹೇಶಂಗೇ ॥ ೩೩ ॥

ಹಸ್ತಗತ ಲಿಂಗದೊಳು ನಮ್ಮಯ ।
ಮಸ್ತಕದ ಶಿವಚಿತ್ಕಳೆಯನು ಪ್ರ ।
ಶಸ್ತತರ ಗುರು ತಂದಿರಿಸಿದನು ಕೃಪೆಯೊಳೆಂದರಿದು ॥
ನಾಸ್ತಿಕರು ಶಿಲೆಯೆಂದು ತತ್ಪರ ।
ವಸ್ತುವನು ನಿಂದಿಪುದ ಖಂಡಿಸು ।
ವಾಸ್ತಿಕತೆಯೆ ಪ್ರಸಾದಿಯ ಗಣಾಚಾರವೆನಿಸುವುದು ॥ ೩೪ ॥

ಶಿವನು ಚರರೂಪದೊಳು ಭಕ್ತರ ।
ಶಿವನುಭಕ್ತಿ ಪರೀಕ್ಷೆಯೆಸಗ ।
ಲ್ಕವತರಿಸಿ ಪಡೆದಿರೆ ಸ್ವಯಂ ಚರ ಪರ ಸುಸಂಜ್ಞೆಯನು ॥
ಭವಿ ಜನರು ತಜ್ಜಂಗಮವ ಮಾ ।
ನವನೆನುತೆ ಜರಿಯುವುದ ಪರಿಹರಿ ।
ಸುವ ನಡತೆ ತಾಂ ಪ್ರಾಣಲಿಂಗಿ ಗಣಾಚರಣೆಯಕ್ಕುಂ ॥೩೫॥

ಶುದ್ಧಮೆಂದುಂ ಸಿದ್ಧಮೆಂದು ಪ್ರ ।
ಸಿದ್ಧಮೆಂದೀ ತೆರದೆ ಮೂಬಗೆ ।
ಯಿದ್ದ ಗುರುವರಲಿಂಗಜಂಗಮ ಸುಪ್ರಸಾದದೊಳು ॥
ಶುದ್ಧರಲ್ಲದರೆಂಜಲೆಂಬ ಕು ।
ಬುದ್ಧಿಯನು ಬಯಲಾಗಿಸುವ ಸ ।
ದ್ಬುದ್ಧಿವರ್ತನೆ ತಾಂ ಗಣಾಚಾರವದು ಶರಣಂಗೇ ॥ ೩೬ ॥

ಗುರುವಿನೊಳಗಾಚಾರವಾಗುರು ।
ವೆರೆವ ಲಿಂಗದೆ ಲಿಂಗವಾಚರ ।
ವರನೊಳಾಚರಮೂರ್ತಿ ಶೇಷದೊಳಾಸುಶೇಷವು ಮೇಣ್ ॥
ಪರಮಭಕ್ತನೊಳೈಕ್ಯಮೆಂಬುದ ।
ನರಿಯದೆಯೆ ನರರೆಂಬ ಭಕ್ತರ ।
ಜರಿವುದಂ ಜಯಿಸುವುದದೈಕ್ಯಗಣಾಚರಣೆಯಕ್ಕುಂ ॥ ೩೭ ॥

ಮುಕ್ತಿಧವ ಗುರುಲಿಂಗಜಂಗಮ ।
ಭಕ್ತರೆನಗಿಂ ಹಿರಿಯರೆಂಬೀ ।
ಸೂಕ್ತಿಯನು ನೆರೆನಂಬಿ ಮನೆಗೈತಂದ ಭಕ್ತರನು ॥
ಶಕ್ತಿಮಿಗೆ ಸತ್ಕರಿಸಿ ತನ್ನೊಳ್ ।
ವ್ಯಕ್ತಮಾಗಿಸೆ ಕಿಂಕರತೆಯನು ।
ಭಕ್ತನಿರದಾಚರಿಪ ಭೃತ್ಯಾಚಾರವೆನಿಸುವುದು ॥ ೩೮ ॥

ಗುರುವರನು ತಾಂ ಬಂದು ಶಿಷ್ಯನ ।
ಪರಿಯ ಪರಿಕಿಪೆನೆಂದು ಪುಸಿಯಿಂ ।
ಧರಿಸಿ ಮುಳಿಸನು ಜರಿದೊಡಂ ತತ್ಪಾದಧೂಳಿಯನು ॥
ಶಿರದೆ ತಳೆಯುತೆ ತಪ್ಪು ಕಂಡೊಡೆ ।
ಕರುಣದಿಂ ಕ್ಷಮಿಸೆಂದು ಬೇಡುವ ।
ಕಿರಿತನವೆ ಮಾಹೇಶ ಭೃತ್ಯಾಚಾರ ವೆನಿಸುವುದು ॥ ೩೯॥

ಕರಮನೋಭಾವಂಗಳೊಳು ತುಂ ।
ಬಿರುವ ಲಿಂಗಜ್ಯೋತಿಯೊಳು ತಾಂ ।
ಬೆರೆದು ನಿರುತಂ ದುಡಿಯುತಂ ನಿಜಲಿಂಗದಾಣತಿಯಿಂ ॥
ದೊರೆದುದನೆ ಹಿರಿದೆಂದು ತೃಪ್ತಿಯ ।
ಧರಿಸಿ ಲಿಂಗಸುಕಿಂಕರತೆಯಿಂ ।
ದಿರೆ ಪ್ರಸಾದಿ ಸ್ಥಲದ ಭೃತ್ಯಾಚಾರವೆನಿಸುವುದು ॥ ೪೦ ॥

ಜಂಗಮನು ಬರೆ ಮನೆಗೆ ಮಾಡುವ ।
ಲಿಂಗಪೂಜೆಯ ಬಿಟ್ಟು ತನ್ನಯ ।
ಲಿಂಗಮುಖಜಂಗಮನ ಪಾದಾರ್ಚನೆಯನೆಸಗುತ್ತೇ ॥
ಸಂಗ್ರಹಿಸಿ ತದ್ವಾಂಛಿತ ಪದಾ ।
ರ್ಥಂಗಳನು ಕೊಟ್ಟಾತನಿಗೆ ಕೃಪೆ ।
ಯಂ ಗಳಿಸುವುದೆ ಪ್ರಾಣಲಿಂಗಿಯ ಕಿಂಕರಾಚರಣೇ ॥ ೪೧ ॥

ಅಂಗವನು ಗುರುವರಗೆ ಮನವನು ।
ಲಿಂಗಮೂರ್ತಿಗೆ ಮತ್ತಮಾತ್ಮವ ।
ಜಂಗಮಕೆ ಬಿಡದಿತ್ತು ತನ್ಮೂರ್ತಿತ್ರಯದೆ ಪಡೆದಾ ॥
ಮಂಗಳಾಕರದ ಪ್ರಸಾದವ ।
ತಾಂ ಗಳಿಸುತದರಿಂದೆ ನಲಿಯುವ ।
ಪಾಂಗೆ ಶರಣಸ್ಥಲದ ಭೃತ್ಯಾಚಾರವೆನಿಸುವುದು ॥ ೪೨ ॥

ಅಂಗವಾರನು ಲಿಂಗವಾರರ ।
ಸಂಗದಿಂ ಸ್ಥಿರಗೊಳಿಸಿ ಪಡೆದಿ ।
ರ್ಪಂಗಲಿಂಗಸುಯೋಗಸುಖಸಾಮ್ರಾಜ್ಯದೊಳಗಿರ್ಪಾ ॥
ತುಂಗತರನಾದ್ವೈಕ್ಯನ ಪದಾ ।
ಬ್ಜಂಗಳಾ ಮಧುವೀಂಟಲೆಳಸುವ ।
ಭೃಂಗಭಾವಮದೈಕ್ಯನಾ ಭೃತ್ಯಾಚರಣೆಯಕ್ಕುಂ ॥ ೪೩ ॥

ಆದಿ ಶಿವಲಿಂಗದೊಳು ಭೂತದ ।
ಯಾದಿ ಗುಣಮಿರೆ ಲಿಂಗಭಕ್ತರೆ ।
ಆದ ನಮ್ಮೊಳು ತದ್ಗುಣವನೊಡಮೂಡಿಸುವ ಕತದೇ ॥
ಆ ದಯಾಮಯ ಧರ್ಮಕಾಶ್ರಯ ।
ವಾದ ಮತದವರಾದ ನಮ್ಮಸು ।
ವಾದವೈದಾಚಾರಗಳು ದಿಟವಿದನು ನಂಬುವುದು ॥ ೪೪ ॥

ಎಂದು ಭಕ್ತಾನ್ವಿತ ಶಿವಾರ್ಯಂ ।
ಗೊಂದಿದೊಲವಿಂ ಬೋಧಿಸಲು ಯೋ ।
ಗೀಂದುವೆಲ್ಲರು ಪರಮ ಮೋದಾಬ್ಧಿಯೊಳಗೀಸಾಡಿ ॥
ಬಂದು ತದ್ಗುರುಪಾದಪದ್ಮಕೆ ।
ವಂದಿಸುತೆ ಶುಭದಾರತಿಯ ಗೈ ।
ದಂದಿನ ಶ್ರವಣವನು ಮುಗಿಸಿದರಧಿಕಭಕ್ತಿಯೊಳು ॥ ೪೫ ॥

**॥ ಮುಗಿದುದು ॥ ಒಟ್ಟು ಪದಗಳು ॥ ೫೨೫ ॥**



|| ಓಂ ಅಷ್ಟಾವರಣವಿವೇಕಪ್ರದಾಯನಮಃ ।

## ಹದಿಮೂರನೆಯ ಸಂಧಿ

**ಸೂಚನೆ:—** ವೀರಶೈವರ ದೇಹವೆನಿಸಿದ ।
ಸಾರತರದಷ್ಟಾವರಣಸುವಿ ।
ಚಾರಮಂ ವಿವರಿಸಿದನಾ ಶಿವಯೋಗಿ ಸರ್ವರಿಗೇ ||

ಮರುವಗಲು ತದ್ವಿರತಿ ಮೂರ್ತಿಯ ।
ನಿರುಪಮದ ಲಿಂಗಾರ್ಚನೆಯು ಮುಗಿ ।
ದಿರಲು ತಾನಾ ಮಹಿಮನಿಂ ತೀರ್ಥಪ್ರಸಾದವನು ||
ಹರಿಸದಿಂ ಕೊಂಡಖಿಳ ಭಕ್ತ ।
ರ್ವೆರಸಿ ಗುರುವು ಶಿವಾರ್ಯನಷ್ಟಾ ।
ವರಣತತ್ವವ ಬೋಧಿಸುವುದೆಂದೆರೆಯಲಾಬಳಿಕೇ || ೧ ||

ಸ್ತುತ್ಯಯೋಗಿಯು ತನ್ನ ಕರುಣಾ ।
ಯತ್ತ ದೃಷ್ಟಿಯ ಚಂದ್ರಿಕೆಯು ಕಳೆ ।
ಯುತ್ತಿರಲು ಸರ್ವರ ಮನೋಮಾಲಿನ್ಯತಿಮಿರವನು ||
ಭೃತ್ಯಭಾವದೊಳವರು ಸಲೆ ತ ।
ನ್ನತ್ತಲಲುಗದ ದಿಟ್ಟಿಯಿಂ ನೋ ।
ಡುತ್ತಿರಲು ಬಿತ್ತರಿಸಿದನು ನಗೆಮೊಗದೊಳೀತೆರದೇ || ೨ ||

ಅಕುಟಿಲಾತ್ಮರೆ ನಮ್ಮ ಮತದೊಳ್ ।
ಪ್ರಕಟವಾದಷ್ಟಾವರಣಗಳ ।
ಸಕಲಸಾರವನರಿವುಪಾಯವನೊರೆವೆನೆಂತೆನಲು ||
ನಿಖಿಲದೇಶದೊಳೊಪ್ಪುತಿಹ ಧಾ ।
ರ್ಮಿಕ ಮತಂಗಳ ನೋಡೆ ವೈಯ ।
ಕ್ತಿಕವು ಸಾಮಾಜಿಕಮುಮೆಂದಿತ್ತೆರದೆ ಕಾಣುವವು || ೩ ||

ವ್ಯಕ್ತಿಗಾವುದು ತನ್ನ ಬುದ್ಧಿಗೆ ।
ಯುಕ್ತಮದನೊಂದುವುದು ತಾಂ ವೈ
ಯಕ್ತಿಕದ ಮತಮಿಂತಿಹವು ಯೋಗಾದಿಮತಗಳವು ||
ವ್ಯಕ್ತಿಗಿರೆ ಗುಣಸತ್ಕ್ರಿಯೆಗಳಿಂ ।
ಯುಕ್ತವಾದಧಿಕಾರವಾವೈ ।
ಯಕ್ತಿಕದ ಮತಮಾರ್ಗವಿಡಿಯಲು ಸಾಧ್ಯವೆನಿಸುವುದು || ೪ ||

ಅರಿಯೆ ಗುರುಶಿಷ್ಯರಿಗೆ ಬೇಕಾ ।
ಗಿರುವ ಗುಣಕರ್ಮವನು ವ್ಯಕ್ತಿಯೊ ।
ಳಿರಸುವುದೆ ವೈಯಕ್ತಿಕದ ಮತಕಿರುವ ಲಕ್ಷಣವು ॥
ಪರಿಕಿಸಲು ಸಾಮಾಜಿಕದ ಮತ ।
ಕಿರುವ ಗುರುಶಿಷ್ಯರನು ತಿಳಿಯುವ ।
ಪರಿಯೆ ಬೇರೆನಿಸುವುದು ಕೇಳಿರಿ ವಿವರಿಸುವೆನಿನ್ನು ॥ ೫ ॥

ಪರಿಕಿಸುತೆ ಮೊದಲಲ್ಲಿ ಮತಕ್ಕೆ ।
ತರುವ ವ್ಯಕ್ತಿಗೆ ಶಿಷ್ಯನಾಗ ।
ಲ್ಕರುಹಮೆನಿಸಿದ ಗುಣಸುಕರ್ಮವ ಮುಂದೆ ತತ್ಕುಲಕಂ ॥
ಬರುವವಾಸುಗುಣಕ್ರಿಯೆಗಳಿಂ ।
ದರಿದು ಗುರುಗಳು ನಿಯತಕಾಲದೆ ।
ವಿರಚಿಪರು ದೀಕ್ಷಾದಿಗಳ ತತ್ಕುಲಜರೆಲ್ಲರಿಗೇ ॥ ೬ ॥

ಇಂತು ವಂಶವು ದೀಕ್ಷೆಗರ್ಹತೆ ।
ಯಾಂತಿರಲು ದೀಕ್ಷಾದಿ ಕಾರ್ಯಕೆ ।
ಸಂತತಂ ಧರ್ಮಾಧಿಕಾರಿಗಳಿರಲೆಬೇಕಾಯ್ತು ॥
ಇಂತು ತದ್ಧರ್ಮಾಧಿಕಾರವ ।
ನಾಂತು ನಮ್ಮಯ ಮತದ ಕೃತಿಯ ನಿ ।
ರಂತರವು ಗುರುಜಂಗಮರ್ಕಳು ನಡೆಸುತಿಹರಲ್ತೇ ॥ ೭ ॥

ಕಾರಣಾಂತರದಿಂದೆ ವಂಶದೆ ।
ತೋರುತಿಹ ದೋಷದೊಳು ಮತದಾ ।
ಚಾರದವನತಿಯಾಗಗೊಡದಿರಲಾವರಣವೆಂಟು ॥
ವೀರಶೈವದೊಳುಂಟಿದರ ಸುವಿ ।
ಚಾರಪಥವಿಂತಿರ್ಪುದರಿಯಿರಿ ।
ವೀರಶೈವೇತರ ಸಮಾಜದೊಳಿಲ್ಲವೀಕ್ರಮವು ॥ ೮ ॥

ಶಿವನೆ ಗುರುರೂಪದೊಳು ಮತಬೋ ।
ಧವನೆಸಗಿ ಮೋಕ್ಷ ಲಿಂಗರೂಪದೆ ।
ನವವಿಧದ ಭಕ್ತಿಯೊಳು ಗೈವರ್ಚನೆಗಳನು ಕೊಂಡು ॥
ವಿವಿಧ ಶಿಷ್ಯರೊಳಿರ್ಪ ಕೊರತೆಯ ।
ತವೆ ಪರೀಕ್ಷಿಸಿ ಕಳೆಯೆ ಚರರೂ ।
ಪವನು ತಳೆದಿಹನೆಂದಿರುವ ಮತಧರ್ಮವನು ನಂಬಿ ॥ ೯ ॥

ಹರನ ಮೈವೆಳಗೆನಿಪ ಭಸಿತವ ।
ಧರಿಸಿ ತಳೆದು ಶಿವಾಕ್ಷಿಗಳ ಮೇಣ್ ।
ಪರಶಿವನ ನಾಮದ ಸುಮಂತ್ರದ ಜಪವ ಕೈಕೊಂಡು ॥
ಪರಮ ಗುರು ಶಿವಲಿಂಗ ಜಂಗಮ ।
ಕಿರದೆ ಪೂಜಾದಿಗಳನೆಸಗುತೆ ।
ಹರುಷದಿಂ ಪಡೆಯುವುದು ತತ್ತೀರ್ಥ ಪ್ರಸಾದಗಳಾ ॥ ೧೦ ॥

ಅರಿಯೆ ಗುರುಚರಲಿಂಗಗಳು ಸ ।
ರ್ವರಿಗುಪಾಸ್ಯಗಳಕ್ಕುಮಿನ್ನಾ ।
ಪರಮ ಮೂರ್ತಿತ್ರಯದ ವರತೀರ್ಥ ಪ್ರಸಾದಗಳು ॥
ದೊರೆವ ತದುಪಾಸನೆಯ ಫಲಗಳು ।
ವರ ಭಸಿತ ರುದ್ರಾಕ್ಷಿ ಮನುಗಳು ।
ನಿರುತಮೆಸಗುವುಪಾಸನೆಗೆ ಸಾಧನಗಳೆನಿಸುವವು ॥ ೧೧ ॥

ವಿರಶೈವಸಮಾಜಧರ್ಮದ ।
ಸಾರವಾದಷ್ಟಾವರಣಸುವಿ ।
ಚಾರವಿದನರಿದಾಚರಿಸಿ ಷಟ್‌ಸ್ಥಲದ ಮಾರ್ಗದೊಳು ॥
ನಾರುತಿರೆ ಲಿಂಗಾಂಗಯೋಗದ ।
ಭೂರಿ ಸುಖವೊದಗುವುದು ನಿಮಗೀ ।
ಸಾರತರದಷ್ಟಾವರಣವೇ ಅಂಗವಾಗಿರಲಿ ॥ ೧೨ ॥

ಶಾಂತಚಿತ್ತದೊಳಾಲಿಸಿರಿ ಬಹಿ ।
ರಂತರಸ್ಥಿತಮಾಗುತಿಬ್ಬಗೆ ।
ಯಿಂ ತದಷ್ಟಾವರಣಗಳು ಕಂಗೊಳಿಪವವುಗಳೊಳು ॥
ಸಂತತಂ ಬಹಿರಾವಣಗಳ ।
ನಾಂತು ತಾನಾಚರಿಸಲವುಗಳೆ ।
ಅಂತರಷ್ಟಾವರಣರೂಪದೆ ಪರಿಣಮಿಸುತಿಹವು ॥ ೧೩ ॥

ಗುರುವೆನಿಜದರಿವಾಗಿ ಲಿಂಗವ ।
ದರಿವಿನನುಭವವಾಗಿ ತಚ್ಚರ ।
ವರನೆ ಪಡೆದನುಭವದೊಳೊಗೆದಾನಂದವಾಗುತ್ತೇ ॥
ಸ್ಫುರಿಸೆ ನಮ್ಮೊಳಗೆಮ್ಮ ತೇಜವೆ ।
ವರ ಭಸಿತಮಕ್ಷಿಯೆ ಶಿವಾಕ್ಷಿಯು ।
ಪರಮತನುವಿದು ಮಂತ್ರಮಯುವೆನಿಸಿರ್ಪವಾಬಳಿಕೇ ॥ ೧೪ ॥

ತವೆ ನೆಲಸುವವು ನಮ್ಮೊಳಿನ್ನಾ ।
ಶಿವದಯಾಮೃತವೆಂಬ ತೀರ್ಥವು ।
ಶಿವನನುಗ್ರಹರೂಪಮೆನಿಸಿದ ಸತ್ಪ್ರಸಾದವದು ॥
ಇವುಗಳೊಳಗಿರ್ಪಾವರಣವಿ ।
ನ್ನಿವುಗಳನು ನಮಗೊದಗಿಸಲು ಸಂ ।
ಭವಿಸಿದವು ಬಹಿರಾವರಣಗಳು ನೀವರಿಯಿರಿದನು ॥ ೧೫ ॥

ಆವರಣಗಳ ಸತ್ಕ್ರಿಯೆಯ ಪರಿ ।
ಭಾವಿಸಲ್ಕಿಬ್ಬಗೆಯುಮುದರೊಳ್ ।
ತೀವಿರುವುದದು ಸಹಜಸಂಬಂಧಸ್ವರೂಪದೊಳು ॥
ಕೋವಿದರೆ ಗುರುಚರರು ಸರ್ವರಿ ।
ಗಾವಗಂ ದೊರೆಯದ ನಿಮಿತ್ತದೊ ।
ಳೀ ವಿಧದೊಳೆರಡೆನಿಸಿತಾಚರಣೆಯಿದು ಸಮುಚಿತವು ॥ ೧೬ ॥

ಪರಶಿವನೆ ಗುರಲಿಂಗಜಂಗಮ ।
ಪರಮರೂಪವ ಧರಿಸಿ ತಾನವ ।
ತರಿಸುತಾ ವರವೀರಶೈವರುಪಾಸ್ಯನೆನಿಸಿದನು ॥
ಹಿರಿದು ಕಿರಿದೆಂಬುದನು ಭಕ್ತರು ।
ತೊರೆಯುತಾ ಮೂರ್ತಿತ್ರಯವನನ ।
ವರತನುತಿಭಕ್ತಿಯೊಳುಪಾಸಿಸುವುದು ವಿಧಿಯುನಮಗೇ ॥ ೧೭ ॥

ಲಿಂಗದೊಳು ಗುರುಚರರ ಗುರುವೊಳ್ ।
ಲಿಂಗಜಂಗಮಯುಗದ ಮೇಣಾ ।
ಜಂಗಮದೆ ಗುರುಲಿಂಗಗಳ ಸಂಬಂಧಮನವರತಂ ॥
ಹಿಂಗದಿರುವುದರಿಂದೆ ತದ್ಗುರು ।
ಜಂಗಮೋಪಾಸನೆಯು ನಮ್ಮಯ ।
ಲಿಂಗಮೂರ್ತಿಯುಪಾಸನೆಯೊಳೇ ಸಿದ್ಧಿಸುವುದೆಮಗೇ ॥ ೧೮ ॥

ಗುರುವು ಮನೆಗೈತರಲು ತದ್ಗುರು ।
ವರನುಪಾಸನೆಯಲ್ಲಿಯೇ ನಲೆ ।
ಬೆರೆದಿರುವುದಾ ಲಿಂಗಜಂಗಮಯುಗದುಪಾಸನೆಯು ॥
ಚರವರನು ಕೃಪೆಯಿಂದೆ ಬರೆ ತ ।
ಚ್ಚರಣಕಮಲೋಪಾಸನೆಯೊಳೇ ।
ಪರಮ ಗುರುಲಿಂಗದ್ವಯೋಪಾಸನೆಯು ತಳ್ತಿಹುದು ॥ ೧೯ ॥

ಇದೆ ಸುಸಂಬಂಧಾಚರಣೆ ಯಿ।
ನ್ನಿದನುಳಿಯೆ ಮೂರ್ತಿತ್ರಯಾರ್ಚನೆ।
ಯದು ಘಟಿಸದೆಮ್ಮಯ ಸಮಾಜದ ಸರ್ವರಿಗೆ ನಿರುತಂ॥
ವಿದಿತವಾದುದೆ? ಸಹಜದ ಕ್ರಿಯೆ।
ಯದು ಸದಾಪ್ರತ್ಯೇಕ ಮೂರ್ತಿಯ।
ಮುದದೆ ತಪ್ಪದುಪಾಸನೆಯ ಗೈಯುವುದೆ ಆಗಿಹುದು ॥೨೦॥

ಗಣಿಸೆ ಗುರುಶಿಷ್ಯರ್ಕಳುಭಯರು।
ಜನಕಸುತರೆನಿಸಿರ್ಪರವರಾ।
ಮನೆಗೆ ಜಂಗಮನತಿಥಿರೂಪದೆ ಬರುವಕತದಿಂದೇ॥
ವಿನಯದಿಂ ತತ್ಪಾದಪದ್ಮಾ।
ರ್ಚನೆಯ ಗೈಯುತ್ತವರು ಕೊಳ್ಳುದು।
ಘನ ಸುಮೋದದೊಳಾತನಿಂ ತೀರ್ಥ ಪ್ರಸಾದವನು ॥೨೧॥

ಗುರುವು ದೀಕ್ಷಾಮೂರ್ತಿ ಲಿಂಗವು।
ದರಿಯೆ ಪೂಜಾಮೂರ್ತಿ ಜಂಗಮ।
ವರನು ಭೋಗಸುಮೂರ್ತಿ ತಾನಾಗಿರುವನದರಿಂದೆ॥
ಹರಿಸದಿಂ ತದ್ಭೋಗಮೂರ್ತಿಯ।
ಚರಣವಾರಿಯ ಮೇಣ್ ಪ್ರಸಾದವ।
ನಿರದೆ ಕೊಳ್ಳುದು ಗುರುಚರರು ಕೂಡಿರ್ದ ನೆಲೆಗಳೊಳು ॥೨೨॥

ಜಂಗಮನೆ ಷಟ್‌ಸ್ಥಲದ ಮಾರ್ಗದೆ।
ಲಿಂಗಮುಖವಾಗಿರ್ಪುದದರಿಂ।
ಜಂಗಮಸುಭೋಗೋಪಭೋಗವೆ ವೀರಶೈವರ್ಗ್ಗೇ॥
ಲಿಂಗಭೋಗಮದೆನಿಪ ಕತದಿಂ।
ಜಂಗಮೋಪಾಸನೆಗೆ ಮುಖ್ಯತೆ।
ಸಂಗತಮುದಾಯ್ತರಿಯೆ ಮೂರ್ತಿತ್ರಯದುಪಾಸನೆಯೊಳ್ ॥೨೩॥

ಗುರುಚರರೊಳೀರ್ವರೊಳು ಪರಿಕಿಸೆ।
ತರತಮದ ಭಾವಮದು ಮಾಳ್ಪಾ।
ಚರಣೆಯೊಳಗಣಮಿಲ್ಲ ತತ್ತೀರ್ಥಪ್ರಸಾದವನು॥
ಹರಿಸದಿಂ ಕೊಡುವಲ್ಲಿ ತೋರುವ।
ಗುರುಚರತ್ವವು ತಾವು ಕೊಳ್ಳವ।
ಸರದೊಳಿನ್ನಿಲ್ಲವರೊಳಿರ್ಪುದು ಭಕ್ತಭಾವವೆ ತಾಂ ॥೨೪॥

ಗುಟ್ಟನಿದನರಿದಿರುವ ತದ್ಗುರು ।
ಪಟ್ಟದವರೊಳು ಜಂಗಮರೊಳಂ ।
ಹುಟ್ಟದಾವುದು ಭೇದಮಿನ್ನವರುಗಳಿಗೇರ್ಪಟ್ಟಾ ॥
ಬಟ್ಟೆಗಳ ಧರ್ಮಕ್ರಿಯೆಯ ಮನ ।
ಮುಟ್ಟಿ ಮಾಡಿ ಸಮಾಜದೇಳ್ಗೆಯೊ ।
ಳಿಟ್ಟ ದಿಟ್ಟಿಯೊಳಿರ್ಪರ್ಕೈ ನಿಜಗುರುಚರತ್ವಮಿದೇ ॥ ೨೫ ॥

ಒರೆದೆನಷ್ಟಾವರಣಗಳೊಳಾ ।
ಚರಣೆಯಿಂತಿರ್ಪುದನು ಮತ್ತಾ ।
ನೊರೆವೆನವುಗಳೊಳಿರ್ಪ ಹಿರಿಮೆಯನಾಲಿಸಿರಿ ನೀವು ॥
ಗುರುಪದವನೊಂದಿದ ಶಿವಾರ್ಯನೆ ।
ನೆರೆ ತಿಳಿಯಲಷ್ಟಾವರಣದೊಳ ।
ದಿರುಳ ಭಕ್ತರ ಪೊರೆವ ಕಜ್ಜವು ಸುಗಮವದು ನಿನಗೇ ॥ ೨೬ ॥

ಗುರುವು ದೀಕ್ಷೆಗೆ ಶಿಕ್ಷೆಗಂ ತ ।
ತ್ಪರಮು ಮೋಕ್ಷಕೆ ತಾನೆ ಕಾರಣ ।
ಪುರುಷನಾತನಿಗಧಿಕರಿಲ್ಲವು ಹರನು ಮುನಿದಿರಲು ॥
ಗುರುವೆ ಕಾಯುವನವನು ಮುನಿದೊಡೆ ।
ಪರರು ಕಾಯುವರಿಲ್ಲಮೆಂಬುದ ।
ನರಿದು ಸರ್ವರು ಪಡೆಯುವುದು ಗುರುಭಕ್ತಿಯನು ಬಿಡದೇ ॥ ೨೭ ॥

ಗುರುವಿನಪ್ಪಣೆಯಂತೆ ತಾನೈ ।
ತರುತೆ ಶೂಲವನೇರಿ ಸುಖದಿಂ ।
ದಿರನೆ ? ಗುರುಭಕ್ತಾಖ್ಯಶಿಷ್ಯಪ್ರಮುಖನದರಿಂದೇ ॥
ಧರೆಯೊಳಾ ಗುರುಭಕ್ತಿಮಹಿಮೆಗೆ ।
ಸರಿಯೆನಿಪುದಿನ್ನಾವುದಿಲ್ಲದ ।
ನರಿದು ನಿರುತಂ ಗುರುಪದದ ಸೇವೆಯನು ಗೈಯುವುದು ॥ ೨೮ ॥

ಗುರುವು ದೀಕ್ಷಾವಿಧಿಯೊಳುರೆ ಸಂ ।
ಸ್ಕರಿಸಿ ಕರತಲಕಿತ್ತ ಲಿಂಗದೊ ।
ಳಿರಿಸಿದನು ಶಿವಚಿತ್ಕಳೆಯನೆಮ್ಮಧಿಕಪುಣ್ಯದೊಳು ॥
ದೊರೆದುದೆಮ್ಮಿಷ್ಟಾರ್ಥವೀಯುವ ।
ಸುರತರುವಿದೆಂದರಿದು ನಾವದ ।
ಧರಿಸಿದೆವು ತಲ್ಲಿಂಗಮಂ ನಂಬಿದೊಡೆ ಫಲಮಿಲ್ಲೇಂ ॥ ೨೯ ॥

ಪರಿಕಿಪೊಡೆ ಕುರಿಯಿಕ್ಕೆ ಬಳ್ಳವು ।
ತರುಣಿಯ ಸ್ತನವಾದಿಯಾಮುವ ।
ನಿರದೆ ಲಿಂಗಮುದೆಂದು ನಂಬಿದ ಭಕ್ತರಿಗೆ ಫಲವು ||
ದೊರೆದುದೆನೆ ಗುರುಕೃಪೆಯ ಕಡಲೊಳು ।
ಕರಕೆ ಲಭಿಸಿರ್ಪಿಷ್ಟಲಿಂಗ ।
ಸ್ಫುರಿತ ಚಿಂತಾಮಣಿಯ ನಂಬಿದವರ್ಗೆ ಸರಿಗಾಣೇಂ ||೩೦||

ಇಷ್ಟಲಿಂಗದ ಮುಖವೆನಿಸಿದು ।
ತೃಷ್ಟ ಜಂಗಮನಾಂತ ತಣಿವಿಂ ।
ಸೃಷ್ಟಿಗೊಡೆಯುಗೆ ಶಿವಗೆ ತಣಿವಾ ತಣಿವಿನಿಂದವನಾ ||
ಹೊಟ್ಟೆಯೊಳಗಿರ್ದಖಿಳ ಲೋಕಕೆ ।
ಪುಟ್ಟುವುದು ತೃಪ್ತಿಯದು ಭಕ್ತಿಯ ।
ನಿಟ್ಟು ತಚ್ಚರವರರ ಸೇವಿಸೆ ಹುಟ್ಟಡಗದಿಹುದೇಂ ||೩೧||

ಚರಸುವೇಷದೆ ಶಿವನು ತಾನೈ ।
ತರುತೆ ಭಕ್ತನು ಮಾನಕಂಜರ ।
ನುರು ಮುದದೆ ತನುಜಾತೆಗೆಸಗುವ ಪರಿಣಯದೊಳವಳಾ ||
ಸಿರಿಮುಡಿಯ ತಾಂ ಬೇಡಲದ ಕ ।
ತ್ತರಿಸಿ ಕೊಟ್ಟನು ತಂದೆಯೆಂಬುದ ।
ನರಿಯೆ ಭಕ್ತಿಪರೀಕ್ಷೆಗಾಗಮಿಸುವನು ಜಂಗಮನು ||೩೨||

ಎಂದರಿದು ಭಕ್ತರ್ಕಳಿನ್ನೈ ।
ತಂದ ಜಂಗಮಮೂರ್ತಿಯೆಳಸಿದು ।
ದೊಂದನುಳಿಯದೆ ಕೊಟ್ಟು ತತ್ಪದಸೇವೆಗೆಳಸಿರಲು ||
ಎಂದಿಗಂ ತಚ್ಚರಸುಭಕ್ತರ ।
ನೊಂದಿರುವವಾ ಭೋಗಮೋಕ್ಷಗ ।
ಳೆಂದೊರೆವರನುಭವಿಗಳಾತನ ಮಹಿಮೆಯೇಂ ಘನವೋ ||೩೩||

ಪರಮ ಗುರು ವರಲಿಂಗ ಜಂಗಮ ।
ಚರಣತೀರ್ಥವು ನಮ್ಮೆದೆಯೊಳಾ ।
ವರಿಸೆ ವಿನಯ ದಯಾದಿ ರಸರೂಪದೊಳು ಪರಿಣಮಿಸಿ ||
ಧರೆಯ ಜೀವಾವಳಿಗೆ ಲೇಸನೆ ।
ಹರಿಸದಿಂ ಬಯಸುತ್ತೆ ನೆರವನು ।
ವಿರಚಿಸುವ ಭಕ್ತಿಯ ಸುಶಕ್ತಿಯ ಮೂಡಿಸುವುದೆಮಗೇ ||೩೪||

ಅರಿಯದಂತಿರೆ ಬಂದು ಮನೆಯೊಳ ।
ಗಿರಿಸಿ ಹೊನ್ನನು ಪೋದ ಬಸವನ ।
ಪರಿಯನರಿಯುತೆ ಚೆಲ್ಲಿ ಹೊನ್ನನು ಹೊರಗೆ ಜಂಗಮನಾ ॥
ಚರಣತೀರ್ಥವ ಸುರಿದು ಕಟ್ಟಿಗೆ ।
ಹೊರೆಯ ಹೊನ್ನಾಗಿಸಿದನಾ ಚರ ।
ಪರನು ಮೋಳಿಗೆಮಾರನಿದು ತತ್ತೀರ್ಥದುರು ಮಹಿಮೇ ॥ ೩೫ ॥

ಭೋಗದೊಡಲೊಳೆ ಶಿವಸುಖಮನಿರ ।
ದಾಗಿಸುತೆ ಗುರುಲಿಂಗಜಂಗನು ।
ಭೋಗದುಪಭೋಗಪ್ರಸಾದವು ವೀರಶೈವರೊಳು ॥
ಆಗುಹೋಗುಗಳಳಲನೆಲ್ಲವ ।
ನೀಗಿ ಜೀವನ್ಮುಕ್ತರನೆ ತಾ ।
ನಾಗಿಸುವುದಿನ್ನೇನೊರೆವೆನದರ ಪ್ರಭಾವವನು ॥ ೩೬ ॥

ಬಬ್ಬಿಬಾಚರಸನು ಸುಭಕ್ತಿಯೊ ।
ಳುಬ್ಬಿ ಜಂಗಮದ ಪ್ರಸಾದವ ।
ಹಬ್ಬಿದೊಲವಿಂ ಕೊಳ್ಳದನು ದೂಷಿಸುವರಾಲಯದೇ ॥
ಹಬ್ಬಿದುರಿಯನು ಕಂಡು ಗರ್ವದ ।
ಮಬ್ಬನುಳಿದು ಕ್ಷಮೆಯ ಪಡೆದರು ।
ತಬ್ಬಿಕೊಂಡಾ ಭಕ್ತನಿಂ ನಿಂದಕರು ಜಗವರಿಯೇ ॥ ೩೭ ॥

ಇಂತು ತಾನಿನ್ನೆಂತೊ ಮಹಿಮೆಯ ।
ನಾಂತ ತತ್ಪರಮ ಪ್ರಸಾದವ ।
ನೆಂತು ಬಣ್ಣಿಸೆ ಕಿರಿದೆನಿಪುದಿದರಂತೆ ಭೂತಿಯು ತಾಂ ॥
ಕಂತುಹರಪರಶಿವನ ದೇಹದ ।
ಕಾಂತಿಯೆನಿಸುವುದದನು ಧರಿಸುವು ।
ದೆಂತೊ ಪುಣ್ಯವು ತತ್ಪ್ರಭಾವವನೊರೆವೆನಾಲಿಸಿರಿ ॥ ೩೮ ॥

ಬಸವರಾಜನು ಕಳುಹಿಕೊಟ್ಟಾ ।
ಭಸಿತವನು ಧರಿಸಿರ್ದ ಮಹಿಮೆಯಿ ।
ನಸಮ ಭಕ್ತಿಯ ಪಂಡಿತಾರಾಧ್ಯನಿಗೆ ಸಿದ್ಧಿಸಲು ॥
ಮಿಸುಪ ಕನ್ನಡಭಾಷೆಯದರ ।
ಲ್ಲಿಸೆವ ಬಸವೇಶ್ವರ ವಚನಗಳ ।
ನೊಸೆದು ಪಠಿಸುತೆ ಧನ್ಯತೆಯನಾರಾಧ್ಯನೊಂದಿದನು ॥ ೩೯ ॥

ಮೂರು ಪೊಳಲನು ಸಂಹರಿಸುವಾ ।
ಮಾರವೈರಿಯ ನೇತ್ರಸಂಭವ ।
ವಾರಿಬಿಂದುವಿನೊಗೆದವೆಂಬ ಪ್ರಸಿದ್ಧಿಯನು ಪಡೆದಾ ॥
ಸಾರತರ ರುದ್ರಾಕ್ಷಿಗಳ ನಲೆ ।
ವೀರಶೈವರು ಧರಿಸಿ ರುದ್ರಾ ।
ಕಾರಮಂ ಪಡೆದರ್ಚಿಸುವುದು ನಿಜೇಷ್ಟಲಿಂಗವನು ॥ ೪೦ ॥

ಹೊತ್ತ ರುದ್ರಾಕ್ಷಿಗಳ ಭಾರದೆ ।
ನತ್ತ ವರ್ತಕತುರಗಮಂ ಶಿವ ।
ಭೃತ್ಯರೊಯ್ದರು ರಜತಗಿರಿಗೆನೆ ಸಕ್ರಮದೆ ನಲವಿಂ ॥
ನಿತ್ಯಮುಂ ರುದ್ರಾಕ್ಷಿಗಳ ಧರಿ ।
ಸುತ್ತಿರುವ ಶಿವಭಕ್ತಕುಲಕಿ ।
ನೆತ್ತಣದು ಯಮನವರ ಭಯವು ಶಿವಾಕ್ಷಿ ಮಹಿಮೆಯಿದು ॥ ೪೧ ॥

ಭುವನಗತವಾಗಿರ್ಪ ಮಂತ್ರದ ।
ನಿವಹವೆಲ್ಲವು ಸಂಜನಿಪುದಕೆ ।
ತವರೆನಿಪ ವಿಖ್ಯಾತಿಯನು ತವೆ ಪಡೆದು ಶೋಭಿಸುವಾ ॥
ಶಿವಷಡಕ್ಷರ ಮಂತ್ರವನು ಜಪಿ ।
ಸುವುದರಿಂ ವರವೀರಶೈವರು ।
ಶಿವಮಯರೆ ತಾವಾಗುವುದು ದಿಟವೆಂದು ನಂಬುವುದು ॥ ೪೨ ॥

ಶಿವಮನನ ಸತ್ಯೇಂದ್ರಚೋಳನ ।
ಕುವರನಾದಾ ಮಂತ್ರಲಕ್ಷನು ।
ಶಿವಮನುವ ಜಪಿಸುತ್ತೆ ಖಡ್ಗದೆ ಕಡಿದುಕೊಳೆ ಶಿರವಾ ॥
ಭುವಿಗುರುಳುತದು ಮಂತ್ರವನು ಪಠಿ ।
ಸುವುದನುಳಿಯದೆ ತನ್ಮಹಿಮೆಯನು ।
ಭುವನದೊಳು ಬಿತ್ತರಿಸಿದಾಕಥೆ ನಿಮಗೆ ತಿಳಿಯದುದೇಂ ॥ ೪೩ ॥

ಎಂದು ಶಿವಯೋಗೀಶ್ವರನು ಮುದ ।
ದಿಂದಮಿಂತೊರೆಯುತ್ತೆ ಭಕ್ತರ ।
ವೃಂದಕಷ್ಟಾವರಣಮಹಿಮಾನ್ವಿತ ಸುತತ್ವವನು ॥
ಮುಂದುಸುರ್ವುದ ನಿಲಿಸುತಂ ತಾ ।
ನಂದು ನಿಜಲಿಂಗಾರ್ಚನಾದಿಗ ।
ಳಿಂದ ಜನಿಪಾನಂದವನುಭವಿಸಲ್ಕೆ ತೊಡಗಿದನು ॥ ೪೪ ॥

**॥ ಮುಗಿದುದು ॥ ಒಟ್ಟು ಪದಗಳು ॥ ೫೭೯ ॥**

|| ಓಂ ಷಟ್‌ಸ್ಥಲತತ್ತ್ವೋಪದೇಶಕಾಯನಮಃ ||

# ಹದಿನಾಲ್ಕನೆಯ ಸಂಧಿ

---

**ಸೂಚನೆ:—** ವೀರಶೈವದ ಷಟ್‌ಸ್ಥಲಾನ್ವಿತ |
ಸಾರಸಿದ್ಧಾಂತವನೊರೆದನಾ |
ವೀರಶೈವಾಂಭೋಧಿಚಂದ್ರನು ಯೋಗಿ ಸರ್ವರಿಗೇ ||

ಗತದಿನದ ಮಾಳ್ಕೆಯೊಳು ಲಿಂಗ |
ವ್ರತಿಯು ಮುಗಿಸೆ ಶಿವಾರ್ಚನಾದಿಯ |
ನತಿಕುತೂಹಲರಾಗಿ ಭಕ್ತರು ನೆರೆಯೆ ಮಠದಲ್ಲಿ ||
ನುತಗುಣನು ಶಿವಗುರುವು ಸಲೆ ನಮಿ |
ಸುತೆ ಫಲಾಹಾರೇಶ್ವರಂಗೆ |
ಮ್ಮತುಳ ಪುಣ್ಯದ ನಿಧಿಯೆ ಷಟ್‌ಸ್ಥಲತತ್ವವನು ಕೃಪೆಯಿಂ || ೧ ||

ತಿಳಿಸುವುದು ನಮಗೀ ದಿನದೊಳೆಂ |
ದಲಘು ಭಕ್ತಿಯೊಳ್ಬೆದೆ ಬೇಡಿದ |
ಬಳಿಕೆ ಷಟ್‌ಸ್ಥಲಮೂರ್ತಿಯಾದಾ ಯೋಗಿಪುಂಗವನು ||
ಬೆಳಗೆ ಸುಲಿಪಲ್ ನಗೆಯ ಪೂಗಳ |
ತಳೆದ ಮೊಗದಿಂದಿಂತುಸುರ್ದನು |
ಚಲನರಹಿತ ಸ್ವಾಂತದಿಂ ಕೇಳುತಿರೆ ನೆರೆದವರು || ೨ ||

ಆಗಮದೆ ಷಟ್‌ಸ್ಥಲವ ವಿವರಿಸು |
ವಾಗಳೆಲ್ಲೆಡೆಗಳೊಳು ನೋಡೆ ಪ್ರ |
ಯೋಗವಿರ್ಪುದು ಶಿವನಿಗಾ ಸ್ಥಲವೆಂಬ ನಾಮದೊಳೇ ||
ಆ ಗಿರೀಶಂ ಸರ್ವಲೋಕಗ |
ಳಾಗುಹೋಗುಗಳಾಶ್ರಯಸ್ಥಲ |
ವಾಗಿರುವ ಕತದಿಂ ಸ್ಥಲಾಭಿಧನಾಗಿ ಬೆಳಗುವನು || ೩ ||

ಸುವಿಮಳರೆ ಮತ್ತಾ ಸ್ಥಲಾಖ್ಯದ |
ಶಿವನೆ ತಾಂ ಲಿಂಗಾಂಗವೆಂಬ |
ದ್ವಿವಿಧ ರೂಪವ ಧರಿಸಿದಂ ಸ್ವವಿಮರ್ಶಶಕ್ತಿಯೊಳು ||
ಶಿವನು ಭಕ್ತೋದ್ಧಾರಕೇಭೇ |
ದವನು ಧರಿಸಿದನೆಂದೊರೆವರನು |
ಭವಿಗಳಾತನ ಪೂಜ್ಯಪೂಜಕಭಾವಲೀಲೆಯಿದು || ೪ ||

ಶಿವನು ಲೀಲೆಯೊಳಿಂತೆರಡು ರೂ ।
ಪವ ಧರಿಸೆ ಚಿಚ್ಛಕ್ತಿಯುಂ ತಾಂ ।
ದ್ವಿವಿಧವಾದುದು ಶಕ್ತಿಭಕ್ತಿಸುನಾಮಗಳ ತಳೆದು ॥
ಸುವಿಮಳದ ಲಿಂಗಾಂಗಗಳು ಮೇಣ್ ।
ತ್ರಿವಿಧತೆಯುಮಂ ಷಡ್ವಿಧತೆಯಾಂ ।
ತವು ಕ್ರಮದೊಳಾ ಪೂಜ್ಯಪೂಜಕಭಾವವಮಂ ಪಡೆದು ॥ ೫ ॥

ಅಂಗನೆನೆ ಶಿವದೀಕ್ಷೆಯಿಂ ಶು ।
ದ್ಧಾಂಗನೆನಿಸಿದ ಜೀವನಾತನು ।
ಲಿಂಗವನು ಮೂರೊಡಲೊಳಿಂದ್ರಿಯಮಾನಸಂಗಳೊಳಂ ॥
ಸಾಂಗವಿಧಿಯಿಂ ಪೂಜಿಸುತೆ ತ ।
ಲ್ಲಿಂಗಮಯನಾಗುವುದನೆಳಸಲು ।
ಲಿಂಗವದು ಮೂರಾಗಿ ಮೇಣಾರಾಗಿ ಬೆಳಗುವುದು ॥ ೬ ॥

ಅಂಗನಮಳಿನ ದೃಙ್ಮನೋಭಾ ।
ವಂಗಳಿಂ ತಾಂ ಗ್ರಹಿಪವೋಲ್ ತ ।
ಲ್ಲಿಂಗಮಿಷ್ಟ ಪ್ರಾಣ ಭಾವ ಸುನಾಮದಿಂ ಬೆಳಗೇ ॥
ಅಂಗನುಂ ತ್ಯಾಗಾಂಗನುಂ ಭೋ ।
ಗಾಂಗನುಂ ಯೋಗಾಂಗನೆನಿಸುತೆ ।
ಮಂಗಳದ ಮೂರೊಡಲೊಳಾ ಲಿಂಗಗಳ ಧರಿಸಿಹನು ॥ ೭ ॥

ಪರಿವಿಡಿಯೊಳಾಚಾರಲಿಂಗವು ।
ಗುರುವೆಸರೊಳಂ ಶಿವವೆಸರಿನೊಳ ।
ಮಿರುವೆರಡು ಲಿಂಗಗಳು ಜಂಗಮಲಿಂಗವಾಬಳಿಕೇ ॥
ನೆರೆ ಪ್ರಸಾದ ಮಹಾಸುನಾಮದೊ ।
ಳಿರುವಲಿಂಗಗಳಿಂತುಟಾರಾ ।
ಗಿರುವವಿನ್ನಾ ಮೊದಲಮೂರರೊಳೊಂದಕೆರಡಾಗಿ ॥ ೮ ॥

ಕಾಣಲಿಂತಿದ ತಾನು ಭಕ್ತಂ ।
ಮೇಣು ಮಾಹೇಶಂ ಪ್ರಸಾದಿಯು ।
ಪ್ರಾಣಲಿಂಗಿಯು ಶರಣನೈಕ್ಯನೆನಿಪ್ಪ ನಾಮದೊಳು ॥
ಜ್ಞಾನಮಯದೈದಿಂದ್ರಿಯದ ಸು ।
ಸ್ಥಾನದೊಳ್ ಹೃದಯಾಂತರದೊಳಂ ।
ಸಾನುರಾಗದೊಳಂಗನಾ ಲಿಂಗಗಳ ಧರಿಸಿಹನು ॥ ೯ ॥

ಕಾಣಿಸುವುದಾರಾಗಿ ಲಿಂಗದ ।
ನೂನ ಚಿಚ್ಛಕ್ತಿಯದು ಕ್ರಿಯೆಯುಂ ।
ಜ್ಞಾನಮಿಚ್ಛೆಯುಮಾದಿ ಪರೆ ಚಿತ್ತೆಂಬ ಪೆಸರಿನೊಳು ॥
ಭೂನುತದ ಶಕ್ತಿಯಿದೆ ಮತ್ತಂ ।
ತಾನೆ ಷಡ್ವಿಧದವುಳಿನಾಂಗ ।
ಸ್ಥಾನದೊಳು ಸದ್ಭಕ್ತಿನಾಮುವನಾಂತು ಬೆಳಗುವುದು ॥ ೧೦ ॥

ಕ್ರಮದೆ ಶ್ರದ್ಧೆಯು ನಿಷ್ಠೆಯವಧಾ ।
ನಮದು ಮೋಹಾನಂದಮನುಭವ ।
ಮಮಿತದಾ ಸಮರಸಮೆನಿಪ ಪೆಸರಿಂದೆ ಭಕ್ತಿಯದು ॥
ವಿಮಳತರದ ಷಡಂಗಗಳನಾ ।
ಕ್ರಮಿಸಿ ಲಿಂಗಾಂಗಗಳೊಳೈಕ್ಯವು ।
ಸಮನಿಸುವುದಕೆ ಕಾರಣವು ತಾನಾಗಿರುವುದಲ್ತೇ ॥ ೧೧ ॥

ಅಂಗ ಲಿಂಗಗಳಂತೆ ಷಡ್ಭೇ ।
ಧಂಗಳಾಗುತೆ ಭಕ್ತಿಶಕ್ತಿಗ ।
ಳಂಗ ಲಿಂಗಗಳಲ್ಲಿ ಕ್ರಮದಿಂದಿರ್ಪವೀತೆರದೇ ॥
ಅಂಗ ಲಿಂಗಗಳಾಂತಿರುವ ಭೇ ।
ದಂಗಳನೆ ಷಟ್ ಸ್ಥಲಗಳೆಂಬರು ।
ಲಿಂಗತತ್ವವಿಶಾರದರು ತಿಳಿಯುವುದುನೀವಿದನು ॥ ೧೨ ॥

ವಿಳಸದಂಗವು ಲಿಂಗಮುಂ ನಿ ।
ರ್ಮಳದ ಭಕ್ತಿಯು ಶಕ್ತಿ ಮುಖಮುಂ ।
ತಿಳಿಯೆ ಹಸ್ತವು ಮೋಹ್ ಪದಾರ್ಥವು ಸುಪ್ರಸಾದವದುಂ ॥
ನೆಲಸಿರುವವೆಂಟವುಗಳಾ ಷಟ್ ।
ಸ್ಥಲದೊಳೊಂದೊಂದರೊಳಮಿದ ಗುರು ।
ತಿಲಕನಾ ದೀಕ್ಷಿತನಿಗೈಸಲೆ ಬೋಧಿಸುವನಲ್ತೇ ॥ ೧೩ ॥

ಸಾರತರದೀ ಷಟ್ ಸ್ಥಲಗಳಾ ।
ಚಾರಮಂ ದೃಢಪಡಿಸುವುದಕಿ ।
ನ್ನಾರು ಲಿಂಗಾಂಗಸ್ಥಲಗಳೊಳಭೇದಮಂ ಪಡೆದು ॥
ನೂರು ಮೇಲೊಂದಾಗಿ ಮಹಿತ ವಿ ।
ಚಾರದಿಂ ಕಂಗೊಳಿಪವವುಗಳ ।
ಸಾರವರಿಯಲು ತೊಡಕನೀಯದು ತಾಂ ಸ್ಥಲಾಚರಣೇ ॥ ೧೪ ॥

ಅರಿಯೆ ಮೊದಲೊಂದಾಗಿ ಬಳಿಕಿ ।
ನ್ನೆರಡು ಮೂರಾರಾಗುತದರೊಳು ।
ಧರಿಸಿ ಮೇಣ್ ಪದಿನೆಂಟು ಮೂವತ್ತಾರು ಭೇದಗಳಾ ॥
ಮೆರೆವನಾಸ್ಥಲವಾಚ್ಯ ಶಿವನೇ ।
ಪರಮ ಭಕ್ತೋದ್ಧಾರಕೆಂಬುದ ।
ನರಿದುಕೊಳ್ವುದು ಷಟ್ ಸ್ಥಲದ ಸಿದ್ಧಾಂತಸಾರವನು ॥ ೧೫ ॥

ಅನುಭವವು ಬೆಳೆದಂತೆ ನಿಮ್ಮಗೆ ।
ಘನತರದ ಷಟ್ ಸ್ಥಲದ ಭೇದಗ ।
ಳನಿತು ತಿಳಿಯುವವಿನ್ನು ನಾನೀ ಸ್ಥಲದ ಮಾರ್ಗದೊಳು ॥
ದಿನದಿನದ ಭೋಗವನು ಮೇಣ್ ಸ್ಥಲ ।
ದನುಗುಣದ ಲಕ್ಷಣವನೊರೆಯುತೆ ।
ಜನನಿಯಾದಾ ಭಕ್ತಿದೇವಿಯ ಮಹಿಮೆಯುಸುರುವೆನು ॥ ೧೬ ॥

ಧರೆಯು ಜಲಮುಂ ವಹ್ನಿ ವಾಯುವು ।
ಸುರಪಥಂ ಮೇಣಾತ್ಮನೆಂಬಿವು ।
ಪರಿವಿಡಿಯೊಳಾ ಭಕ್ತಮುಖ್ಯಸ್ಥಲಗಳಂಗಗಳು ॥
ಮೆರೆವ ಘ್ರಾಣಂ ಜಿಹ್ವೆ ನೇತ್ರಮು ।
ದರಿವೊಡಿನ್ನಾ ತ್ವಕ್ಕು ಕರ್ಣವು ।
ವರ ಹೃದಯಮೆಂಬಿವು ಮುಖಗಳಾ ಷಟ್ ಸ್ಥಲಂಗಳಿಗೇ ॥ ೧೭ ॥

ಸಲೆ ಸುಚಿತ್ತವು ಮೇಣ್ ಸುಬುದ್ಧಿಯು ।
ಬಳಿಕೆ ನಿರಹಂಕೃತಿಯು ಸುಮನವು ।
ತಿಳಿಯೆ ಸುಜ್ಞಾನವು ಸುಭಾವಮಿವಾರು ಹಸ್ತಗಳು ॥
ವಿಲಸಿತದ ಭಕ್ತಾದಿಯಾದ ।
ಸ್ಥಲಗಳಿಗೆ ಪರಿವಿಡಿಯೊಳೊಂದುತೆ ।
ಬೆಳಗುವವು ತಾವರ್ಪಣದ ಕೃತಿಗಳಿಗೆ ನೆರವಾಗಿ ॥ ೧೮ ॥

ಪಲವು ಬಗೆಯಿಂ ತೋರುತಿರ್ದೊಡ ।
ಮಿಳಿಯ ಭೋಗ್ಯಸುವಸ್ತುಗಳ ಸಂ ।
ಕುಲಮದನು ಷಟ್ ಸ್ಥಲಸುತತ್ವವಿಶಾರದರು ತಾವು ॥
ಸಲೆ ಸುಗಂಧವು ರಸವು ರೂಪವು ।
ಬಳಿಕೆ ಸಂಸ್ಪರ್ಶನವು ಶಬ್ದವು ।
ತಿಳಿಯೆ ತೃಪ್ತಿಯುಮೆಂದು ಷಡ್ವಿಧವಾಗಿ ಪೇಳುವರು ॥ ೧೯ ॥

ಆರು ತನುವೊಳ್ ನಿಂದು ತಳೆದಿ ।
ರ್ಪಾರುವಿಧ ಭಕ್ತಿಯೊಳು ತಾವಿ ।
ನ್ನಾರು ಬಗೆಯ ಪದಾರ್ಥವನು ಷಟ್‌ಸ್ಥಲಗಳೊಳು ಕ್ರಮದೇ ॥
ಆರು ಶಕ್ತಿಯನೊಂದಿ ಕಂಗೊಳಿ ।
ಪಾರು ಲಿಂಗಕ್ಕಾರು ಮುಖದಿಂ ।
ದಾರು ಹಸ್ತದೆ ಕೊಟ್ಟು ಕೊಳ್ವುದು ತತ್ಪ್ರಸಾದವನು ॥ ೨೦ ॥

ಇಂತು ಷಟ್‌ಸ್ಥಲಮಾರ್ಗದೊಳು ಪೇ ।
ಳ್ದಂತೆ ದಿನದಿನದಲ್ಲಿಯುಂ ಬಿಡ ।
ದಂತೆ ಲಿಂಗಸುಭೋಗದುಪಭೋಗವನು ಪಡೆದಿರಲು ॥
ಶಾಂತಿಮಯ ಶಿವಭಾವವೇ ತ ।
ನ್ನಂತರಂಗವೆ ಮೂಡಿ ಬಲಿಯುತೆ ।
ಕಂತುಹರನೇ ತಾನೆನಿಸುವನು ವೀರಶೈವನು ತಾಂ ॥ ೨೧ ॥

ಗುರುವು ದೀಕ್ಷಾಕಾಲದೊಳು ತನ ।
ಗೊರೆದ ತಿಳಿನಡೆಯಲ್ಲಿ ಶ್ರದ್ಧೆಯ ।
ನಿರಿಸಿ ಸತ್ಕಾಯಕದೆ ದುಡಿದುದು ನನ್ನದೆಂಬುದನು ॥
ತೊರೆಯುತದ ಗುರುಲಿಂಗಜಂಗಮ ।
ಚರಣಕರ್ಪಿಸಿ ತತ್ಪ್ರಸಾದವ ।
ನುರುಮುದದೆ ಕೊಂಡಿರ್ಪುದೇ ಭಕ್ತಸ್ಥಲದ ಕುರುಹು ॥ ೨೨ ॥

ತಿಳಿನಡೆಯೊಳಾಸ್ತಿಕ್ಯಬುದ್ಧಿಯು ।
ಬೆಳಗೆ ಸತ್ಯದಯಾದಿ ಗುಣಗಳ ।
ತಳೆದು ಲಿಂಗಾರ್ಚನೆಯ ನಿತ್ಯವ್ರತದೆ ನಿಷ್ಠೆಯನು ॥
ಬಲಗೊಳಿಸುತಂ ಪರರ ವಸ್ತುವ ।
ನೆಳಸೆನೆಂಬಾ ಛಲದ ವೃತ್ತಿಗೆ ।
ನೆಲೆವನೆಯು ತಾನೆನಿಸೆ ಮಾಹೇಶ್ವರನ ಲಕ್ಷಣವು ॥ ೨೩ ॥

ವಿಷಯಭೋಗವೆ ಹೇಯವೆಂದರಿ ।
ದಸಮ ಲಿಂಗಕ್ಕಿಂದ್ರಿಯಾಸ್ಯದೊ ।
ಳೊನೆದು ತಾಂ ಗಂಧಾದಿ ವಿಷಯವನರ್ಪಿಸುತೆ ಬಳಿಕೇ ॥
ಲಸಿತ ತಲ್ಲಿಂಗಪ್ರಸಾದವು ।
ನೆಸೆವ ತನ್ನವಧಾನ ಭಕ್ತಿಗೆ ।
ವಶನೆನಿಸಿ ಭೋಗಿಸುವುದರಿಯೆ ಪ್ರಸಾದಿ ಲಕ್ಷಣವು ॥ ೨೪ ॥

ಪ್ರಾಣ ಕರಣಾದಿಗಳೊಳನಿಶಂ ।
ನಾನು ನನ್ನದಿದೆಂಬ ಮೋಹವ ।
ತಾನುಳಿದು ಲಿಂಗಮಯಮಖಿಳಮಿದೆನಿಸಿದನುಭವದೇ ॥
ಪ್ರಾಣರೂಪದ ಲಿಂಗದಮಳ ।
ಧ್ಯಾನ ಪೂಜೆಯೊಳಿಟ್ಟ ನಿಶ್ಚಲ ।
ಮಾನಸದೊಳಿರೆ ಪ್ರಾಣಲಿಂಗಿ ಸ್ಥಲದ ಲಕ್ಷಣವು ॥ ೨೫ ॥

ತನ್ನ ತನು ಕರಣಾದಿಗಳೊಳು ।
ತ್ಪನ್ನವಾಗಿರೆ ಲಿಂಗತೇಜವು ।
ದಿನ್ನಖಿಳವಿಷಯಂ ಪ್ರಸಾದದ ರೂಪವಾಂತಿರಲು ॥
ತನ್ನ ನಿಜಲಿಂಗಪ್ರಸಾದದೆ ।
ಜನ್ಯವಾದಾನಂದ ಭಕ್ತಿಯ ।
ಪುಣ್ಯಪದವಿಯೊಳಿರ್ಪುದೇ ಶರಣಸ್ಥಲದ ಕುರುಹು ॥ ೨೬ ॥

ನಾನು ನೀನಿಂತೆಂಬ ಭೇದ ।
ಜ್ಞಾನವಡಗಲಭೇದದೊಳು ಮೇಣ್ ।
ತಾನೆ ಪರತರ ಲಿಂಗಮೆಂಬ ಶಿವಾನುಭಾವದೊಳು ॥
ತಾನಡಗಿ ಸಮರಸದ ಭಕ್ತಿಯ ।
ನೂನದಾನಂದದೊಳು ಬೆರೆದ ವಿ ।
ಧಾನವೇ ಕೊನೆಯೆನಿಸಿದೈಕ್ಯಸ್ಥಲದ ಲಕ್ಷಣವು ॥ ೨೭ ॥

ಇಂತು ಷಟ್‌ಸ್ಥಲದಾಚರಣೆಗಳ ।
ನಾಂತಿರುವ ವರವೀರಶೈವನು ।
ಸಂತತಂ ಗೈವ ಕ್ರಿಯೆಯು ಲಿಂಗಾರ್ಪಿತಮದಾಗೇ ॥
ಶಾಂತಿರೂಪದೊಳಾಕ್ರಿಯೆಯು ವಿ ।
ಶ್ರಾಂತಿಯೊಂದುವುದಾತ್ಮನೊಳಗಿ ।
ನ್ನೆಂತುಮುಂಟದು ತಾಂ ಶುಭಾಶುಭಫಲಮದಾಕೃತಿಗೇ ॥ ೨೮ ॥

ಇದು ಕ್ರಿಯಾವಿಶ್ರಾಂತಿಯೆನಿಸುವು ।
ದಿದುವೆ ಸಮ್ಯಜ್ಞಾನವೆನಿಸುವು ।
ದದು ಶಿವನೆ ನಾನೆಂಬ ತಿಳಿನಡೆಯಾಗಿ ಬೆಳಗುವುದು ॥
ಇದನು ಪೊರ್ದಿದ ವೀರಶೈವನೊ ।
ಳುದಿಸಿದ ಕ್ರಿಯೆ ಲಿಂಗಪೂಜೆಯು ।
ಪೊದಪಿನಿಂ ಭೋಗಿಸುವುದೆಲ್ಲವು ಲಿಂಗಭೋಗವದು ॥ ೨೯ ॥

ಈ ತೆರದ ಷಟ್ ಸ್ಥಲದ ಮೂರ್ತಿಯೆ ।
ಪೂತಶಿವಯೋಗೀಶನೆನಿಸುವ ।
ನಾತನಿಗೆ ತನುವಿಂದೆ ಬಂಧವು ಮೋಚನಮುಮಿಲ್ಲಾ ॥
ಆತನೊಳ್ ಸಮರಸ ಸುಭಕ್ತಿಯ ।
ಸಾತಿಶಯ ಕಳೆಯೊಂದೆ ಮೆರೆವುದು ।
ಭೂತಲದೊಳಿನ್ನಾಪ್ತಕಾಮನೆ ಆಗಿ ಬೆಳಗುವನು ॥ ೩೦ ॥

ಯೋಗಿಭಕ್ತಿಯು ತ್ರಿಗುಣಸಂಗತ ।
ಮಾಗಿ ತೋರಿದೊಡಂ ಶಿವಾರ್ಪಿತ ।
ಮಾಗಿರುವ ಕತದಿಂದೆ ನಿರ್ಗುಣಮಾಗಿ ಬೆಳಗುವುದು ॥
ರಾಗಮುಂ ವೈರಾಗ್ಯಮುಂ ಸಮ ।
ವಾಗಿರುವವಾಭಕ್ತಿಯೊಳಗದು ।
ಭೋಗ ಮೋಕ್ಷಕೆ ಮಿಗಿಲೆನಿಸಿದ್ದೈದನೆಯ ಪುರುಷಾರ್ಥಂ ॥ ೩೧ ॥

ತನ್ನ ಸೋಂಕಿಂ ಸಿದ್ಧರಸಮದು ।
ಪೊನ್ನನಾಗಿಸುವಂತೆ ಸಲೆ ಕಾ ।
ರ್ಬೊನ್ನಮಂ ತಾಮ್ರವನು ಮೇಣ್ ಬೆಳ್ಳಿಯನು ಭಕ್ತಿಯದು ॥
ಇನ್ನು ತಲ್ಲೋಹತ್ರಯಂಗಳ ।
ಬಣ್ಣವಡೆದಾ ತಾಮಸಾದಿ ಗು ।
ಣೋನ್ನತಿಯನಳಿದೀಶರೂಪಮನಾಗಿಸುವುದಲ್ತೇಂ ॥ ೩೨ ॥

ನಾನು ಫಲಗಳ ಕರ್ತೃವೆಂಬಭಿ ।
ಮಾನವೇ ಕರ್ಮಮದು ಮತ್ತಂ ।
ನಾನೆ ಸರ್ವಕೆ ಸಾಕ್ಷಿಯೆಂಬಭಿಮಾನವೇ ಜ್ಞಾನಂ ॥
ನಾನು ಕರ್ತೃವು ಸಾಕ್ಷಿಯೆಂಬಭಿ ।
ಮಾನಶೂನ್ಯತೆಯಿಂದೆ ಶಂಭುವು ।
ತಾನೆ ಕರ್ತೃವು ಸಾಕ್ಷಿಯೆಲ್ಲಕ್ಕೆಂಬುದೇ ಭಕ್ತಿ ॥ ೩೩ ॥

ಅರಿಯೆ ಕರ್ಮ ಜ್ಞಾನ ಭಕ್ತಿಗ ।
ಳಿರುವವಿನ್ನಾ ಶುಕ್ತಿಯಂತಿರೆ ।
ಸರಸಿಜದ ದಳದಂತೆ ಸುಡುವಾ ಕಬ್ಬುನದ ತೆರದೇ ॥
ಪರಿವಿಡಿಯೊಳಾಸಂಸೃತಿಯ ಜಲ ।
ವುರುಳೆ ಮೂರರೊಳವುಗಳಿಗೆ ತಾಂ ।
ದೊರೆಯುವುದು ಸಫಲತೆಯು ನಿಷ್ಫಲತೆಯು ವಿನಾಶಮದುಂ ॥ ೩೪ ॥

ತಿಳಿಯೆ ಕರ್ಮ ಜ್ಞಾನ ಭಕ್ತಿಗ ।
ಳೊಳು ಶುಭಾಶುಭ ಕರ್ಮಫಲಗಳ ।
ನೆಲೆ ಶಿಲಾ ಸ್ಥಲ ವಾರಿಗಳ ಲೇಖದವೊಲಿದೆ ಕ್ರಮದಿಂ ॥
ಶಿಲೆಯ ಲೇಖನಮಳಿಯದಿರ್ಪುದು ।
ನೆಲದ ಲೇಖನಮಳಿವುದಿನ್ನಾ ।
ಜಲದ ಲೇಖದ ಕುರುಹೆ ಕಾಣಿಸದೀಕ್ಷಿಪರ ಕಣ್ಗೇ ॥ ೩೫ ॥

ಪರಿವಿಡಿಯೊಳಾಪಾಪಕರ್ಮದೆ ।
ನರಕಮಿನ್ನಾ ಪುಣ್ಯಕರ್ಮದೆ ।
ಸುರಪದವಿ ಮೇಣ್ ಜ್ಞಾನಕರ್ಮದೆ ಪರಮ ಮೋಕ್ಷವದು ॥
ಪರಿಕಿಸಲ್ಕೆ ಪ್ರಸಾದ ಕರ್ಮದೆ ।
ಹರಸುಭಕ್ತಿಯು ಸಮನಿಸುಗುಮಾ ।
ತೆರದೆ ಕರ್ಮವು ನಾಲ್ಕು ಬಗೆಯಿಂದಿರ್ಕುಮುರ್ವಿಯೊಳು ॥ ೩೬ ॥

ಧರೆಯೊಳೆಂತಾ ಬೀಜದಿಂದಂ ।
ಕುರವು ಮೇಣಂಕುರದೆ ಬೀಜವು ।
ನೆರೆ ಸಮನಿಸುವವೀತೆರದೆ ಶಿವನ ಪ್ರಸಾದದೊಳೇ ॥
ಪರಮ ಭಕ್ತಿಯು ಭಕ್ತಿಯಿಂದಮೆ ।
ಹರನನುಗ್ರಹಮಕ್ಕುಮಿದನಿ ।
ನ್ನರಿಯೆ ಭಕ್ತಿಶ್ರೀಜನನಿಯಾ ಮಹಿಮೆಯನುಪಮವು ॥ ೩೭ ॥

ಭಕ್ತಿಯೇ ಷಟ್ಸ್ಥಲದ ಮೂಲವು ।
ಭಕ್ತಿಯೇ ತತ್ಫಲವು ನಮ್ಮೊಳು ।
ಭಕ್ತಿಯೊಂದಿರೆ ಕರದ ಬಿಲ್ವಂ ಷಟ್ಸ್ಥಲಾಚರಣೆ ॥
ಭಕ್ತಮುಖ್ಯರೆ ನಿಮ್ಮಯಾತ್ಮದ ।
ಶಕ್ತಿಯೇ ತದ್ಭಕ್ತಿಯಲ್ಲವೆ? ।
ಮುಕ್ತಿ ಕನ್ಯೆಯ ಪಡೆಯಳೇನಾಭಕ್ತಿವರಜನನೀ ॥ ೩೮ ॥

ಇಂತು ಷಟ್ಸ್ಥಲ ತತ್ವವನು ನಿಗ ।
ಮಾಂತಸನ್ನುತ ಯೋಗಿ ಪೇಳಿದ ।
ನಂತರದೊಳಾಮಹಿಮನಂಘ್ರಿಗೆ ನಮಿಸಿ ನೆರೆದವರು ॥
ಸಂತಸದೆ ಮಂಗಳವ ಮಾಡುತೆ ।
ತಾಂ ತೆರಳಲಾ ಬಳಿಕೆ ತತ್ಪರ ।
ಶಾಂತಮೂರ್ತಿಯು ತೊಡಗಿದನು ಪೂಜಾದಿ ಕಾರ್ಯದೊಳು ॥ ೩೯ ॥

**॥ ಮುಗಿದುದು ॥ ಒಟ್ಟು ಪದಗಳು ॥೬೦೮॥**

ಓಂ ಮಲಾಪಹಾರಿಣೀತರಣಕಂಬಲಪ್ಲವಾಯನಮಃ

# ಹದಿನೈದನೆಯ ಸಂಧಿ

---

**ಸೂಚನೆ:—** ಹೊಳೆಯ ದಾಂಟುತೆ ಕಂಬಳಾಸನ ।
ದೊಳು ತೆರಳಿ ಹೊಸಗೇರಿಯಲ್ಲು ।
ಜ್ವಲಿಪ ಸುಣ್ಣದ ಬಟ್ಟೆಯೊಳು ವೈಗರೆದನಾಗುರುವು ॥

ವೀರಶೈವರುಪಾಸ್ಯಮೂರ್ತಿಯ ।
ಮೂರು ಕಣ್ಣೆನಿಸಿರ್ದ ಪಂಚಾ ।
ಚಾರ ಲಸದಷ್ಟಾವರಣ ಷಟ್‌ಸ್ಥಲಗಳನುಭವದಾ ॥
ಬೇರು ಬಿಟ್ಟುದು ಹೃದಯದೊಳು ಕೊ ।
ಣ್ಣೂರ ಮಠದ ಸ್ವಾಮಿಗಭವಾ ।
ಕಾರನಾದ ಫಲಾಶನದ ಯೋಗಿಯ ಸುಬೋಧೆಯೊಳು ॥ ೧ ॥

ಕೆಲದಿನಗಳಲ್ಲಿರ್ದು ಭಕ್ತರ।
ತಿಳಿ ನಡೆಯ ತಿದ್ದುತ್ತೆ ಬಯಸಿದ ।
ಫಲವನೀಯುತ್ತಿರಲು ತದ್ಯೋಗೀಂದ್ರನಾಬಳಿಕೇ ।
ಕಳೆದು ಪೋದುದು ಬೇಸಗೆಯ ಕಡು ।
ಬಳಲಿಕೆಯ ಬಿಸಿಲುರಿಯು ಮೆಲ್ಲನೆ ।
ಸುಳಿಯ ತೊಡಗಿದುವಲ್ಲಿಗಲ್ಲಿಗೆ ಕಾರ್ಮೊಗದ ಮುಗಿಲು ॥ ೨ ॥

ತಳೆದು ಸುರಚಾಪವನು ಮೇಣ್ ಸಲೆ ।
ಹೊಳೆವ ಮಿಂಚಿನ ಖಡ್ಗಮಂ ತಾಂ ।
ಮೊಳಗಿನುರುಗರ್ಜನೆಯನೆಸಗುವ ಮೇಘದಂತಿಯೊಳು ॥
ಕುಳಿತು ಬರುತಿರೆ ಘನಸಮಯನೃಪ ।
ನಿಳೆಯವರು ಕಣ್ದೆರಳಿಸುತೆ ಕಡು ।
ನಲವಿನಿಂ ನೋಡಿದರು ಜೀವನಸುಖವನೀವವನಂ ॥ ೩ ॥

ಪಾರೆ ಬಿಲಗಳಿಗಂಜೆಗಳು ನಲ ।
ವೇರೆ ಜಾದಗೆಯೆದೆಗೆ ಕುಣಿತದೆ ।
ಸೇರೆ ನವಿಲುಗಳೇರಿ ಗಗನಾಂಗಣಕೆ ಕಾರ್ಮುಗಿಲು ॥
ಭೋರಮೆಯು ತಾಂ ಕ್ರೀಡಿಸಲು ಕಾ ।
ಸಾರಮಂ ಗೈದವೊಲು ಧಾರಾ ।
ಕಾರದಿಂ ಮಳೆಗರೆದು ಮುಳುಗಿಸಿತಿಳೆಯ ಜಲದೊಳಗೇ ॥ ೪ ॥

ನಂಬಿ ಮಜ್ಜನ ಪಾನ ಗೈವರ ।
ಬೆಂಬಿಡದ ಪಾಪವನು ತೊಳೆಯುವ ।
ಳೆಂಬ ಬೆಳ್ಳಸವಾಂತು ಮೆರೆವ ಮಲಾಪಹಾರಿಣಿಯು ॥
ತುಂಬಿ ಜನರೆದೆಯಲ್ಲಿ ಸಂಮುದ ।
ಮೆಂಬ ರಸವನು ಮಳೆಯ ನೀರಿಂ ।
ತುಂಬಿ ಹರಿಯಲು ತೊಡಗಿದಳು ಕೊಣ್ಣೂರ ಸನಿಹದೊಳು ॥ ೫ ॥

ತೀರಗತ ತರುಲತೆಗಳಿಂದಂ ।
ಚಾರು ಶೋಭೆಯನಾಂತ ನದಿಯಾ ।
ಪೂರಮಂ ನೋಳ್ಪೊಂದು ವಾಂಛೆಯೊಳಾಮಹಾಯೋಗೀ ॥
ನೇರಿದನು ತತ್ತಟವ ಭಕ್ತೋ ।
ದ್ಧಾರಕನು ಶಿವಗುರುವು ಶಿಷ್ಯರ ।
ಭೂರಿ ನಿವಹದೆ ತಳ್ತು ಬರೆ ದಾರಿಯದು ಕಿರಿದೆನಿಸೇ ॥ ೬ ॥

ತುಂಬಿರುವ ಜೀವನದೊಳುಪಕೃತಿ ।
ಯಂ ಬಿಡದೆ ಜನಕೆಸಗಿ ಕಡೆಯೊಳ ।
ಗಂಬುನಿಧಿರೂಪಾತ್ಮಪತಿಜೀವನದೊಳೊಂದಾಗಿ ॥
ತಾಂ ಬೆರೆದು ಸಮರಸಸುಸೌಖ್ಯದೊ ।
ಳಿಂಬುಗೊಳ್ವುದ ಬೋಧಿಸುವಳು ನಿ ।
ತಂಬಿನಿಯರಿಗೆ ಗೃಹಿಸುಧರ್ಮವನೀನದೀ ಜನನೀ ॥ ೭ ॥

ಪೂತೆಯಲ್ತೇನೀನದೀ ವಿ ।
ಖ್ಯಾತ ಮಾತೆಯು ನಮಗೆ ನಾಂ ನಿ ।
ರ್ಧೂತ ಪಾಪವ್ರಾತೆಯೀಕೆಯ ಬಳಿಯೊಳೊಂದೆಡೆಯಾ ॥
ಪ್ರೀತಿಯಿಂದರಸುತ್ತಮಲ್ಲಿಯೆ ।
ಸಾತಿಶಯಸುಖದಿಂದಿರುವೆನೆಂ ।
ದಾ ತಪೋನಿಧಿ ನುಡಿಯೆ ಶಿವಗುರುವಿಂತು ಬೇಡಿದನು ॥ ೮ ॥

ಇನ್ನು ಕೆಲದಿನವಿರ್ದು ಜನ್ಮಕೆ ।
ಧನ್ಯತೆಯ ನೀಡಯ್ಯ ಮೇಘು ।
ಚ್ಛನ್ನ ಕಾಲದೆ ಪಯಣಗೈಯುವುದೇಕೆ ದಿನದಿನಕೇ ॥
ಇನ್ನು ತುಂಬುತಲಿರ್ಪ ನದಿಯಿಂ ।
ನಿನ್ನ ದಾಂಟಿಸಲೆಂತು ಸಾಧ್ಯವು ।
ಪನ್ನತನೆ ಮನ್ನಿಸುವುದೆನ್ನಯ ಬಿನ್ನಪವನೆನಲು ॥ ೯ ॥

ಸಿರಿಯ ಶ್ರೈಲದ ಮಲ್ಲಿಕಾರ್ಜುನ ।
ಗುರುವಿನಪ್ಪಣೆಯಾದುದಾನಿ ।
ಸ್ನಿರೆನು ಕರೆದೊಯ್ಯುವಳು ಮಾತೆ ಮಲಾಪಹಾರಿಣಿಯು ॥
ತೆರಳಲಡ್ಡಿಯನಾಗಿಸದಿರೆಂ ।
ದೊರೆಯುತೋರ್ವ್ವನ ವ್ಯೈಯ ಕಂಬಳಿ ।
ಯುರೆ ಸೆಳೆಯುತದ ಹೊಳೆಯ ನೀರೊಳು ಹಾಸಿ ಶಿವಯೋಗೀ ॥೧೦॥

ಕುಳಿತುಕೊಂಡಾ ಕ್ಷಣವೆ ಮುಂದಕೆ ।
ಚಲಿಸೆ ಕಂಬಳದಾಸನವು ನಿ ।
ಶ್ಚಲದ ದಿಟ್ಟಿಯೊಳೀಕ್ಷಿಸುವ ತೀರಸ್ಥ ಜನತತಿಯು ॥
ತಳೆದ ಮುದವಿಸ್ಮಯಗಳಿಂ ಕರ ।
ತಲದ ತಾಡನದಿಂದೆ ಜಯಮುಂ ।
ಗಳ ನಿನಾದವನೆಸಗುತಿರೆ ನದಿಯೆರಡನೆಯ ತಡಿಯಾ ॥ ೧೧ ॥

ಸನಿಹಕೈತರುತಿರ್ಪ ಯತಿಯನು ।
ಮನುಜವೇಷದ ಶಿವನು ದಿಟವೆಂ ।
ದೆನುತೆ ಶಿವಗುರು ನುತಿಸಿ ಕೈಮುಗಿದೀಕ್ಷಿಸುತ್ತಿರಲು ॥
ಮನಕೆ ತೋರಿದ ಲೀಲೆಗಳನಾ ।
ಕ್ಷಣವೆ ಮಾಡುವ ವಿರತಿಮೂರ್ತಿಯು ।
ಜನರ ಮಾತನು ಕೇಳನೆನುತಿರೆ ತೀರಗತಜನರು ॥ ೧೨ ॥

ಹೊಳೆಯ ತೀರವ ಮುಟ್ಟಿದಾ ಗುರು ।
ತಿಲಕನಲ್ಲಿಗೆ ಒಂದು ಜನನಂ ।
ಕುಲವು ನಲೆ ವ್ಯೆಯಿಕ್ಕಿ ಕೈಗಳ ಮುಗಿದು ನುತಿಗೈದು ॥
ನಿಲುತೆ ತಮತಮ್ಮೂರ್ಗೆ ಕರೆದೊ ।
ಯ್ಯಲು ಸುಭಕ್ತಿಯೊಳೆರೆಯುತಿರೆ ನಗೆ ।
ದಳೆದ ಮೊಗದಾ ಮಹಿಮನೀತೆರದಿಂದೆ ಪೇಳಿದನು ॥ ೧೩ ॥

ತಡಿವಿಡಿದು ಪೋಗುತ್ತೆ ಒಗೆಗೊಂ ।
ಡೆಡೆಯೊಳೈಸಲೆ ನೆಲಸುವೆನು ನಿ ।
ಮ್ಮೊಡನದಾವ ಗ್ರಾಮಕಂ ಬರಲೊಲ್ಲೆನೆಂದೊರೆದು ॥
ತಡೆಯದಂತಿರೆ ತೆರಳುವಾಯತಿ ।
ಯಡಿಗೆ ಪೊಡಮಟ್ಟನ್ನು ಬೇಡುವ ।
ನುಡಿಯುಳಿದು ಬೀಳ್ಕೊಟ್ಟರಾತನನಲ್ಲಿ ನೆರೆದವರು ॥ ೧೪ ॥



ಶ್ರೀ ಫಲಾಹಾರ ಶಿವಯೋಗೀಶನು ಕೊಣ್ಣೂರ ಮುಂದೆ ತುಂಬಿ ಹರಿಯುವ ಮಲಾಪಹಾರಿಣಿ
ಹೊಳೆಯನ್ನು ಕಂಬಳಿಯ ಮೇಲೆ ಕುಳಿತು ದಾಂಟಿದುದು.

ಇಂತು ತೆರಳುವುದರಿಯುತಂ ತ ।
ಮ್ಮಂತರಂಗದೊಳಾತನಾ ಶಿವ ।
ಶಾಂತಮೂರ್ತಿಯನಿರಿಸಿ ತನ್ಮಹಿಮೆಯನು ಪೊಗಳುತ್ತೇ ॥
ಚಿಂತಿತಾರ್ಥಪ್ರದನು ಕಣ್ಮರೆ ।
ಯಾಂತುದಕ್ಕುರೆ ಮರುಗುತಂ ನದಿ ।
ಯಿಂ ತಿರುಗಿ ತೆರಳಿದರು ಕೊಣ್ಣೂರವರು ಗುರುಯುತರು ॥ ೧೫ ॥

ತೊರೆಯ ತಡಿಗೊಂಡಿತ್ತಲಾ ನಿ ।
ರ್ಜರಮುದಾನ್ವಿತ ಮೂರ್ತಿ ತಾನೈ ।
ತರಲು ಕೆಲದೂರಕ್ಕೆ ಕೃಷಿಕನದೋರ್ವನಾಪಥದೇ ॥
ಬರುತೆ ಕಂಡಾ ಮಹಿಮನಮಳಿನ ।
ಚರಣ ಧೂಳಿಯ ಪೊತ್ತು ಶಿರದೊಳು
ಕರವ ಮುಗಿದಿದಿರಿನೊಳು ನಿಂದುದ ನೋಡಿ ತದ್ಗುರುವು ॥ ೧೬ ॥

ನಿನ್ನ ನೆಲೆ ಹೊಸಕೇರಿಯಲ್ಲವೆ? ।
ನಿನ್ನ ನಾಮವು ಬಸವನಲ್ಲವೆ? ।
ನಿನ್ನ ತೋಟದೊಳೆಲೆವನೆಯನೆಸಗಲ್ಲಿ ಕೆಲದಿನವು ॥
ನನ್ನ ಲಿಂಗಾರ್ಚನಸಮುದ್ಭವ ।
ದುನ್ನತಾನಂದದೊಳಗಿರ್ಪೆನು ।
ನಿನ್ನ ಭಕ್ತಿಯ ಭಾವವೆಳೆದುದು ನನ್ನ ಚಿತ್ತವನು ॥ ೧೭ ॥

ಎಂದೊರೆದುದನು ಕೇಳಿ ತನ್ನನ ।
ದೆಂದುಕಾಣದೆ ಯಿಂತು ನುಡಿದುದ ।
ರಿಂದಮಚ್ಚರಿಯೊಂದುತೀತನು ಮಹಿಮನೆಂದರಿದು ॥
ವಂದಿಸುತೆ ಮತ್ತಾತನಂಘ್ರಿಗೆ ।
ತಂದೆಯೇ ತನುಭವನೊಳೀಪರಿ ।
ಯಿಂದೆ ಕೃಪೆದೋರಿದೆಯ ಪುಣ್ಯವು ಕಣ್ದೆರೆದುದೆನಗೇ ॥ ೧೮ ॥

ಎಂದು ನುಡಿಯುತೆ ಮುಗ್ಧಭಕ್ತಿಸು ।
ಮಂದಿರನು ತತ್ಕೃಷಿಕನಾಯೋ ।
ಗೀಂದುವನು ಭುಜಪೀಠದೊಳು ಕುಳ್ಳಿರಿಸಿಕೊಂಡಿರದೇ ॥
ಬಂದು ತನ್ನಯ ತೋಟದೊಳು ತ ।
ಣ್ಪೊಂದಿರುವ ಮರದಡಿಯ ಶಿಲೆಯ ।
ಲ್ಲೊಂದಿದತಿಭಕ್ತಿಯೊಳು ಕುಳ್ಳಿರಿಸಿದನು ತದ್ಗುರವಾ ॥ ೧೯ ॥

ನಂದಿಯೇರುತೆ ತನ್ನ ಭಕ್ತನ ।
ಮಂದಿರವನೊಂದಿರ್ದ ಶಿವನಾ ।
ನಂದವನೆ ತಾಂ ಪಡೆಯೆ ಶಿವಯೋಗೀಶ್ವರನು ಬಳಿಕೇ ॥
ಚಂದದಿಂ ಪರ್ಣದ ಕುಟೀರವು ।
ನೊಂದ ವಿರಚಿಸಿ ತದ್ಗುರುವು ಬೇ ।
ಕೆಂದುದೆಲ್ಲವ ಸಿದ್ಧಪಡಿಸಿದನೊಕ್ಕಲಿಗನೊಲವಿಂ ॥ ೨೦ ॥

ಹೊಳೆಯ ತಡಿಯೆರಡರೊಳು ಕೂಡಿದ ।
ಹಲವು ಭಕ್ತರು ಬೇಡಿ ತಮ್ಮಯ ।
ನೆಲೆಗೆ ಕರೆಯುತ್ತಿರಲು ಪೋಗದೆ ಬಂದು ಯೋಗಿಯು ತಾಂ ॥
ಒಲಿದು ಕೃಷಿಕನಿಗವನ ತೋಟದೆ ।
ನೆಲಸಿದನು ನಲವಿಂದೆ ಧರಣೀ ।
ತಲದೆ ವಿರತರ ಚಿತ್ತವೃತ್ತಿ ನಿರಂಕುಶಮುದಲ್ತೇ ॥ ೨೧॥

ಉಕ್ಕುವುನ್ನತ ಭಕ್ತಿಭಾವದೊ ।
ಳೊಕ್ಕಲಿಗನುರೆ ಮಾಳ್ಪ ಸೇವೆಯ ।
ನಕ್ಕರೆಯೊಳಾಂತನುದಿನದೊಳಾಯೋಗಿಪುಂಗವನು ॥
ಮಿಕ್ಕ ಶಿವಯೋಗದೊಳು ಬೆರೆಯುವು ।
ದಕ್ಕೆ ತೊಳವಾ ತೋಟದೆಲೆವನೆ ।
ಯಿಕ್ಕೆಯಾಗಲು ಭಕ್ತರಾಗಮನಕ್ಕೆ ಮೊದಲಾಯ್ತು ॥ ೨೨ ॥

ಲಿಂಗಪೂಜಾಲೋಲನಾದಾ ।
ಮಂಗಳಾತ್ಮನು ನೈಪಿನೆಲೆವನೆ ।
ಯಂಗಣದೆ ಶಾಂತಿಮಯ ಸಂಧ್ಯಾಕಾಲದೊಳು ನಲವಿಂ ॥
ಲಿಂಗಪೂಜಾತತ್ವವನು ಹೃದ ।
ಯಂಗಮದ ರೀತಿಯೊಳು ಭಕ್ತಜ ।
ನಂಗಳೆದೆವುಗುವಂತೆ ಬೋಧಿಸುತಿರ್ದನನುದಿನದೇ ॥ ೨೩ ॥

ಒಳಿಕೆ ಭಕ್ತರು ಕೆಲರು ತದ್ಗುರು ।
ತಿಲಕನಿಗೆ ಬಸವೇಶ್ವರನ ನಿ ।
ರ್ಮಳ ಪುರಾಣವ ವಿವರಿಸುತೆ ನಮ್ಮಗಳ ದುರಿತವನು ॥
ತೊಳೆವುದೆಂದೆರೆದುದಕೆ ಮುದಮಂ ।
ತಳೆಯುತೊಪ್ಪಿಗೆಯಿತ್ತು ಲೀಲಾ ।
ನಿಳಯನಾತನು ಪೇಳತೊಡಗಿದನಾಪುರಾಣವನು ॥ ೨೪ ॥

ನಿತ್ಯಮುಕ್ತನ ಬಸವರಾಜನ ।
ನುತ್ಯಮಾದಾ ಭಕ್ತಿಯೇ ವೈ ।
ವೆತ್ತ ವಾಳ್ಕೆಯೊಳೆಸೆಯುವಾ ಶಿವಯೋಗಿವಲ್ಲಭನು ॥
ಬಿತ್ತರಿಸಿ ಪೇಳುವ ಪುರಾಣವು ।
ಬಿತ್ತಿದುದು ಶಿವಭಕ್ತಿಬೀಜವ ।
ಚಿತ್ತದೊಳು ಕದಲದೆಯೆ ಕುಳಿತದ ಕೇಳ್ವಖಿಳ ಜನದಾ ॥ ೨೫ ॥

ದಿನದಿನಕೆ ಪಾವನ ಪುರಾಣದೊ ।
ಳನಘ ಶರಣರ ಜೀವನದ ಬ ।
ಣ್ಣನೆಯನಾವರವೀರಶೈವಸುತತ್ವಕನುಸರಿಸಿ ॥
ಮನವ ಮುಟ್ಟುವ ಬಗೆಯೊಳಾಚಿ ।
ಧ್ವನನು ವಿವರಿಸುತಿರಲು ಬರುವಾ ।
ಜನತೆ ಪೆರ್ಚಲು ಸಾಲದಿರ್ದುದು ತೋಟದಾ ನೆಲೆಯು ॥ ೨೬ ॥

ತೋಟವದು ಶಿವಭಕ್ತಿಸುಂದರಿ ।
ಯೊಟದೆಡೆಯೆನಿಸಿದುದ ನೋಡುತೆ ।
ತೋಟಿಗನ ಸೈಪಿನ ಹಿರಿಮೆಯನು ಬಣ್ಣಿಸುವ ಜನರಾ ॥
ಕೂಟಮದು ಮನೆಗೆಲಸಮಂ ತೊರೆ
ದೂಟಮಂ ಮರೆದಾ ಕೃಷಿಕನೊಡ ।
ನಾಟವೇ ಪುಣ್ಯಪ್ರದಮದೆಂದಲ್ಲಿ ನೆಲಸಿದುದು ॥ ೨೭ ॥

ಹಗಲಗಲದೊಳು ಲಿಂಗಪೂಜೆಯ ।
ನಗಲದಿರ್ಪಾ ಯೋಗಮೂರ್ತಿಯ ।
ಮಿಗೆ ನಿರೀಕ್ಷಿಪ ಪುಣ್ಯವಿನ್ನಾ ಸಂಜೆಯಾದೊಡನೇ ॥
ಬಗೆಬಗೆಯ ಕಾಯಕದ ಶರಣರ ।
ಬಗೆಯುಗುವ ಚರಿತಗಳ ಕೇಳುವ ।
ಸೊಗವು ದೊರೆವುದರಿಂದೆ ತೋಟವ ಬಿಡರು ಬಂದವರು ॥ ೨೮॥

ಭಕ್ತಿಭಾವದೆ ಕೃಷಿಯನೆಸಗುವ ।
ಭಕ್ತ ಬಸವನ ತೋಟವದು ಶಿವ ।
ಭಕ್ತಿ ಪರಮ ಕ್ಷೇತ್ರವೆನಿಸಿತು ಕೆಲದಿನಂಗಳೊಳೇ ॥
ಯುಕ್ತಮಿದು ಮಹಿಮಾತ್ಮನಾದ ವಿ ।
ರಕ್ತ ಮೂರ್ತಿಯು ಬಂದು ತಾನನು ।
ರಕ್ತಿಯಿಂ ನೆಲಸಿರ್ಪ ನೆಲೆ ಸುಕ್ಷೇತ್ರಮೆನಿಸಿದುದು ॥ ೨೯ ॥

ಕೆಲದಿನಕ್ಕೆ ಪುರಾಣಕಥನವು ।
ಸಲೆ ಮುಗಿಯೆ ಹೊಸಗೇರಿ ಭಕ್ತಾ ।
ವಳಿಯು ಗಣಸಂತೃಪ್ತಿಗೆಸಗಿದ ಭೋಜನೋತ್ಸವದೇ ॥
ಫಲಗಳಶನದೊಳಿರ್ಪುದರಿದೊಡ ।
ಮಲಘು ಭಕ್ತಿಯೊಳಾಶಿವಾತ್ಮಗೆ ।
ಪಲವಗೆಯ ಮೃಷ್ಟಾನ್ನಗಳ ಭುಂಜಿಸಲು ಕಾಡಿದುದು ॥ ೩೦ ॥

ಬಸವನಪ್ಪಣೆಯಾದೊಡೆಲ್ಲವ ।
ನೊಸೆದು ನಾಂ ಭುಂಜಿಸುವೆನೆನುತಂ ।
ನಸು ನಗೆಯೊಳಾಯೋಗಿ ಮುಗಿಸುತೆ ಪೂಜೆಯನು ಬಳಿಕೇ ॥
ಮಿಸುಪ ತೀರ್ಥವನೀಯೆ ಭಕ್ತರ ।
ವಿಸರಕೆಡೆಮಾಡಿದರು ಮಾಡಿದ ।
ಪೊಸ ಪದಾರ್ಥವನಾತನಿಗೆ ಮೇಣ್ ಗಣಸಮೂಹಕ್ಕೇ ॥ ೩೧ ॥

ಸಡಗರದೊಳಾಪೂಜ್ಯಪಾದನಿ ।
ಗೆಡೆಯ ಬಟ್ಟಲೊಳ್ಬೈದೆ ನೀಡಿ ।
ರ್ದಡಿಗೆಯೆಲ್ಲವು ತತ್ಕರಸ್ಪರ್ಶನದೊಳಾಕ್ಷಣದೇ ॥
ಪಡೆಯೆ ತನಿವಣ್ಗಳ ಸುರೂಪವ ।
ನಡೆ ನಿರೀಕ್ಷಿಸುವಖಿಳರಚ್ಚರಿ ।
ವಡೆಯೆ ಭಕ್ತನದೋರ್ವನಿಂತೆಸಗಿದನು ಮೂರ್ಖತೆಯಿಂ ॥ ೩೨ ॥

ಬಿಡುವುದೆಲೆ ಜಂಗಮನೆ ನಮ್ಮೊಳು ।
ನಡೆಸುವೀಲೀಲೆಯನು ನೀಡಿ ।
ರ್ದಡಿಗೆಯನು ಕಣ್ಕಟ್ಟಿನೊಳು ಪಣ್ಣಾಗಿಸದೆ ನೀನು ॥
ಕಡು ಮುದದೊಳುಣವೇಳ್ಕುಮೆನುತಂ ।
ಬಡಿಸಿದನು ಮೃಷ್ಟಾನ್ನಗಳ ತಂ ।
ದೆಡೆಯ ಬಟ್ಟಲೊಳವನು ಪಣ್ಗೈದೂಟವನು ಮುಗಿಸಿ ॥ ೩೩ ॥

ಕಟ್ಟಿದೀಬಂಧನದೆ ನೀವಿ ।
ನ್ನಿಟ್ಟೊಡಿಲ್ಲಿರಲಾರೆನೆನುತಂ ।
ಬಿಟ್ಟು ತೋಟವ ಪುಸಿ ಮುನಿಸಿನಿಂದಾಯತೀಶ್ವರನು ॥
ಬಟ್ಟೆಗೊಂಡೈತರುತೆ ಸುಣ್ಣದ ।
ಬಟ್ಟಿಯೊಂದುರಿಯುವುದ ನೋಡುತೆ ।
ನೆಟ್ಟನದರೊಳು ಸೇರಿದನು ಬೆನ್ನಟ್ಟಿದರ ನೂಂಕಿ ॥ ೩೪ ॥

ಒಕ್ಕಲಿಗನಿದ ಕಂಡೊಡನೆ ಗುಂ ।
ಡಿಕ್ಕಿ ಹೊಡೆವಂತಾಗೆ ತನ್ನೆದೆ ।
ಗುಕ್ಕುವತಿದುಃಖದೊಳು ಮದ್ಗುರುಮೂರ್ತಿವರತನುವ ॥
ತೆಕ್ಕೆಗೊಂಡೈತರುವೆನೆಂದೊಳ ।
ಪೊಕ್ಕನಾಬಟ್ಟಿಯೊಳು ಸರ್ವರು ।
ದಿಕ್ಕು ತೋರದೆ ನಿಂದು ಚಿಂತಿಸುತಿರ್ಪನಿತರೊಳಗೆ ॥ ೩೫ ॥

ಉರಿವ ಸುಣ್ಣದ ಬಟ್ಟಿ ನೀರಿನ ।
ಕೆರೆಯವೋಲ್ ತಣ್ಪೇಯೆ ಕೃಷಿಕಗೆ ।
ಗುರುವನದರೊಳ್ ಕಾಣದೆಯೆ ವಿಸ್ಮಯವನೊಂದುತ್ತೇ ॥
ಹೊರಗೆ ಬರಲವನೊಡಲು ಸುಡದಂ ।
ತಿರುವುದನು ಕಂಡಚ್ಚರಿಯೊಳೇ ।
ನಿರನೆ ನಿನ್ನ ಸ್ವಾಮಿ ಬಟ್ಟಿಯೊಳೆನಲು ನೆರೆದವರು ॥ ೩೬ ॥

ಹೇಯವೃತ್ತಿಯ ನಮ್ಮನುಳಿಯುತೆ ।
ಮಾಯವಾದನು ಬಟ್ಟಿ ಬೆಂಕಿಯ ।
ಬಾಯೊಳುರೆ ಬೀಳ್ವೊಂದು ನೆವದಿಂದೊಳಗಿರನು ಗುರುವು ॥
ತೋಯವೆನಿಸಿತು ವಹ್ನಿ ನನ್ನಯ ।
ಕಾಯಕಂ ತನ್ಮಹಿಮೆಯಿಂ ನಿ ।
ಶ್ರೇಯದಾಣ್ಮನ ಪಾದವದು ಮರೆಯಾಯ್ತು ನಮಗಿನ್ನು ॥ ೩೭ ॥

ಎಂದು ಬಗೆ ನೊಂದೊರೆದು ಕೃಷಿಕನು ।
ನಿಂದವರನೊಡಗೊಂಡು ತೋಟಕೆ ।
ಬಂದು ಗಣಸಿವಹಕ್ಕೆ ತೃಪ್ತಿಯನೆಸಗುತಾಬಳಿಕೇ ॥
ಅಂದು ಮೊದಲಾಗುರುಪದದ್ವಯ ।
ವೆಂದು ನಂಬುತೆ ಪಾವುಗೆಗಳನು ।
ತಂದಿರಿಸುತೆಲೆವನೆಯೊಳವನರ್ಚಿಸಲು ತೊಡಗಿವನು ॥ ೩೮ ॥

ಇತ್ತಲಾ ಬಟ್ಟಿಯೊಳದೃಶ್ಯತೆ ।
ವೆತ್ತ ಯೋಗಿಯು ಕಾಕನೂರೊಳು ।
ಬಿತ್ತರದ ಜಸವಾಂತ ಕಾಕಾಂಬಿಕೆಯ ಗುಡಿಯಲ್ಲಿ ॥
ಮತ್ತೆ ಮೈದೋರಿರ್ಪನೆಂದರಿ ।
ಯುತ್ತೆ ಜನಮುಖದಿಂದೆ ನಿರ್ಜಿತ ।
ಚಿತ್ತನಾದಾಗುರುವಿನೆಡೆಗೈತರುತೆ ಕೃಷಿಕನು ತಾಂ ॥ ೩೯ ॥

ಕುರಡನಿಗೆ ಕಣ್ಬಂದೊಡಾಗುವ ।
ಹರಿಸವನೆ ತಾಂ ಪೊರ್ದಿ ಯೋಗೀ ।
ಶ್ವರನ ಕಂಡೊಕ್ಕಲಿಗನಾತನ ಸಿರಿಯಡಿಗೆ ನಮಿಸಿ ॥
ಉರಿಯೊಳಗೆ ಪೊಕ್ಕುಳಿದ ಮಹಿಮಾ ।
ಕರನೆ ನನ್ನನು ತೊರೆದು ಬಂದೆಯ ।
ಕರುಣದಿಂ ಕ್ಷಮಿಸೆಸಗಿದಪರಾಧವನು ನನ್ನೊಡೆಯಾ ॥ ೪೦ ॥

ಉರಿವ ಸುಣ್ಣದ ಬಟ್ಟಿಯೊಳು ಕಡು ।
ಭರದೆ ಸೇರಿದ ನಿನ್ನನಲ್ಲಿಂ ।
ತರಲುಪೊಕ್ಕೀ ನನಗೆ ಕಣ್ಮರೆಯಾಗಿ ಬಂದಿಲ್ಲಿ ॥
ಇರುವರೇ ನಾಂ ಗೈದ ಸೇವೆಗೆ ।
ಕೊರತೆಯಾದುವೆ ಹೊರಡು ಮೊದಲಂ ।
ತಿರು ಗುರುವೆ ನಿನ್ನೆಲೆವನೆಯೊಳಾಗಮಿಸು ಕೃಪೆದೋರಿ ॥ ೪೧ ॥

ಇನ್ನು ತೋಟದೊಳೋರ್ವನಂ ಬಿಡೆ ।
ನೆನ್ನನುಡಿಯಿದು ನನ್ನಿ ನಾಂ ತನಿ ।
ವಣ್ಣನಲ್ಲದೆ ಬೇರೆ ತಿಸಿಸನು ಕೊಡುವುದಿಲ್ಲಯ್ಯಾ ॥
ನಿನ್ನವನು ನಾನಲ್ಲವೇ ಮು ।
ಕ್ಕಣ್ಣನೇ ಬಸವಂಣನೇ ಬಾ ।
ಖಿನ್ನನಾಗಿಸದಂತೆ ರಕ್ಷಿಸು ನನ್ನನೆಲೆ ತಂದೇ ॥ ೪೨ ॥

ಇಂತು ಪಲವಂದದೊಳು ಬೇಡಿದ ।
ನಂತರದೊಳಾಯೋಗಿ ನೀಂ ನ ।
ನ್ನಂ ತರಲು ಬಟ್ಟಿಯೊಳು ಪೊಕ್ಕಿರೆ ಸುಡದುಳಿದು ಕಡೆಗೇ ॥
ಎಂತು ಬಂದೆಯೊ ತಿಳಿದುದಿದು ನಿ ।
ನ್ನಂತರಂಗದ ಭಕ್ತಿಮಹಿಮೆಯೊ ।
ಳಿಂತುಟುಭಯರು ನಾವು ಬದುಕಿದೆವಿದು ದಿಟವು ಮಗನೇ ॥ ೪೩ ॥

ಎಂದು ಬಿಗಿಯಪ್ಪುತ್ತೆ ಮುಗ್ಧತೆ ।
ಯಿಂದೆ ಬೇಡಿದ ತದ್ವಚನಕಾ ।
ನಂದಪರವಶನಾಗಿ ಕೃಷಿಕನ ಕೈವಿಡಿದು ಗುರುವು ॥
ಮುಂದೆ ನಿನ್ನೆಡೆಯಲ್ಲಿರಲು ಜನ ।
ರಿಂದೆ ತೊಂದರೆಯೆಂದರಿದು ನಾಂ ।
ಬಂದೆನಿಲ್ಲಿಗೆ ಮತ್ತಮಿಲ್ಲಿರದಂತೆ ಪೋಗುವೆನು ॥ ೪೪ ॥

ಜಾನಿಸಿದ ಸಮಯದೊಳು ನಿನ್ನಗೆ ।
ಕಾಣಿಸುತ್ತೆನ್ನಮಳ ರೂಪವ ।
ನೀನೆರೆದುದನು ಕೊಡುವೆನಿದು ದಿಟವೆಂದು ನೆರೆ ನಂಬಿ ॥
ಸಾನುರಾಗದೆ ತೆರಳು ನಿರ್ಜನ ।
ಕಾನನವ ಸೇರುವೆನು ನಾಂ ನಿನ ।
ಗೇನು ಕೊರತೆಯು ಬರದವೋಲ್ ಪೊರೆಯುವೆನೆನುತ್ತೊರೆದು ॥೪೫॥

ವಿರತಿಮೂರ್ತಿಯು ಸಂತವಿಸುತಂ ।
ಪರಸಿ ಕಳುಹಿಸಲಾಕೃಷಿಕನೈ ।
ತರುತೆ ತನ್ನಯ ತೋಟದೆಲೆವನೆಯಲ್ಲಿ ಹಾವುಗೆಯಾ ॥
ನೆರೆ ಸಮರ್ಚಿಸ ತೊಡಗಲಿತ್ತಂ ।
ಹರಿಸದಿಂ ನೆಲಸಿದನು ತದ್ಗುರು ।
ವೆರೆದುದನು ಕೊಡುತೆಲ್ಲರಿಗೆ ಕಾಕಾಂಬಿಕಾಲಯದೇ ॥ ೪೬ ॥

॥ ಮುಗಿದುದು ॥ ಒಟ್ಟು ಪದಗಳು ॥ ೬೫೪ ॥



ಓಂ ಕಾಕಾಂಬಾವರಪ್ರದಾಯನಮಃ

# ಹದಿನಾರನೆಯ ಸಂಧಿ

---

**ಸೂಚನೆ:—** ಇರುತೆ ಕಾಕಾಂಬಿಕೆಯ ಗುಡಿಯೊಳು ।
ಪರಸಿ ಗುರುವಾದೇವಿಗೈತರು ।
ತರಳಿಕಟ್ಟೆಯ ಬಳಿಯೊಳಿರಲಾಶ್ರಮುವನೆಸಗಿದನು ॥

ಬಿಡದೆ ದಿನದಿನದಲ್ಲಿ ವಿಧಿಯಿಂ ।
ನಡೆಯದಿರೆ ಪೂಜಾದಿ ಸಂಸ್ಕೃತಿ ।
ಗುಡಿಯ ವಿಗ್ರಹದಲ್ಲಿ ತೋರದ ದೇವತಾಕಳೆಯು ॥
ಸಡಗರದೊಳೈತಂದು ಶೋಭಿಸ ।
ತೊಡಗಿತಾಲಯವಲ್ಲಿ ತದ್ಗುರು ।
ವಡಿಯಿಡುತ್ತಲ್ಲಿರಲು ತತ್ಸನ್ನಿಧಿಯ ಮಹಿಮೆಯೊಳು ॥ ೧ ॥

ಸಾಂಬಸಂಗತಶಕ್ತಿಯೇ ಕಾ ।
ಕಾಂಬಿಕಾನಾಮದೊಳಗೀಪರಿ ।
ತುಂಬಿ ಮೆರೆಯಲು ಗುಡಿಯ ವಿಗ್ರಹದಲ್ಲಿ ದಿನದಿನದೇ ॥
ನಂಬಿದವರಿಷ್ಟವನು ಸಲಿಸುವೆ ।
ನೆಂಬ ಧೃತಿ ತನಗಾದ ಕತದೆ ತ ।
ದಂಬಿಕೆಯು ಮೈವೆತ್ತು ಬೇಡಿದಳಿಂತು ಯೋಗಿಯನು ॥ ೨ ॥

ನೀನು ಶಿವನಪರಾವತಾರನು ।
ನಾನು ನಿನ್ನಯ ಶಕ್ತಿರೂಪಿಣಿ ।
ಕ್ಷೋಣಿಯವರಿಷ್ಟಾರ್ಥವೀಯುವ ಹೊಣೆಯನೆನಗಿತ್ತು ॥
ಸಾನುರಾಗದೆ ತೆರಳು ಬೇರೆ ।
ಸ್ಥಾನಕೆಲೆ ಗುರುವರನೆ ಗೈದೊಡೆ ।
ನೀನೆ ಮತ್ಕಾರ್ಯವನು ಗುಡಿಯೊಳಗೆನಗೆ ಕೃತಿಯೇನು ॥ ೩ ॥

ದೇವಿಯೊನಲ್ನುಡಿಯು ತನ್ಮಹಿ ।
ಮಾವಲಂಬನನೆದೆಯೊಳಗೆ ಮುದ ।
ಭಾವದಮಿತ ತರಂಗಗಳನೆಬ್ಬಿಸಲು ತಲೆದೂಗಿ ॥
ದೇವಿಯೇ ದಿನೋದ್ಧರಣಕೃತಿ ।
ಕೋವಿದೆಯೆ ನಿನ್ನುಕ್ತಿ ತಕ್ಕುದು ।
ಭೂವಲಯದೊಳು ನಿನ್ನ ಜಸವೆಣ್ದೆಸೆಗೆ ಪಸರಿಸಲಿ ॥ ೪ ॥

ಬಂದ ಭಕ್ತರ ರಕ್ಷಿಸುವ ಕೃತಿ ।
ಯಿಂದೆ ನೀನಿಲ್ಲಿರಲು ನಾನಿ ।
ನ್ನೊಂದು ನೆಲೆಗೀದಿನವೆ ಪೋಗುವೆನೆಂದ ತದ್ಯತಿಗೇ ॥
ವಂದಿಸುತೆ ನೀನೆನಗೆ ಕೂರ್ಮೆಯ ।
ತಂದೆಯಾಗಿ ಸಹಾಯವೀಯುವು ।
ದೆಂದು ವಿಗ್ರಹವಪ್ಪಡಗೆ ಕಾಕಾಂಬೆಯನಿತರೊಳೇ ॥ ೫ ॥

ಗ್ರಾಮದಖಿಳ ಸುಭಕ್ತ ಜನರಾ ।
ಸ್ವಾಮಿಸನ್ನಿಧಿಗಾಗಮಿಸುತಂ ।
ಪ್ರೇಮದಿಂ ತತ್ಪಾದಪದ್ಮನ ಪಿಡಿದು ನಮಿಸುತ್ತೇ ॥
ಕಾಮಹರಸನ್ನಿಭನೆ ನಮ್ಮ ।
ಗ್ರಾಮದೊಳಗಡಿಯಿಟ್ಟು ಸರ್ವರ ।
ಕಾಮಿತಾರ್ಥವನಿತ್ತು ರಕ್ಷಿಪ ಕೃಪೆಯ ನೀಡೆನಲು ॥ ೬ ॥

ಕಿರು ನಗೆಯ ಮಲ್ಲಿಗೆಯ ಸೂಸುತೆ ।
ಪರಮಗುರುವಿಂತೊರೆದನೈತಂ ।
ದಿರುವರಿಗೆ ನೀವಿಲ್ಲಿ ಬರುವನಿತರೊಳೆ ಕಾಕಾಂಬೇ ॥
ಹರಿಸದಿಂ ಮೈದೋರಿ ಭಕ್ತರ ।
ಪೊರೆವ ಕಜ್ಜದ ಹೊಣೆಯ ನನ್ನ ।
ಲ್ಲಿರಿಸಿ ನೀಂ ಬೇರೆಡೆಗೆ ಪೋಗುವುದೆಂದ ಕತದಿಂದೇ ॥ ೭ ॥

ಬರುವುದಿಲ್ಲೂರೊಳಗೆ ಗುಡಿಯೊಳ ।
ಮಿರುವುದಿಲ್ಲಿನ್ನೆಲ್ಲರನು ನಲೆ ।
ಪೊರೆವಳಿಷ್ಟವನಿತ್ತು ಕಾಕಾಂಬಿಕೆಯೆನುತೆ ಯೋಗಿ ॥
ಪೊರಮಡಲು ಬೆಂಗೊಂಡು ಸರ್ವರು ।
ಕರವ ಮುಗಿದತಿವಿನಯದಿಂದಂ ।
ಕರೆಯ ತೊಡಗಲು ಪಥವೆ ಮೈಮರೆಯಿಸಿದನನಿತರೊಳೇ ॥ ೮ ॥

ಬೆರಗುಗೊಂಡೀಕ್ಷಿಸುತೆ ಸುತ್ತಲು ।
ಗುರುವ ಕಾಣದೆ ಮಾಯವಾದನು ।
ಪರಮ ಮಹಿಮನು ತತ್ಪದವು ಪಾಪಿಗಳಿಗೆರವಾಯ್ತು ॥
ಸುರಮಹೀಜಮಿದೆಲ್ಲಿ ಪೋದುದೊ ।
ಹರಣವೆಮ್ಮದು ಹಾರಿ ಪೋದುದೆ ।
ಕರಕೆ ಸಿಕ್ಕೈಸಿರಿಯು ಕರಗಿತು ಪುಣ್ಯಹೀನರಿಗೇ ॥ ೯ ॥

ಎಂದು ಚಿಂತಿಸಿ ಬಳಿಕೆ ಭಕ್ತರ ।
ವೃಂದವಾವೆಡೆಯಲ್ಲಿ ಶಿವಯೋ ।
ಗೀಂದು ಕಣ್ಮರೆಯಾದನಲ್ಲಿಯೆ ಕಟ್ಟೆಯನು ಕಟ್ಟಿ ॥
ಸುಂದರದ ತತ್ಪಾದಗಳ ಶಿಲೆ ।
ಯಿಂದೆ ವಿರಚಿಸುತಂ ಪ್ರತಿಷ್ಠಿಸು ।
ತಂದುಮೊದಲರ್ಚಿಸುತೆ ಪಡೆದುದು ಮನದ ಬಯಕೆಗಳಾ ॥ ೧೦ ॥

ಕಾಕನೂರಲ್ಲಿಂದಿಗಂ ಕರು ।
ಣಾಕರನ ಗುರಪುಂಗವನ ತ ।
ಲ್ಲೋಕಪೂಜ್ಯ ಶ್ರೀಪದಂಗಳನಾಂತಕಟ್ಟೆಯದು ॥
ಏಕಮನದಿಂ ಭಜಿಪ ಭಕ್ತಾ ।
ನೀಕಕೆಳಸಿದುದೀವುದೆಂಬಾ ।
ಲೋಕವಿಶ್ರುತ ಕೀರ್ತಿಯಿಂ ರಾರಾಜಿಸುವುದಲ್ತೇಂ ॥ ೧೧ ॥

ಇತ್ತಲಾ ಯತಿವರನದೃಶ್ಯತೆ ।
ವೆತ್ತಬಳಿಕಲ್ಲಿಂದೆ ಚರಿಸುತೆ ।
ನುತ್ಯಳಾದ ಮಲಾಪಹಾರಿಣಿಯಂತಿಕದ ನೆಲೆಯೊಳ್ ॥
ಬಿತ್ತರದ ಗಿಡುಬಳ್ಳಿ ಪೊದೆಗಳು ।
ಸುತ್ತುವರಿದಾ ಬೆಟ್ಟಗಾಡಿನೊ ।
ಳುತ್ತಮಸ್ಥಲವೊಂದ ಹುಡುಕಲು ತೊಡಗಿದನು ನಲವಿಂ ॥ ೧೨ ॥

ಅರಳಿಕಟ್ಟೆಯ ಪೆಸರಪಳ್ಳಿಯ ।
ಪರಿಸರದೆ ತರುವಲ್ಲರಿಗಳಿಂ ।
ಪರಿಲಸಿತಮಾದೊಂದು ನೆಲೆ ಲಿಂಗಾರ್ಚನಾದಿಗಳ ॥
ವರಕೃತಿಗೆ ಸರಿಯೆನಿಸಿ ತದ್ಗುರು ।
ವರನ ಮನಮಂ ಸೆಳೆಯಲಲ್ಲಿಯೆ ।
ಇರಲು ನಿಶ್ಚಯಿಸಿದನು ನಿಜಶಿವಯೋಗವೆಸಗಸಲ್ಕೇ ॥ ೧೩ ॥

ಪಕ್ಕಿಗಳ ಕಲರವವು ಸಮ್ಮುದ ।
ವುಕ್ಕಿಸುವ ತಣ್ಣೆಲರು ವಿಮಳತೆ ।
ಯೊಕ್ಕ ಜಲಮುಂ ಹಲವು ಬಣ್ಣದ ಲತೆಯ ಪೊದರುಗಳು ॥
ಮಿಕ್ಕ ಬಹುವಿಧವಾದ ಪೂಪಣ್ ।
ತೆಕ್ಕೆಗೊಂಡಿಹ ಗಿಡುಮರಗಳಿರ ।
ದಕ್ಕರೆಯ ಪೆರ್ಚಿಸಿದವಾ ನೆಲೆಯಲ್ಲಿ ತದ್ಯತಿಗೇ ॥ ೧೪ ॥

ಜನರಹಿತದಾತಾಣದೊಳು ನಿಜ ।
ಮನವೆಳಸಿದಂತೆಸಗಿ ಪೊಸ ಯೆಲೆ ।
ವನೆಯನಲ್ಲಿ ಶಿವಾರ್ಚನಾದಿಸಮನ್ವಿತವ್ರತಮಂ ॥
ಘನಮುದದೊಳಾಚರಿಸತೊಡಗಿದ ।
ನನುಪಮಿತ ಭಕ್ತಿಯೊಳು ಸನ್ಮುನಿ ।
ಜನವಿನುತ ಶಿವಯೋಗಿ ಗುಪ್ತಸ್ಥಿತಿಯೊಳನುದಿನದೇ ॥ ೧೫ ॥

ದಿನದಿನಕೆ ನಿಜಲಿಂಗದೊಳು ಕ ।
ಣ್ಮನವ ನಿಲ್ಲಿಸಿ ಜಾನಿಸುತೆ ತಾಂ ।
ಕೊನೆಗೆ ಲಿಂಗಾಕಾರಯುಕ್ತ ಸಮಾಧಿಯೊಳು ಕುಳಿತು ॥
ಘನತರಾನಂದದೊಳಗಿರುವುದೆ ।
ಘನಮೆನಿಸಲೀಬಗೆಯೊಳೇ ಕೆಲ ।
ದಿನಗಳೆದೊಡಂ ಯೋಗಿಯೆಚ್ಚರಗೊಳ್ಳದಿರುತಿಹನು ॥ ೧೬ ॥

ಎಲೆವನೆಯ ಬಳಸಿರ್ದ ಕೋಟಾ ।
ವಳಯಮೆನೆ ನಲೆ ಸುತ್ತುವರಿಯುತೆ ।
ಬೆಳೆಯುತಿರೆ ಕೆಲಬಲದ ಹುತ್ತುಗಳಾನೆಲೆಗೆ ಜನರಾ ॥
ಸುಳಿವೆ ಇಲ್ಲದ ಕತದೆ ತನ್ನಿ ।
ರ್ಮಳನ ಲಿಂಗಧ್ಯಾನಮುಗ್ನತೆ ।
ಬಳೆಯುತಿರ್ದುದದಾವ ತೊಡಕಿಲ್ಲದೆಯನುಕ್ರಮದಿಂ ॥ ೧೭ ॥

ಏನೊರೆವೆನಾ ಯೋಗಿಚಂದ್ರನ ।
ನೂನ ತೇಜದ ಜೊನ್ನದಿಂದಂ ।
ಕಾನನದ ಜಂತುಗಳೆದೆಯ ಪಗೆತನದ ಕತ್ತಲೆಯು ॥
ಕಾಣದಡಗುತೆ ಕೆಳೆತನದ ನಿ ।
ರ್ಮಾಣವಾದೊಡನವುಗಳಾಸು ।
ಜ್ಞಾನಮೂರ್ತಿಯ ನೆಲೆಗೆ ಬರತೊಡಗಿದವು ನಲವಿಂದೇ ॥ ೧೮ ॥

ಉರಗವೆತ್ತಾಡಿಸುವ ಹೆಡೆಯ ।
ಲ್ಲೊರಗಿದುದು ಮರಿಗಿಳಿಯು ಬಳಿಯೊಳೆ ।
ಗರಿಗೆದರಿ ಸಲೆ ಕುಣಿಯುತಿರ್ದುವು ನಲಿದು ನವಿಲುಗಳು ॥
ಹರಿಣಗಳು ವೃಕದೊಡನೆ ಭೀತಿಯ ।
ತೊರೆದು ಬಿನದಿಸುತಿರ್ದುವಾಗುರು ।
ವರನ ವಿಮಳಾಶ್ರಮದೊಳಾತನ ಯೋಗಮಹಿಮೆಯೊಳು ॥ ೧೯ ॥

ದೊರೆವ ಯೋಗದ ಸಿದ್ಧಿಗೆಳಸದೆ ।
ಮರೆವುಗುವ ಭಕ್ತರನು ಪೊರೆಯುವ ।
ಪರಮ ಕಾಯಕವೊಂದನೆಳಸಿದ ತತ್ಫಲಾಶನನ ॥
ಚರಣ ಕರಗಳು ದೃಷ್ಟಿ ಮನಗಳು ।
ವರವಚನವೆಂಬಿವುಗಳೈದುಂ ।
ಪರುಷವಾದವು ನೆರವಸೀಯಲು ಲೋಕರಕ್ಷಣೆಗೇ ॥ ೨೦ ॥

ಅರಳಿಕಟ್ಟೆಯ ಬಳಿಯ ತಾಣವು ।
ಪರತರ ಕ್ಷೇತ್ರಮದೆನಿಸಿತಾ ।
ವರ ತಪೋಧನನಡಿಯ ಸೋಂಕನು ದಿನದಿನದೆ ಪಡೆದು ॥
ಕರದ ಸಂಸ್ಪರ್ಶನದೆ ಪಣ್ತವು ।
ತರುಗಳಲ್ಲಿಯ ಹಲವು ಬಳ್ಳಿಗ ।
ಳುರೆ ಸುಮಂಗಳನಾಂತವಾತನ ದೃಷ್ಟಿಪಾತದೊಳು ॥ ೨೧ ॥

ಭೌತಿಕದ ಸಿದ್ಧಿಗಳ ದಾಂಟುತೆ ।
ಭೂತನಾಥನ ಸಮರಸದ ಸೌ ।
ಖ್ಯಾತಿಶಯದಿಂ ಪೂರ್ಣಮಾಗಿರೆ ಯೋಗವಾತನೊಳು ॥
ಮಾತು ಮನಕಂ ನಿಲುಕದಾ ಚಿ ।
ಜ್ಜ್ಯೋತಿಯೇ ಬೆಳಗಲ್ಕೆ ತೊಡಗಿದು ।
ದಾತನೊಳಗಂ ಹೊರಗಮಿನ್ನೇನಾತನೇ ಶಿವನು ॥ ೨೨ ॥

ಆಗಮುಗಳೊರೆವಂತೆ ತಾಂ ಶಿವ ।
ಯೋಗಸಿದ್ಧನೆ ಆಗಿ ಪರಮ ವಿ ।
ರಾಗ ಮೂರ್ತಿಯು ತನ್ನ ವಿಮಳಾಶ್ರಮದೊಳಿಂತಿರಲು ॥
ಪೋಗಿ ಕಾರ್ಗಾಲವು ಶರದೃತು ।
ವಾಗಮಿಸಿದುದು ನಿರ್ಮಳತ್ವವ ।
ನಾಗಿಸುತೆ ಕೆರೆ ತೊರೆಗಳುದಕಕ್ಕಾಗಸದ ನೆಲೆಗಂ ॥ ೨೩ ॥

ಮರದ ಕೋಟರದಿಂ ನೆಗೆದು ಕೊನೆ ।
ಗಿರುವ ತಳಿರ್ಗೊಂಬಿನೊಳು ಬಿಸಿಲಾಂ ।
ತಿರುತೆ ಪಕ್ಕಿಗಳೊಲವಿನಿಂ ದನಿಗೈಯೆ ಬಿಲಗಳನು ॥
ತೊರೆಯುತರಸಂಚೆಗಳು ಪೊರಮಡೆ ।
ನೆರೆ ವಿಮಳತೆಯನೊಂದೆ ದಿಶೆಗಳು ।
ಹರಿಸದಿಂ ಹೊಲಗೆಲಸವೆಸಗಲು ತೊಡಗಿದರು ಜನರು ॥ ೨೪ ॥

ಎಳೆಯ ಹುಲ್ಲನು ತಿಂದು ಪಶುಸಂ ।
ಕುಲಕೆ ನಲವೇರಿದುದು ಹೊಲಗಳ ।
ಬೆಳೆಯ ಪೆರ್ಚನು ಕಂಡು ಕೃಷಿಕರಿಗೆದೆಯು ಹಿಗ್ಗಿದುದು ॥
ತಿಳಿಗೊಳದೆ ಮೊಳೆವೋದ ತಾವರೆ ।
ಗಳ ಕಳೆಯು ಪಿರಿದಾಯ್ತು ಗಗನ ।
ಸ್ಥಲದೆ ಹಿಂಡುತೆ ಹರವಿದಂತೊಪ್ಪಿದುದು ಬೆಳ್ಮುಗಿಲು ॥ ೨೫ ॥

ಇಂತಿರುವ ಶರದಾಗಮದೊಳಮು ।
ಳಾಂತರಂಗ ಸ್ವಾಮಿಯೊಂದು ದಿ ।
ನಾಂತದಲ್ಲಿ ಸಮಾಧಿಯಿಂದೆಚ್ಚತ್ತು ತಾಂ ಬಳಿಕೇ ॥
ಶಾಂತ ವಾತಾವರಣಯುಕ್ತ ದಿ ।
ಗಂತಗಳ ಸಲೆ ನಿರುಕಿಸುತ್ತಂ ।
ಸಂತಸದೆ ಕುಳ್ಳಿರ್ದನಾಶ್ರಮದೊಂದು ತಾಣದೊಳು ॥ ೨೬ ॥

ಭುವನ ಭವನದ ಶಿವಗೆ ಸಂಧ್ಯಾ ।
ಸ್ತವನವೆಸಗಲು ಕಾಲಪುರುಷನು ।
ತವಕದಿಂ ಪಡುವೆಟ್ಟವೆಂಬಾ ಶಿಲೆಯ ಕಂಬದೊಳು ॥
ತವೆ ವಿರಾಜಿಪ ಮಾಣಿಕದ ದೀ ।
ಪವನಿರಿಸಿದನೊ ಎಂಬ ತೆರದಿಂ ।
ದಿವಸಕರ ಬಿಂಬಮದು ಪಶ್ಚಿಮದಿಶೆಯೊಳೊಪ್ಪಿದುದು ॥ ೨೭ ॥

ಬಾಡುತಿರೆ ತಾವರೆಯು ಕಿರುನಗೆ ।
ಗೂಡುತಿರೆ ನೈದಿಲೆಗೆ ಕೋಕದೆ ।
ಮೂಡುತಿರೆ ವಿರಹವ್ಯಥೆಯು ಪಕ್ಕಿಗಳ ಸಂಕುಲವು ॥
ಗೂಡು ನೇರುತ್ತಿರಲೆಲರು ಸುಳಿ ।
ದಾಡುತಿರೆ ಪಶ್ಚಿಮದ ಶೈಲದ ।
ಕೋಡುಗಲ್ಲಿನ ಬೆನ್ನೊಳಡಗಿದನಾದಿನೇಶ್ವರನು ॥ ೨೮ ॥

ಸೂರನಿಂತಿರದಡಗೆ ಬೆಳಕಿನ ।
ದಾರಿ ದೋರುವರಿಲ್ಲದುದರಿಂ ।
ಘೋರಮುಣಿಗಾವರಿಸುವಜ್ಞಾನದವೊಲೆಲ್ಲೆಡೆಗಂ ॥
ಸೇರುತಿರೆ ಕಡುಗತ್ತಲೆಯುದಂ ।
ಜಾರ ಚೋರರ ನಿವಹವೈಸಲೆ ।
ಭೂರಿ ಸಂಭ್ರಮದಿಂದಿರ್ಗೊಳುತಿರ್ದುದಾಬಳಿಕೇ ॥ ೨೯ ॥

ಸುರಪಥಶ್ರೀಯುಟ್ಟ ನೀಲಾಂ ।
ಬರದೆ ಕೆತ್ತಿದ ಮಣಿಗಳಂತಿರೆ ।
ನೆರೆ ಮಿನುಗತೊಡಗಿದವು ತಾರೆಗಳಾಸಮಯದಲ್ಲಿ ॥
ಸುರಪದಿಕ್ಕಾಮಿನಿಯ ಫಾಲ ।
ಸ್ಫುರಿತ ಕುಂಕುಮ ತಿಲಕದಂತಿರೆ ।
ಮೆರೆದುದುದಯಾಚಲಶಿಖರಗತ ಚಂದ್ರಬಿಂಬವದು ॥ ೩೦ ॥

ಅಮರ ಪೂಜ್ಯನ ಶಿವನ ತಲೆಗಂ ।
ವಿಮಳ ಭೂಷಣನಾದ ಶಶಿ ತಾ ।
ನಮೃತಕರದಿಂ ಮುಟ್ಟಿ ನವ ಚೇತನವನೆಲ್ಲರೊಳಂ ॥
ಸಮೆಯುತಿರೆ ತಿಳಿ ಜೊನ್ನ ವಿರದಾ ।
ಕ್ರಮಿಸುತದು ಧವಳಿಸಿದನೋ ಲೋ ।
ಕಮನಜಂ ರಜತಮಯ ರಸದಿಂದೆಂಬೊಲೊಪ್ಪಿದುದು ॥ ೩೧ ॥

ಇಂದುವಿಗೆ ಜನ್ಮವನು ಕೊಟ್ಟ ।
ದೊರ್ಂದನೆಯ ಪಾಲ್ಗಡಲದಲ್ಲದೆ ।
ಚಂದಿರನಿನೊಗೆದೆರಡನೆಯ ಪಾಲ್ಗಡಲಿದೆಂಬಂತೇ ॥
ಚಂದದಿಂ ಪಸರಿಸಿದ ಚಂದ್ರಿಕೆ ।
ಯಂದು ಕಂಗೊಳಿಸುತ್ತೆ ಲೋಕಾ ।
ನಂದಕರಮಾಯ್ತಾಶರತ್ಸಮಯದೊಳಗಾಬಳಿಕೇ ॥ ೩೨ ॥

ನಗಿಸಿ ಕೈರವಮಂ ಚಕೋರವ ।
ಮಿಗೆ ತಣಿಸಿ ತಳ್ತಖಿಳ ಜೀವರ ।
ಬಗೆಯನರಳಿಸಿ ಗಗನ ಮಧ್ಯಕೆ ಬರುವ ಚಂದ್ರಮನಾ ॥
ಸೊಗಸು ಮಿಗೆ ನಿರುಕಿಸುತೆ ಯೋಗಿಯು ।
ಮೃಗಧರಂಗೀಸುಭಗತೆಯು ತಾ ।
ನೊಗೆಯದಿರೆ ಶಿವನೆಂತು ತಲೆಯಲ್ಲಿವನ ಧರಿಸುವನು ॥ ೩೩ ॥

ಎನುತೆ ತಚ್ಚಂದ್ರಾತಪದೆ ತ ।
ನ್ನನಘ ಗುರುವರಪಾದಪದ್ಮಾ ।
ರ್ಚನೆಗೆ ಸಲೆ ಮನವೆಳಸೆ ನೆನೆದನು ಮಲ್ಲಿಕಾರ್ಜುನನಾ ॥
ನೆನೆವರೆದೆವನೆಯಲ್ಲಿ ನೆಲಸಿದ ।
ಮನಸಿಜಾರಿಯು ಜಂಗಮಾಕೃತಿ ।
ಯನು ತಳೆದು ವೈದೋರ್ದನಾಕ್ಷಣದಲ್ಲಿ ಶಿಷ್ಯನಿಗೇ ॥ ೩೪ ॥

ಕಂಡು ಪುಲಕಿತನಾಗುತ್ತೈಸಲೆ ।
ಕೊಂಡು ಕೊನೆವುತೆ ಬಂದು ತತ್ಪದ ।
ಪುಂಡರೀಕಕೆ ಭೃಂಗದಂತೆರಗಿದ ಸುಶಿಷ್ಯನನು ॥
ಮುಂಡೆವಿಡಿದೆತ್ತಪ್ಪುತಂ ತ ।
ತ್ಪಂಡಪರಶುವು ಮಗನೆ ಯೋಗದ ।
ಖಂಡಸುಖಮಂ ಪಡೆದುಮೆನ್ನನು ನೆನೆದುದೇಕೆನಲು ॥ ೩೫ ॥

ಈ ಶರಚ್ಚಂದ್ರಿಕೆಯೊಳಿಲ್ಲಿ ಮ ।
ಹೇಶ ನಿನ್ನ ಪದಾರ್ಚನೆಯ ಗೈ ।
ವಾಶೆ ಮನದೊಳು ಮೂಡಿದುದು ನೋಡಿನ್ನು ಕೌಮುದಿಯು ॥
ಭಾಸುರತೆಯಿಂ ನಿನ್ನ ಕೀರ್ತಿಯ ।
ರಾಶಿಯಂತಿರೆ ಜಗವ ತುಂಬುತೆ ।
ತೋಷವೆಂತೀಯುವುದೆನುತೆ ಶಿವಯೋಗಿ ತಾಂ ಬಳಿಕೇ ॥ ೩೬ ॥

ನೆನೆದೊಡನೆ ವೈದೋರ್ದ ಶಿವನಾ ।
ಘನಕೃಪೆಯ ಕೊಂಡಾಡುತಂ ಮ ।
ಜ್ಜನವೆಸಗಿ ತದ್ಗುರುವಿಗಂ ಸ್ನಾನಾದಿಗಳ ಗೈಸಿ ॥
ಅನಘಭಕ್ತಿಯೊಳಾತನಂಪ್ರಿಸು ।
ವನಜಗಳ ಮನವಾರೆ ಪೂಜಿಸು ।
ತನುಪಮದ ತೀರ್ಥಪ್ರಸಾದವ ಕೊಂಡು ನಲವಿನೊಳು ॥ ೩೭ ॥

ಗುರುವೆ ನಾನಾಶ್ರಮದೊಳಿದರೊಳ ।
ಗಿರುತೆ ಶಿವಯೋಗದ ಸುಖದೊಳುರೆ ।
ಬೆರೆಯುತಂ ಭಕ್ತರನು ರಕ್ಷಿಪಕಾಯಕವನಿನ್ನು ॥
ಹರಿಸದಿಂ ನಡೆಯಿಸಲು ನೀನುರು ।
ಕರುಣದಿಂದಪ್ಪಣೆಯ ನೀಡೆಂ ।
ದೆರಗೆ ತತ್ಪದಪಂಕಜಕ್ಕೆ ಫಲಾಶನನು ಬಳಿಕೇ ॥ ೩೮ ॥

ಧರೆಯ ಭಕ್ತರ ಪೊರೆವ ಸಹಜದ ।
ಚರವರನ ಪರಶಕ್ತಿ ನಿನಗೈ ।
ತರುವುದೆಂದೊರೆಯುತ್ತೆ ಶಿರದೊಳು ನಿಜಕರವನಿಟ್ಟು ॥
ಪರಸಿ ವೈಗರೆದಾಶಿವನು ನಿಂ ।
ದಿರುವನೆಂದೇ ಭಾವಿಸುತೆ ವೈ ।
ಮರೆದನಧಿಕಾನಂದಪರವಶನಾಗಿ ಯೋಗಿಯು ತಾಂ ॥ ೩೯ ॥

**॥ ಮುಗಿದುದು ॥ ಒಟ್ಟು ಪದಗಳು ॥೬೯೩॥**

*

|| ಓಂ ನರಗುಂದೋಪಪತಾಪಿಭೂಪೋದ್ಧಾರಕಾಯನಮಃ ||

# ಹದಿನೇಳನೆಯ ಸಂಧಿ

---

**ಸೂಚನೆ:—** ಬಂದು ದೀಕ್ಷಿತರೊರೆದವೋಲ್ ನರ |
ಗುಂದದರಸನು ತತ್ಫಲಾಶನ |
ನಿಂದೆ ನಿಜರುಜೆಗಳೆವ ತೀರ್ಥವ ಪಡೆದನೊಲವಿಂದೇ ||

ಸರಸಕಲೆಗಂ ಕೃಷಿಗೆ ವಿದ್ಯೆಗೆ |
ಸಿರಿಗೆ ಶಾಂತಿಗೆ ಭಕ್ತಿಗುನ್ನತ |
ಕರುಣೆಗಂ ತ್ಯಾಗಕ್ಕೆ ಸುಖಭೋಗಕ್ಕೆ ತವರೆನಿಸಿ ||
ಮೆರೆಯುವುದು ನರಗುಂದವೆಸರಿನ |
ಪುರಿಯದೊರೆಗಳ ನಾಡು ಕನ್ನಡಿ |
ಗರಧರಿತ್ರೀರಮೆಯ ಹೃದಯ ಸರೋರುಹದ ತೆರದೇ || ೧ ||

ಹೊಲದ ಬೆಳೆಗಳ ಪೆಂಪು ಕೆರೆ ತೊರೆ |
ಕೊಳದ ತಡಿಗಳ ತಂಪು ತೋಟದೊ |
ಳಲರ್ದ ಪೂಗಳ ಕಂಪು ತರು ಲತೆಗಳೊಳೆಸೆವ ಸೊಂಪು ||
ಕಲಿತವರ ನುಡಿಯಿಂಪು ಧರ್ಮದ |
ಕೆಲಸವೆಸಗುವಲಂಪು ದೇವಸು |
ನಿಳಯಗಳ ಗುಂಪಿರುವುದಾನಾಡಗಲದೊಳು ನೋಡೇ || ೨ ||

ನಾಡನಾಳುವ ನೃಪರ ಪುಣ್ಯದ |
ಬೀಡೆನಿಸಿ ಜಸವೆಂಣೆರುವ ಕರು |
ಮಾಡೆನಿಸುತಂ ನಾಡಮಧ್ಯದೊಳಧಿಕ ವೈಭವದೇ ||
ನಾಡರಮೆಯಾಡುಂಬೊಲದವೋಲ್ |
ನಾಡದೇವಿಯ ತಲೆವಣಿಯವೋಲ್ |
ನಾಡೆ ಸಿಂಗರವೆತ್ತು ನರಗುಂದವದು ಶೋಭಿಪುದು || ೩ ||

ಅರಸುಗೈಯುತ್ತಿರ್ದರಾವರ |
ಪುರದೆ ಬ್ರಾಹ್ಮಣವರ್ಣದರಸರು |
ಹರಿಯನರ್ಚಿಸಿ ಹರಿಯವೋಲ್ ಲಕ್ಷ್ಮೀಮನೋಹರರು ||
ಹರನ ಭಕ್ತಿಯನಾಂತು ತಾವುಂ |
ಹರನ ತೆರದೆ ಶಿವಾಶ್ರಿತರು ಮೇಣ್ |
ಸರಸಿಜೋದ್ಭವನಂತೆ ಸರಸತಿಗಳ್ತಿಯವರೆನಿಸಿ || ೪ ||

ಆ ನೃಪರ ವರ ವಂಶಗಗನದ ।
ಭಾನುವೆನೆ ದಾದಾಜಿಯೆಂಬ ಸು ।
ನಾಮದರಸನು ಪುಟ್ಟುತನುಗುಣಸತಿಯ ಕೈವಿಡಿದು ॥
ಕ್ಷೋಣಿಯನು ರಕ್ಷಿಸುವ ಕಜ್ಜ ।
ಕ್ಕೊಣೆಯಮದಿರದಾಂತು ಸರ್ವಜ ।
ನಾನುರಾಗವನರಸು ಗೈಯುತ್ತಿರ್ದನೊಲವಿಂದೇ ॥ ೫ ॥

ಮುಪ್ಪೊಳಲನುರುಹಿದನ ಸೇವೆಗೆ ।
ತಪ್ಪದೆಯೆ ತನು ಮನವನಪ್ಪಿಸು ।
ತಪ್ಪಿ ಬೆಳ್ಗಸವೆಂಣನಾ ದಾದಾಜಿ ಭೂವರನು ॥
ಅಪ್ಪನಂತೊಲವಿಂದೆ ಸರ್ವರ ।
ತಪ್ಪ ತಿರ್ದುತ್ತಿದ್ದ ಕತದಿಂ ।
ದಪ್ಪಸಾಹೇಬೆಂಬ ಪೆಸರೇ ನಿಂದುದಾತನೊಳು ॥ ೬ ॥

ಸ್ವಾಮಿನಿಷ್ಠಾಪ್ರಜೆಗಳಿಗೆ ಸ ।
ತ್ಪ್ರೇಮಮೂರ್ತಿಗಳಾಗಿ ಶೋಭಿಸು ।
ವಾಮಹೀಧವ ದಂಪತಿಗಳನವರತಮುಂ ತಾವು ॥
ಪ್ರೇಮ ಕಮಲಾಕರದೆ ವಿಹರಿಸು ।
ವಾಮರಾಳಸುಮಿಥುನವೆನಿಸುತೆ ।
ಭೂಮಹಿತ ಗೃಹಿಧರ್ಮದೇವಿಯ ಭಕ್ತರೆನಿಸಿದರು ॥ ೭ ॥

ಇಂತು ಸಕಳೈಶ್ವರ್ಯಸುಖಗಳ ।
ನಾಂತಿರಲು ಕೆಲದಿನಗಳಿಗೆ ಜ ।
ನ್ಮಾಂತರದ ಕರ್ಮವು ಭಯಂಕರ ರುಜೆಯ ರೂಪವನು ॥
ಆಂತು ಬಂದಾಕ್ರಮಿಸಿತಾಭೂ ।
ಕಾಂತನಿಗೆ ನಾಡೊಳಗೆ ಸಲೆ ಪೆಸ ।
ರಾಂತ ವೈದ್ಯಸಮೂಹಕಂ ಪರಿಹರಿಸಲರಿದೆನಿಸಿ ॥ ೮ ॥

ನೀರಿನಂತಿರೆ ಧನವನೆನಿತೋ ।
ಸೂರೆ ಮಾಡುತೆ ತಿಂದ ಮದ್ದದು ।
ನೀರಿನೊಳು ಹೋಮವನು ಗೈದಂತಾಗಲರಮನೆಯಾ ॥
ಸೇರಿ ಜೋಯಿಸರನುದಿನಂ ಗ್ರಹ ।
ಚಾರಶಾಂತಿಯ ಗೈದೊಡಂ ಪರಿ ।
ಹಾರವಾಗದೆ ತದ್ರುಜೆಯು ಪಿರಿದಾಯ್ತು ದಿನದಿನಕೇ ॥ ೯ ॥

ನಾಡದೇವತೆಗಳಿಗೆ ಮುಡಿಪನು ।
ನೀಡಿ ನಿಜರೋಗವನು ಕಳೆಯಲು ।
ಬೇಡುತಂ ಸ್ಥೈತಿರದೆ ಸರ್ವವ್ರತನಿಯಮಗಳನು ॥
ಮಾಡುತಂ ಬಹುದಿನವ ಕಳೆದೊಡ ।
ಮಾಡಲೇನಾವ್ಯಾಧಿ ತನ್ನನು ।
ಕಾಡುವುದು ಹಿರಿದಾಗೆ ತನ್ನೃಪಗಾಯ್ತು ಕಡು ಚಿಂತೇ ॥ ೧೦ ॥

ಅರಸು ಗೈಯ್ತಕ್ಕೆಳಸನೊಡನಿ ।
ರ್ದರಸಿಯರ ಸವಿ ನುಡಿಗೆ ಕಿವಿಗೊಡ ।
ನುರೆ ಸರಸ ಸಖಗೋಷ್ಠಿಯೊಳು ಬೆರೆಯನು ದಿನಕ್ರಮದೇ ॥
ತೊರೆದನುನ್ನತವಸ್ತ್ರಭೂಷಣ ।
ಪರಿಮಳಾದಿಯ ಧರಿಸುವುದನಾ ।
ನರಪನಿಂತತಿದುಃಖದಿಂದಿರುತಿರ್ಪ ಕಾಲದೊಳು ॥ ೧೧ ॥

ಇಂಬು ಗೊಂಡಿರೆ ಮದುವೆಯಾದ ನಿ ।
ತಂಬಿನಿಯರೀರ್ವರೊಳು ಬಾಳು ಚಿ ।
ದಂಬರಾಭಿಧ ದೀಕ್ಷಿತನು ಮುರಗೋಡೊಳಿರ್ದನು ತಾಂ ॥
ಅಂಬುರುಹಪತ್ರದೊಳು ಬಿದ್ದಿರು ।
ವಂಬುವದನಂಟದವೊಲನಿಶಂ ।
ಮುಂಬರಿವ ಸುಖದುಃಖದೊಳಗಿರ್ದದನು ಸೋಂಕದೆಯೇ ॥ ೧೨ ॥

ಒಪ್ಪಿಗೆಯ ಕುಲದೈವವೆನಿಸಿದ ।
ಹಿಪ್ಪರಿಗೆ ಮಲ್ಲಯ್ಯನಡಿಗಳ ।
ನಪ್ಪಿ ಸಲೆ ಭಜಿಸುತ್ತೆ ಭಕ್ತಿಜ್ಞಾನಕರ್ಮಗಳಾ ॥
ಮುಪ್ಪುರಿಯ ಹಗ್ಗದೊಳು ಚರಿಸು ।
ತ್ತಿಪ್ಪ ಮನವನು ಕಟ್ಟಿ ತತ್ಪದ ।
ಕೊಪ್ಪಿಸುತೆ ಶಿವಸುಖದೊಳಿರ್ದನು ತಚ್ಚಿದಂಬರನು ॥ ೧೩ ॥

ಜ್ಞಾನವೃತ್ತಿಯು ಮುಖ್ಯವೆನಿಸುತೆ ।
ಗೌಣವಾಗಿರೆ ಭಕ್ತಿ ಕರ್ಮವು ।
ತಾನು ಸರ್ವಕೆ ಸಾಕ್ಷಿಯಲ್ಲದೆ ಕರ್ತೃವಲ್ಲೆಂಬಾ ॥
ಜ್ಞಾನವಾದೀಕ್ಷಿತನೊಳಪರೋ।
ಕ್ಷಾನುಭೂತಿಯನೊಂದಿರಲು ತ ।
ಜ್ಞಾನಿಗನ್ವರ್ಥಕಮದಾಯ್ತು ಚಿಂದಂಬರ ಸುನಾಮಂ ॥ ೧೪ ॥

ಒಂದಿರುವ ಗೃಹಿಯಾಶ್ರಮದೆ ತಾ ।
ನೊಂದುತಿಂತನುಭವ ಚಿದಧಿಕಾ ।
ನಂದವನು ಸಂತತವು ಫಲವೆಳಸದೆ ಸುಕರ್ಮಗಳಾ ॥
ಮುಂದುವರಿಸುತೆ ಭಕ್ತಿಯಿಂ ವಿ ।
ಪ್ರೇಂದುವಾತನು ಕಂಗೊಳಿಸುತಿಹ ।
ನೊಂದಿ ಜೀವನ್ಮುಕ್ತಿಯೆಂಬುದ ನೆನೆದು ಮನದೊಳಗೇ ॥ ೧೫ ॥

ಆ ಚಿದಂಬರರಿನ್ನು ರೋಗವಿ ।
ಮೋಚನೆಗೆ ಪೇಳುವರು ಸಲೆ ಸಮು ।
ಯೋಚಿತೋಪಾಯವನೆನುತೆ ದಾದಾಜಿ ರಾಯನು ತಾಂ ॥
ಯೋಚಿಸುತೆ ಮುರಗೋಡಿಗೈತಂ ।
ದಾ ಚತುರನುತ ದೀಕ್ಷಿತರ ವಿಮು ।
ಳಾಚರಣಪರಿಪೂತ ನಿಳಯದ ಸಂಮುಖವನೊಂದೇ ॥ ೧೬ ॥

ಕಂಡೊಡನೆ ನಲವಿಂದೆ ಬಂದಿದಿ ।
ರ್ಗೊಂಡು ಕರೆದೊಯ್ದಾ ನೃಪತಿಕುಲ ।
ಮಂಡನಂಗಾತಿಥ್ಯಮಂ ದೀಕ್ಷಿತರು ನಗೆಮೊಗದಾ ॥
ಪೆಂಡಿರೀರ್ವರೊಳಾಗಿಸಿದುದಂ ।
ಕಂಡು ತತ್ಪ್ರಭುವರಮನೆಯೊಳಂ ।
ಕಂಡುದಿಲ್ಲೀ ಬಗೆಯ ಸತ್ಕೃತಿಯೆಂದುಕೊಳೆ ಮನದೇ ॥ ೧೭ ॥

ಬಳಿಕೆ ತದ್ಭೂಕಾಂತನನು ಕಡು ।
ನಲವಿನಿಂದುಚಿತಾಸನದೊಳ್ಕೈ ।
ಸಲೆ ಬಿಡದೆ ಕುಳ್ಳಿರಿಸಿ ಯೋಗಕ್ಷೇಮಗಳ ಕೇಳ್ದಾ ॥
ವಿಲಸಿತಾತ್ಮಜ್ಞಾನತೇಜೋ ।
ವಲಯರಾದಾದೀಕ್ಷಿತರ ಪದ ।
ತಲಕೆರಗುತಾ ದೊರೆಯು ವಿಜ್ಞಾಪಿಸಿದನೀತೆರದೇ ॥ ೧೮ ॥

ಭೂನುತರೆ ನಿಮಗಿರ್ಪ ದಿವ್ಯ ।
ಜ್ಞಾನ ಚಕ್ಷುವಿಗರಿಯದಿರ್ಪುದ ।
ದೇನುಮೊಂದಿರದಲ್ತೆ ನನ್ನಯ ರುಜೆಯು ದಿನದಿನಕೇ ॥
ಕ್ಷೀಣಗತಿಗಿಳಿಸುತ್ತೆ ತಾಂ ಮ ।
ನ್ಮಾನಸಕ್ಕತಿದುಃಖವೀಯುವು ।
ದೇನುಪಾಯವು ಪೇಳ್ವುದಿದ ಪರಿಹರಿಸಿಕೊಳ್ಳುದಕೇ ॥ ೧೯ ॥

ಕ್ಷೋಣಿಯೊಡೆತನದೊಡನೆ ಭೋಗಾ ।
ಧೀನ ವನಿತಾದಿಗಳನಾಂತೊಡ ।
ಮೇನು ಫಲವಾರೋಗ್ಯ ಭಾಗ್ಯಕೆ ದೂರನಾದೆನಗೇ ॥
ಜ್ಞಾನಧನರೇ ನಿಮ್ಮನುಳಿದೊಡೆ ।
ಕಾಣರಾರಿನ್ನೆನ್ನ ರೋಗ ।
ಕ್ಕೇನು ಮದ್ದೆಂಬುದನು ತಿಳಿಸುವರೆಮ್ಮ ನಾಡಿನೊಳು ॥ ೨೦ ॥

ಎಂದು ರಾಹುಗ್ರಸ್ತ ಚಂದ್ರಮ ।
ನಂದದಾನನದರಸು ಬೇಡಲು ।
ಮಂದಹಾಸದೆ ದೀಕ್ಷಿತೋತ್ತಮರಿಂತು ವಚಿಸಿದರು ॥
ಬಂದರೋಗವ ಕಳೆವ ಯೋಗಾ ।
ನಂದಮೂರ್ತಿಯು ತಾಂ ಫಲಾಶನ ।
ದಿಂದೆ ನೆಲಸಿಹನರಳಿಕಟ್ಟಿಯ ಸನಿಯದಾಶ್ರಮದೇ ॥ ೨೧ ॥

ದೊರೆಯೆ ನೀಂ ಪೋಗುತ್ತೆ ತದ್ಗುರು ।
ವರನ ಪಾದವ ಮರೆವುಗಲು ತಾಂ ।
ಕರುಣದಿಂ ಪರಿಹರಿಸುವನು ನಿನ್ನಯ ಮಹಾರುಜೆಯಾ ॥
ಅರಿವಡಿದಕೆರಡನೆಯುಪಾಯವು ।
ದೊರೆಯದಿನ್ನಾವುದು ಮಹಾತ್ಮರ ।
ಪರಕೆಯೇ ಪರಮೌಷಧವು ನಿನಗೆಂದ ಸೂಕ್ತಿಯದು ॥ ೨೨ ॥

ನರಪತಿಯು ಕರ್ಣದೊಳಗಮೃತವ ।
ಸುರಿಸಿದಂತಿರಲೆದೆಗೆ ತಣ್ಪಾ ।
ವರಿಸಿತಿನ್ನೇನೆನಗೆ ಸಂಜೀವನ ಮಣಿಯ ನೆಲೆಯು ॥
ದೊರೆತುದೆಂದಾ ಜ್ಞಾನಯೋಗಿಯ ।
ಚರಣಕೆರಗುತೆ ಪಡೆದನುಜ್ಞೆಯ ।
ನುರು ಮುದದೆ ನರಗುಂದಕಾಗಮಿಸಿದನು ತನ್ನೃಪನು ॥ ೨೩ ॥

ಇತ್ತಲರಳಿಯಕಟ್ಟಿಯೊಳು ಮೈ ।
ವೆತ್ತ ಚರವೇಷದೊಳು ಪರಕೆಯ ।
ನಿತ್ತು ತಾಂ ಮೈಗರೆಯಲಾಗುರುಮಲ್ಲಿಕಾರ್ಜುನನು ॥
ನುತ್ಯ ಯೋಗಿಯು ಭಕ್ತರಕ್ಷಣ ।
ಕೃತ್ಯದೊಳು ತೊಡಗಿಸುತೆ ತನ್ನಯ ।
ಚಿತ್ತವನು ಗುಪ್ತಸ್ಥಿತಿಯನುಳಿದಿರ್ದನಾಶ್ರಮದೇ ॥ ೨೪ ॥

ಕ್ಷಿತಿಪತಿಯು ದಾದಾಜಿ ರಾಯನು ।
ಮಿತ ಸುಪರಿಚರರೊಡನೆ ತಳ್ತಾ ।
ಯತಿಕುಲಸ್ತುತನಾದ ಯೋಗೀಶ್ವರನ ದರ್ಶನಕೇ ॥
ಅತಿಮುದದೊಳಾಗಮಿಸುತಂ ತಾ ।
ನತಿಶಯದ ಭಯಭಕ್ತಿಯಿಂ ಸಂ ।
ಗತನೆನಿಸುತಡಿಯಿಟ್ಟನಾಪುಣ್ಯಾಶ್ರಮಸ್ಥಲದೇ ॥ ೨೫ ॥

ಉಳಿಯೆ ಗುಪ್ತಸ್ಥಿತಿಯ ಯೋಗಿಯು ।
ಬಳಿಯ ಪಳ್ಳಿಗಳವರು ಬರುತಿ ।
ನ್ನೆಳಸಿದುದ ಪಡೆವುದಕೆ ಪೊದಲಾಗಿರ್ದ ಕತದಿಂದೇ ॥
ಬಳಸಿರಲು ಭಕ್ತಾವಳಿಯು ತಾ ।
ನೆಲೆವನೆಯ ಮುಂಗಡೆಯೊಳೊಲವಿಂ ।
ಕುಳಿತಿರುವ ತದ್ಯತಿಯ ದರ್ಶನವಾದೊಡನೆ ನೃಪನು ॥ ೨೬ ॥

ಘೋರ ರೋಗದ ಬಾಧೆಯನು ಪರಿ ।
ಹಾರವೆಸಗುತೆ ನನ್ನ ಜನ್ಮೋ ।
ದ್ಧಾರಗೈಯುವ ಶಿವನ ದರ್ಶನವಾದುದೆಂದರಿದು ॥
ಭೂರಿಮುದವೈತರಲು ನವಿರುಗ ।
ಳೇರಿರುವ ಮೈಯಿಕ್ಕಿ ತತ್ಪದ ।
ವಾರಿರುಹಸನ್ನಿಧಿಯ ಸೇರಿದ ತನ್ನೃಪನ ಕಂಡು ॥ ೨೭ ॥

ಗುರುವ ಬಳಸಿದ ಭಕ್ತರಾಭೂ ।
ವರಗೆ ಸಲೆ ಕೈಮುಗಿದು ವಂದಿಸಿ ।
ಧರಿಸಿ ವಿಸ್ಮಯ ಸಂಮುದಂಗಳ ನಮ್ಮ ದೊರೆಯೆಂದು ॥
ಕಿರು ಸರದೆ ಕಿವಿಯಲ್ಲುಸುರೆ ನಾ ।
ನರಿದಿರುವೆನೆಮ್ಮರಸನೆಂಬುದ ।
ನೊರೆವುದಿನ್ನೇಕೆಂದು ನಸು ನಗೆಯಿಂ ಫಲಾಶನನು ॥ ೨೮ ॥

ಪಾದಸನ್ನಿಧಿಯೊಂದಿರುವ ತ ।
ನ್ಮೆದಿನೀವಲ್ಲಭಗೆ ತಾಂ ಪರ ।
ಮಾದರದೊಳಾಶ್ರಮಸಮುಚಿತಾತಿಥ್ಯವನು ಗೈಸೇ ॥
ಈ ದಯಾಘನನಾಶ್ರಮದೊಳಿಂ ।
ತಾದ ಸತ್ಕಾರಮಿದೆ ನನ್ನ ಶು ।
ಭೋದಯದ ಕುರುಪೆಂದು ಹಿಗ್ಗಲು ತನ್ನೃಪತಿ ಬಳಿಕೇ ॥ ೨೯ ॥

ನಾಡನಾಳುವ ಭೂವರನು ಕಾ ।
ಡಾಡಿ ಜೋಗಿಯ ನೆಲೆಗೆ ನೀಂ ಕೃಪೆ ।
ಮಾಡುತಾಗಮಿಸಿದುದು ನಿನ್ನ ಪ್ರಜೆಗಳೊಳು ನಿನಗೇ ॥
ಮಾಡಿದನುರಾಗದ ಹಿರಿಮೆಯನು ।
ನೋಡಿಸುವುದಿಂತಿರುವುದೇ ಮಿಗೆ ।
ನಾಡೆರೆಯರಿಗೆ ಭೂಷಣವು ಸರ್ವರಿಗೆ ಸಮ್ಮುದವು ॥ ೩೦ ॥

ಎಂದೊರೆಯೆ ನಗೆಗೂಡಿ ಲೋಕಸು ।
ವಂದ್ಯಯೋಗಿಯು ತತ್ಪದವ ಪಿಡಿ ।
ದೆಂದನಾ ಜನಪತಿಯು ತಂದೆಯೆ ನಿನ್ನಡಿಯ ಕೃಪೆಯಾ ॥
ಕಂದಗಿಂತಾಡುವರೆ ಮಹಿಮರ ।
ಮುಂದೆ ತೃಣಸಮುದಲ್ತೆ ಭೂಮಿಪ ।
ರಿಂದು ನಿಮ್ಮಯ ಪರಮ ಪುಣ್ಯಾಶ್ರಮಕೆ ನಾಂ ಬಂದು ॥ ೩೧ ॥

ಪಡೆದು ಪಾದದ ದರ್ಶನವ ನಾಂ ।
ಕಡಿದುಕೊಂಡಾತ್ಮೀಯ ದುರಿತವ ।
ಪಡೆದೆನಲ್ಲವೆ ಧನ್ಯತೆಯ ಮದ್ಗುರುವೆ ನನಗಿರ್ಪಾ ॥
ಪೊಡವಿಯೊಳೆ ಬೇಡಿದ ಫಲಗಂಳ ।
ಕುಡುವ ಸುರತರುವಿರಲು ಮುಳ್ಳಿನ ।
ಗಿಡುಗಳನು ಮರೆವೊಕ್ಕು ಬಳಲಿದೆನಿನ್ನೆಗಂ ನಾನು ॥ ೩೨ ॥

ಯತಿಕುಲೇಂದ್ರನೆ ಕೇಳು ನನ್ನಯ ।
ಗತಭವದ ದುಷ್ಕರ್ಮದಿಂದಾ ।
ಗತ ರುಜೆಯು ಮಂತ್ರೌಷಧವ್ರತನಿಯಮಕರಿದೆನಿಸಿ ॥
ಮತಿಗೆಡಿಸಿ ತಾನಧಿಕದುಃಖ ।
ಸ್ಥಿತಿಯೊಳಿಡೆ ಬೇಸತ್ತು ಪೊರ್ದುತೆ ।
ನುತ ಚಿದಂಬರರಡಿಯನೊರೆದೆನು ನನ್ನ ಕಷ್ಟವನು ॥ ೩೩ ॥

ಅವರು ನಿಮ್ಮಯ ನಲ್ವರಕೆ ರೋ ।
ಗವ ಕಳೆವುದೆಂದರುಹಿ ಕಳುಹಿಸೆ ।
ಭವದಮಳ ಪಾದಾಂಬುರುಹ ಸನ್ನಿಧಿಯ ಸೇರಿದೆನು ॥
ಶಿವನೆ ಕರುಣಾರ್ಣವನೆ ದುರಿತೋ ।
ದ್ಭವದ ರುಜೆಯನು ನೀಗಿ ರಕ್ಷಿಸು ।
ಕುವರನೆಂದರಿದೆನ್ನನೆಂದಾ ಭೂವರಗೆ ಬಳಿಕೇ ॥ ೩೪ ॥



ತನ್ನ ಅಸಾಧ್ಯರೋಗನಿವಾರಣಕ್ಕಾಗಿ ಮೊರೆ ಹೊಕ್ಕ ನರಗುಂದ ಮಹಾರಾಜನಿಗೆ ಶ್ರೀ ಫಲಾಹಾರೇಶನು ತೀರ್ಥಕಲಶವನ್ನು ಆಶೀರ್ವದಿಸಿದುದು.

ಮೋಕ್ಷಸಂಪದವೀಯುತಿರುವಾ ।
ದೀಕ್ಷಿತರು ತಾವುಗಳೆ ರೋಗವಿ ।
ಮೋಕ್ಷವೆಸಗದೆ ನನ್ನೆಡೆಗೆ ಕಳುಹಿಸಿದುದೇಕೆನುತೇ ॥
ಅಕ್ಷಯದ ಸುಖವಿತ್ತು ತಾಂ ರೋ ।
ಗಕ್ಷಯವ ಮಾಡುವುದು ನೀ ಫಾ ।
ಲಾಕ್ಷನಂ ನೆನೆದೀಂಟುತಿರು ಮಂತ್ರಾಂಬುವಿದನೆಂದು ॥ ೩೫ ॥

ಒರೆಯುತಾಗುರುಮೂರ್ತಿ ಪಂಚಾ ।
ಕ್ಷರಿಯೊಳಭಿಮಂತ್ರಿಸಿದ ತೀರ್ಥವ ।
ನಿರಿಸಿ ನಿರ್ಮಳ ಕಳಶವೊಂದರೊಳೀಯೆ ಭಕ್ತಿಯೊಳು ॥
ನರಪನದ ಕೈಕೊಂಡು ತದ್ಗುರು ।
ಚರಣಕೆರಗುತೆ ಪಡೆದನುಜ್ಞೆಯ ।
ತೆರಳಿದನು ನಿಜನಗರಿಗನುಗತ ಚರರೊಡನೆ ತಳ್ತು ॥ ೩೬ ॥

ಬಳಿಕೆ ಬಳಸಿದ ಭಕ್ತಸಂಕುಲ ।
ವೆಳಸಿದುದನೊಲಿದೀವ ಕಜ್ಜವ ।
ಸಲೆ ಮುಗಿಸಿ ಕಳುಹುತ್ತೆ ನಿಜ ಲಿಂಗಾರ್ಚನೆಯ ಕೃತಿಯಾ ॥
ನಲವಿನಿಂ ನಡೆಸುವುದಕಾಗುರು ।
ತಿಲಕನಾಪುಣ್ಯಾಶ್ರಮದೊಳಿ ।
ರ್ಪಲೆಯ ಕುಟಿಯೊಳವೊಕ್ಕು ಮಜ್ಜನವೆಸಗತೊಡಗಿದನು ॥ ೩೭ ॥

**॥ ಮುಗಿದುದು ॥ ಒಟ್ಟು ಪದಗಳು ॥ ೭೩೦ ॥**



॥ ಓಂ ಶರಣಾಗತರಕ್ಷಕಾಯನಮಃ ॥

# ಹದಿನೆಂಟನೆಯ ಸಂಧಿ

---

**ಸೂಚನೆ: —** ಶ್ರೀಗುರುವಿನುರುತೀರ್ಥದಿಂದಂ ।
ಪೋಗೆ ನರಗುಂದದ ಮಹೀಶನ ।
ರೋಗವಾತನು ಕಟ್ಟಿಸಿದನೊಲವಿಂದೆ ಗುರುಮಠವಾ ॥

ಗುರುವಿನಾಶ್ರಮದಿಂದೆ ನಿಜಮಂ ।
ದಿರಕೆ ಬಂದಾ ನೃಪನು ರುಜೆಯನು ।
ಪರಿಹರಿಪ ತೀರ್ಥವನು ತಂದುದ ಕುಲಪುರೋಹಿತನು ॥
ಅರಿದು ಪೇಳ್ದನು ವರ್ಣದಿಂ ಭೂ ।
ಸುರನೆನಿಸಿ ನೀನೋರ್ವ ಜೋಗಿಯ ।
ಕರದ ಜಲವೀಂಟುವುದು ಧರ್ಮವಿರುದ್ಧವೆನಿಸುವುದು ॥ ೧ ॥

ಜನರ ವರ್ಣಾಶ್ರಮದ ಧರ್ಮ ।
ಕ್ಕನಿತು ಕೊರತೆಯು ಬಾರದಂದದೊ ।
ಳನವರತಮುರೆ ಪೊರೆವ ನೀನುಮಧರ್ಮದೊಳು ನಡೆಯೇ ॥
ಗುಣಮುಖಮನೊಂದುವುದೆ ರೋಗವು ।
ಮನದೆ ನಂಬುಗೆಯಿರ್ದೊಡಾ ಜಂ ।
ಗಮನ ಜಲವನು ಸವರಿಕೊಳ್ಳೈ ನಿನ್ನ ದೇಹದೊಳು ॥ ೨ ॥

ಇಂತೊರೆದುದನು ಕೇಳ್ದು ತದ್ಭೂ ।
ಕಾಂತಗೊಗೆದುದು ವರ್ಣಧರ್ಮ ।
ಭ್ರಾಂತಿಯಿಂ ಸಂಶಯವು ಗತಭವದುರಿತಶೇಷದೆ ತಾಂ ॥
ಚಿಂತಿಸುತ್ತರೆಗಳಿಗೆ ತೀರ್ಥದೊ ।
ಳಾಂತ ಭಕ್ತಿಯನುಳಿದು ರೋಗಾ ।
ಕ್ರಾಂತ ದೇಹದೆ ಸವರಿಕೊಳಲದ ತೊರೆದು ನಿಷ್ಠೆಯನು ॥ ೩ ॥

ಉರಿಯು ರುಜೆಗೊಂಡೊಡಲನಿರದಾ ।
ವರಿಸೆ ಭಯಗೊಂಡರಸು ಕಡು ಗಾ ।
ಬರಿಯ ನಾಂತೇಗೈವೆನಿದನಾರಾರಿಸುವರೆಂದು ॥
ಮರುಗಿ ಕಂಬನಿ ಗರೆಯೆ ಗೈಯುವ ।
ಪರಿಚರರ ಶೈತ್ಯೋಪಚಾರವು ।
ಬರಿದೆನಿಸಿದುದು ನೆರೆದುದರಮನೆಯಲ್ಲಿ ಜನತತಿಯು ॥ ೪ ॥

ಶಂಕರನೆ ತಾನೆನಿಸಿರುವನಕ ।
ಲಂಕವುಹಿಮೆಯ ಯೋಗಿಯಾತನ ।
ಕಿಂಕರತ್ವವನೊಂದಿ ತಂದ ತದೀಯ ತೀರ್ಥವನು ॥
ಶಂಕೆಗೊಂಡೀಂಟದೆಯೆ ಮೈಯೊಳು ।
ಸೋಂಕಿಸಲು ತಣ್ಪೀಯದೆಯೆ ತಾಂ ।
ಬೆಂಕಿಯಾದುದು ಸಂಶಯಾತ್ಮರಿಗಮರ್ದು ಬಿಸಮಲ್ತೇಂ ॥ ೫ ॥

ಎಂದು ಗುರುಜನರುಸುರೆ ತಪ್ಪಾ ।
ಯ್ತೆಂದು ಮರುಗುತೆ ರಥದೆ ಕುಳಿತ್ತೈ ।
ತಂದು ತನ್ನೃಪನಾಚಿದಂಬರ ದೀಕ್ಷಿತರ ಕಂಡು ॥
ವಂದಿಸುತೆ ನಡೆದುದನು ವಿವರಿಸೆ ।
ನೊಂದ ಮನದಿಂದಾದ್ವಿಜೋತ್ತಮ ।
ನೆಂದನಿದು ನೀನೆಸಗಿದಪರಾಧಕ್ಕೆ ಫಲವೆಂದು ॥ ೬ ॥

ಆತನತಿವರ್ಣಾಶ್ರಮಿಯು ಸಂ ।
ಜಾತಜೀವನ್ಮುಕ್ತಿಗಾಣ್ಮನು ।
ಪೂತ ಶಿವಯೋಗೀಶ್ವರನು ತನ್ನೊಂದು ಲೀಲೆಯೊಳು ॥
ಭೂತಲವನುದ್ಧರಿಪ ಕೃತಿಯಂ ।
ಪ್ರೀತಿಯಿಂ ಕೈಕೊಂಡನಿನ್ನೆಮ ।
ಗಾತನನುಮಳಿನ ದರ್ಶನವು ಭವಶರಧಿತಾರಕವು ॥ ೭ ॥

ಆ ದಯಾಘನನಳ್ತಿಯಿಂ ಮಂ ।
ತ್ರೋದಕವನೀಯುವುದೆ ನಮ್ಮಾಶು ।
ಭೋದಯವು ತನ್ಮಂತ್ರಪೂತಾಂಬುವನು ನಾವಿನ್ನು ॥
ಆದರದೊಳೀಂಟದೊಡೆ ನಮಗುಂ ।
ಟಾದ ಭವಬಾಧೆಗಳು ತೊಲಗುತೆ ।
ಮೇದಿನಿಯ ಸುಖಸಂಪದವು ಕೈಸಾರುವುದು ದಿಟವು ॥ ೮ ॥

ಪರುಷವಣಿಯೆನಿಸಿರ್ಪ ತದ್ಗುರು ।
ಕರದೆ ಪಡೆದಾ ತೀರ್ಥವೆಂಬುದು ।
ಜರೆಮರಣರುಜೆಗಳೆವಮೃತವಲ್ಲದೆಯೆ ಜಲಮಲ್ತು ॥
ಮರುಳತನದಿಂದಿಂತು ಗೈವರೆ ।
ತೆರಳು ಜವದಿಂದೀಂಟು ಪಾವನ ।
ತರದ ತತ್ತೀರ್ಥವನು ರೋಗವಿಮುಕ್ತನಾಗುವೆಯೈ ॥ ೯ ॥

ಎಂದೊರೆದು ದೀಕ್ಷಿತರು ಕಳುಹಲು ।
ಬಂದು ತದ್ಭೂವರನು ಶುಚಿತೆಯ ।
ನೊಂದಿ ಭಕ್ತಿಯೊಳರ್ಚಿಸುತೆ ಮಂತ್ರಾಂಬುಕಲಶವನು ॥
ನಂದಿಸುತೆ ತತ್ತೀರ್ಥಪಾನವ ।
ನೊಂದೆರಡುದಿನವೆಸಗುವುದರೊಳೆ ।
ನಂದಿತುರಿ ತನುಕಾಂತಿ ಪೆರ್ಚಿತು ರುಜೆಯು ಬಯಲಾಯ್ತು ॥ ೧೦ ॥

ಕನ್ನಡಿಗರಾನ್ನೃಪನ ದೇಹವು ।
ಚಿನ್ನವಾದುದು ತದ್ಗುಣಂಗಳು ।
ರನ್ನವಾದವು ಭಕ್ತಿಭಾವೋತ್ಪನ್ನ ಮಾನಸವ ॥
ನನ್ನಿ ನಲ್ಮೆಗಳಪ್ಪಿಕೊಂಡವು ।
ತನ್ನ ಮನಕಂ ಮನೆಗೆ ನಾಡಿಗ ।
ಮಿನ್ನು ದೇವರು ತನ್ಮಹಿಮನೆಂದರಸು ನಂಬಿದನು ॥ ೧೧ ॥

ತನ್ನವರನೊಡಗೊಂಡು ಭಕ್ತಿಸ ।
ಮುನ್ನತಿಯೊಳೈತಂದು ಯೋಗಿಯ ।
ಪನ್ನಳಿನ ಧೂಳಿಯನು ತಲೆಯೊಳು ಹೊತ್ತು ಕೈಮುಗಿದು ॥
ನನ್ನ ಜನ್ಮದ ತಂದೆಯೇ ಮು ।
ಕ್ಕಂಣನೇ ನಾಂ ಗೈದ ತಪ್ಪನು ।
ಮನ್ನಿಸುತೆ ಸಲಹೆಂದು ನಿಂದಿರೆ ಸಮ್ಮುಖದೆ ದೊರೆಯು ॥ ೧೨ ॥

ಜೋಗಿಯೆಲೆವನೆಗೇಕೆ ನೀಂ ಮೇ ।
ಣಾಗಮಿಸಿದೆ ಪ್ರಭುವೆ ತನುವಿನ ।
ರೋಗದೊಡನೆ ಭವನ್ಮನೋರೋಗವನು ದೀಕ್ಷಿತರು ॥
ನೀಗಿರುವರಿನ್ನಾವುದೆಮ್ಮಿಂ ।
ದಾಗುವುದು ತಾನುಳಿದುದೆಂದನು ।
ರಾಗರಸಹಾಸದೊಳುಸುರೆ ಶಿವಯೋಗಿಗಳು ಬಳಿಕೇ ॥ ೧೩ ॥

ಸ್ವಾಮಿನೀನೊಳಗಣ್ಣೆನಿಂದಂ ।
ಭೂಮಿಯೊಳು ನಡೆದುದನು ನೋಳ್ಪ ಮ ।
ಹಾಮಹಿಮನೆಂದರಿಯೆ ನಾಂ ಕುರಿವಾನಿಸನು ದಿಟವು ॥
ಕಾಮಿತಾರ್ಥವನೀವ ನಿನ್ನಯ ।
ಭೂಮಹಿತ ಲೀಲೆಯಿದು ತಜ್ಜ್ಞಾ ।
ನಾಮೃತಾಂಬುಧಿ ದೀಕ್ಷಿತರ ಮುಖದಿಂದೆ ಗೊತ್ತಾಯ್ತು ॥ ೧೪ ॥

ತಂದೆ ನಿನ್ನಯ ಪೊನ್ನಡಿಯ ಬಳಿ ।
ಯೆಂದಿಗಂ ನಾನೀಬಗೆಯ ತ ।
ಪ್ಪೊಂದನಾದೊಡಮೆಸಗದಿರ್ಪೆನು ನೀನು ಪರಸಿರುವಾ ॥
ಕಂದನಂ ಕ್ಷಮಿಸುವುದು ಕರುಣದೊ ।
ಳೆಂದು ಮತ್ತಂ ನಮಿಸಿದಾ ರಾ ।
ಜೇಂದುವನು ಪಿಡಿದೆತ್ತಿ ಯೋಗಿಯು ಪೇಳ್ದನೀತೆರದೇ ॥ ೧೫ ॥

ನಿನಗೆ ಕೊಟ್ಟಾ ಮಂತ್ರವಾರಿಯು ।
ಘನತರದ ಗಂಗಾನದಿಯ ಪಾ ।
ವನ ಸುತೀರ್ಥಮದೆಂದು ಭಕ್ತಿಯೊಳೀಂಟದಿಹ ನಿನ್ನಾ ॥
ಮನದ ಸಂಶಯವಗ್ನಿಯಾಗುತೆ ।
ತನುವ ಸುಟ್ಟುದು ಬಳಿಕೆ ನಿನ್ನೊಳು ।
ಜನಿಸಿದಾನಂಬುಗೆಯು ರೋಗವ ಕಳೆದುದೆಲೆ ನೃಪನೇ ॥ ೧೬ ॥

ನಂಬಿ ಕೆಟ್ಟವರಿಲ್ಲ ಪೇಳ್ವುದ ।
ನಂಬದಂತಿರೆ ಬರಿದೆ ಸಂಶಯ ।
ಕೆಂಬುಗೊಟ್ಟುಳಿದವರು ಮುನ್ನಿಲ್ಲೆಂಬ ನಾಣ್ನುಡಿಯಾ ॥
ನಂಬಿ ನಡೆಯುವ ಮನುಜರಿಗೆ ತೊಡ ।
ಕೆಂಬುದಿಲ್ಲವು ನಿನ್ನೊಳಿನ್ನಾ ।
ಸಾಂಬಕೃಪೆಯಿಂ ಪುಟ್ಟಿದುದು ನಂಬುಗೆಯದಿಂತಿದಕೇ ॥ ೧೭ ॥

ಚಿಂತಿಸದಿರೆಂಬಾ ಗುರೂಕ್ತಿಯೊ ।
ಳಾಂತು ಸಮ್ಮುದವಾಮಹೀಶನು ।
ಕಂತುಹರವರಮೂರ್ತಿಯೇ ನೀನೆಮ್ಮ ರಾಜ್ಯದೊಳು ॥
ಸಂತತವು ನೆಲಸುತ್ತೆ ಭಕ್ತರ ।
ಸಂತತಿಯ ರಕ್ಷಿಸುವುದಕೆ ತ ।
ಕ್ಕಂತಿರೀನೆಲೆಯಲ್ಲಿ ಮಠವನು ಕಟ್ಟಿಸಲ್ಕೆನಗೇ ॥ ೧೮ ॥

ಕರುಣದಿಂದನುಮತಿಯನೀವುದು ।
ಹರಿಸದಿಂ ವರಮಠವ ಕಟ್ಟಿಸಿ ।
ಪರಿಹರಿಸಿಕೊಳ್ಳುವೆನು ಗೈದಪರಾಧವೆನ್ನೊಡೆಯಾ ॥
ನಿರವಧಿಕ ಭಕ್ತರ್ಕಳೆರೆದುದ ।
ಕರುಣಿಸುವ ನೀಂ ನಾನು ಯಾಚಿಪ ।
ಕಿರಿಯ ಸೇವೆಯನಿತ್ತು ನನ್ನುದ್ಧರಿಸು ಪರಮಾತ್ಮಾ ॥ ೧೯ ॥

ಎಂದು ಪಲವಂದದೊಳು ಯಾಚಿಸ ।
ಲಂದು ತದ್ಗುರುವರನು ಕಡು ನಲ ।
ವಿಂದೆ ತಲೆದೂಗುತ್ತೆ ತನ್ನೃಪಗಿಂತು ವಚಿಸಿದನು ॥
ತಂದೆಯಾದಾ ಮಲ್ಲಿಕಾರ್ಜುನ ।
ನಿಂದೆ ಮೊದಲೇ ನನ್ನಗೀನೆಲೆ ।
ಯೊಂದಿ ಭಕ್ತರ ಪೊರೆವ ಕೃತಿಗಪ್ಪಣೆಯು ದೊರೆತಿಹುದು ॥ ೨೦ ॥

ಆ ಗುರುವಿನ ಪ್ರೇರಣೆಯೆ ನಿನ ।
ಗಾಗಿರುವುದದರಿಂದೆ ಮನಸಿಗೆ ।
ತಾಗಿರುವ ಸಂಕಲ್ಪದಂತಿರೆ ಮಠವ ರಚಿಸೆಂದು ॥
ಯೋಗಿವರನೊಪ್ಪಿಗೆಯ ಕೊಡೆ ತಲೆ ।
ವಾಗಿ ವಂದಿಸಿ ಸಂತಸದ ಕಡ ।
ಲಾಗಿ ಪರಕೆಯ ಕೊಂಡು ನಿಜಪುರಿಯೊಂದಿ ದೊರೆ ಬಳಿಕೇ ॥ ೨೧ ॥

ಕರೆಸುತಂ ಕಟ್ಟಡದ ಕಜ್ಜವ ।
ನರಿದವರ ಬೇಕಾದ ವಸ್ತುವ ।
ತರಿಸುತಂ ತಾನೇರ್ಪಡಿಸಿ ಕಟ್ಟಿಸುವ ಜಾಣ್ಮೆಯೊಳು ॥
ನುರಿತ ತನ್ನಧಿಕಾರಿಗಳನಾ ।
ನರಪನವರೆಲ್ಲರನು ಕಳುಹಿಸಿ ।
ಪರಮಗುರುವಿರುವರಳಿಕಟ್ಟೆಗೆ ಕಡು ನಲವಿನಿಂದೇ ॥ ೨೨ ॥

ಕಟ್ಟಿಸುವವೊಲ್ ಪಡೆವ ಪುಣ್ಯದ ।
ಬಟ್ಟೆಗುರೆ ನೆಲಗಟ್ಟ ತಾಂ ಮೇಣ್ ।
ಕಟ್ಟಿಸುವವೊಲ್ ತನ್ನ ವಂಶದ ಬೆಳ್ಳಸದ ಗುಡಿಯಾ ॥
ಕಟ್ಟಿಸಿದನಾತ್ಮೋನ್ನತಿಯ ಸಲೆ ।
ಕೊಟ್ಟು ರಕ್ಷಿಪ ಗುರುಮಠವ ಮನ ।
ವಿಟ್ಟು ತನ್ನೃಪನೀಕ್ಷಿಪರ ಕಣ್ಮನವ ಸೆಳೆವಂತೇ ॥ ೨೩ ॥

ಬಳಿಕೆ ತನ್ನಂತಃಪುರದವರು ।
ಬಳಗದವರಧಿಕಾರಿಗಳು ನ ।
ಲ್ಗೆಳೆಯರುಂ ಪರಿಚರರು ಪುರಜನರಾದಿಯಾದವರಿಂ ॥
ನಲವಿನಿಂ ತಳ್ವಾಗಮಿಸುತಾ ।
ನೆಲದೆರೆಯನಾನೂತ್ನ ಗುರುಮಠ ।
ದೊಳವುಗುವ ಮಂಗಳಮಹೋತ್ಸವವೆಸಗತೊಡಗಿದನು ॥ ೨೪ ॥

ಇನ್ನೊರೆವೆನೇನಖಿಳ ಜನಗಳಿ ।
ಗನ್ನಸಂತರ್ಪಣವನಾಗಿಸಿ ।
ಮಾನ್ಯ ಮಾಹೇಶ್ವರ ಧರಾಸುರಮುಖ್ಯರಾದರ್ಗೆ ॥
ಉನ್ನತದ ಕನಕಾದಿ ದಕ್ಷಿಣೆ ।
ಯಿಂ ನಲವನಾಗಿಸುತೆ ಜನ್ಮಕೆ ।
ಧನ್ಯತೆಯ ಪಡೆಕೊಂಡ ಪುಣ್ಯದ ತನ್ನೃಪನು ಬಳಿಕೇ ॥ ೨೫ ॥

ಸುರುಚಿರದ ತನ್ಮಠದ ಕೃತಿಗಳ ।
ನಿರುತಮೈಸಲೆ ನಡೆಯಿಸುವುದಕೆ ।
ನೆರವನೀಯಲು ತಕ್ಕ ಭೂಮೀದಾನಶಾಸನವ ॥
ಬರೆದು ನಿಜಗುರುವರನ ಪಾವನ ।
ಚರಣಕರ್ಪಿಸಿ ಬರೆದುಕೊಂಡನು ।
ಮರು ಭವವು ತನಗಿಲ್ಲವೆಂಬುದನೆದೆಯೊಳಾ ದೊರೆಯು ॥ ೨೬ ॥

ಪೊಕ್ಕಿರಲು ಮಂಗಳ ಸುವಾದ್ಯದ ।
ಮಿಕ್ಕ ನಿನದವು ದಿಗ್ವಲಯದೊಳು ।
ಪೊಕ್ಕು ತಾನುಕ್ಕುತ್ತಿರಲು ಮುದರಸವು ಸರ್ವರೊಳು ॥
ಇಕ್ಕೆ ಪಾದವ ಗುರುವು ಬೆನ್ನೊಳಿ ।
ಪೊಕ್ಕನಾದೊರೆ ಮುಕ್ತಿಲಕ್ಷ್ಮಿಯು ।
ಬೊಕ್ಕಸದೆ ಪೊಕ್ಕಂತೆ ನೆರೆದವರೊಡನೆ ಮಠದೊಳಗೇ ॥ ೨೭ ॥

ಸುರುಚಿರದ ನವಮಠದ ಮಧ್ಯದೆ ।
ವಿರಚಿಸಿದ ಭದ್ರಾಸನದೆ ಕು ।
ಳ್ಳಿರಿಸಿದಾಶಿವವಿಮಳತೇಜೋಭಾಸುರನ ಗುರುವಾ ॥
ವರಚರಣದಿಂ ಶಿರದವರೆಗಂ ।
ಪರಿಮಳಿತ ನವಸುಮಗಳಿಂ ಸಿಂ ।
ಗರಿಸಿ ತೆಂಗಾಯ್ಗಳನೊಡೆದು ಕಪ್ಪುರವನುರಿಗೊಳಿಸಿ ॥ ೨೮ ॥

ಕೂಡಿರುವ ಜನನಿವಹಮಿರದೀ ।
ಸಾಡುತಂ ಸಂತಸದ ಕಡಲೊಳು ।
ಪಾಡುತಿರೆ ಮಂಗಳಸುಗೀತಗಳನು ನೃಪೋತ್ತಮನು ॥
ಕೂಡಿದತಿಭಕ್ತಿಯೊಳು ಗುರುವಿಗೆ ।
ನಾಡೆ ಶುಭದಾರತಿಯ ಬೆಳಗುತೆ ।
ನೀಡಿದನು ಮಸ್ತಕವ ತತ್ಪರಮಾತ್ಮ ಪಾದಕ್ಕೇ ॥ ೨೯ ॥

ಉಳಿದವರು ಸಾಷ್ಟಾಂಗವಂದನೆ ।
ಗಳನೆಸಗೆ ನೃಪಮುಖ್ಯರಿಗೆ ತಾಂ ।
ಕುಳಿತುಕೊಳ್ಳಲು ಪೇಳ್ದು ತದ್ಗುರುವಿಂತು ವಚಿಸಿದನು ॥
ನೆಲದೆರೆಯ ನೀನಾಳುವಿಳೆಯೊಳು ।
ನೆಲಸುತಂ ಮತ್ಕೃತ್ಯವೆಸಗಲು ।
ಸಲೆ ಸಮುರ್ಪಕವಾದ ನೂತನ ಮಠವ ಕಟ್ಟಿಸಿ ನೀಂ ॥ ೩೦ ॥

ಇರಿಸಿಕೊಂಡೈ ಸೂರ್ಯಚಂದ್ರವು ।
ರಿರುವವರೆಗಂ ಲೋಕದೊಳು ನಿನ ।
ಗಿರುವ ಸಾರ್ಥಕದಪ್ಪಸಾಹೇಬೆಂಬ ನಲ್ಪೆಸರಾ ॥
ನರಪತಿಗಳಿಂತಿಳೆಯ ಭಕ್ತರ ।
ಪೊರೆವ ಕಾಯಕವಾಂತು ನನ್ನಂ ।
ತಿರುವರಿಗೆ ನೆರವೀಯುವುದು ನೃಪಕಾರ್ಯದೊಳು ಹಿರಿದು ॥ ೩೧ ॥

ಆದೊಡಿನ್ನಾಲಿಸು ನೃಪನೆ ನೀಂ ।
ಮೇದಿನಿಯೊಳಿರ್ಪೆಲ್ಲರುಂ ನಾ ।
ವಾ ದಯಾಘನ ಶಿವನ ದಾಸ್ಯವನೊಂದಿ ಕೃತಿಗಳನು ॥
ಆದರದೆ ಗೈಯುವುದು ತತ್ಕೃತಿ ।
ಗಾದ ಫಲಕೆಳಸದೆಯೆ ಸುಖ ದುಃ ।
ಖಾದಿ ಯುಗ್ಮದೆ ಸಮತೆಯೊಂದುತೆ ಕರ್ಮಯೋಗವಿದು ॥ ೩೨ ॥

ದೊರೆಯೆ ನಿನ್ನಂ ಪ್ರಜೆಗಳನು ಸಲೆ ।
ಪೊರೆವ ಕಜ್ಜದೊಳಿರಿಸಿದಂತಿರೆ ।
ಧರೆಯ ಭಕ್ತರ ಭಕ್ತಿಯಂ ರಕ್ಷಿಸುವ ಕಾಯಕದೇ ॥
ಪುರಹರನು ನನ್ನಿರಿಸಿರುವನಿದ ।
ನರಿದು ತತ್ಪರಮಾತ್ಮಪದಕಿಂ ।
ಕರರೆನಿಸಿ ಮಿಗೆ ಮಾಡವೇಳ್ಕುಂ ನಮ್ಮ ಕೃತ್ಯಗಳಾ ॥ ೩೩ ॥

ಮಾಡುವರು ನಾವೆಂಬಹಂಕೃತಿ ।
ಮೂಡಿದೊಡನೆಯೆ ನಮ್ಮ ಬೆಂಗೊಂ ।
ಡೋಡಿ ಬರುತಂ ಕಾಡುವವು ಸುಖದುಃಖಗಳು ನಿರುತಂ ॥
ಮಾಡಿಸುವ ಶಿವನೆಮ್ಮ ಭಾವವ ।
ನೋಡುತದಕನುಗುಣದ ಫಲವನು ।
ನೀಡುವನು ಕರ್ತವ್ಯವಾತನಿಗಿದು ಧರಾಧಿಪನೇ ॥ ೩೪ ॥

ತಿಳಿದು ಕರ್ಮರಹಸ್ಯವಿದನ್ನೈ ।
ಸಲೆ ಭವತ್ಕೃತಿಯೆಸಗಿ ಕೀರ್ತಿಯ ।
ಗಳಿಸಿ ಶಿವನಿಂ ಭೋಗ ಮೋಕ್ಷವ ಪಡೆದು ಸುಖಿಸೆಂದು ॥
ನಲವಿನಿಂ ಪರಸುತ್ತೆ ನೃಪತಿಗೆ ।
ಬಳಿಕೆ ಸರ್ವರಿಗುಚಿತ ವಚನಂ ।
ಗಳೊಳು ಪರಕೆಯನಿತ್ತನಾಶಿವಯೋಗಿಪುಂಗವನು ॥ ೩೫ ॥

ಆಗಳಾಭೂವರನು ನೀಂ ಪಿತೃ ।
ವಾಗಿ ಮೇಣ್ ಗುರುವಾಗಿ ಪರಶಿವ ।
ನಾಗಿ ನನಗಿಂತೊಲಿದು ಬೋಧಿಪಕೃಪೆಯ ಗೈದುದರಿಂ ॥
ನೀಗಿತೆನ್ನಜ್ಞಾನವೆಲೆ ಭವ ।
ರೋಗವೈದ್ಯನೆ ನಿನ್ನ ಶಿಷ್ಯನೆ ।
ಆಗಿರುವ ನಾಂ ಗೈವ ಕೃತಿಗಳ ಕರ್ತೃವೇ ನೀನು ॥ ೩೬ ॥

ಎಂದು ನಿರಹಂಕಾರಭಾವವ ।
ನೊಂದಿ ರಾಜ್ಯದ ಕಾರ್ಯವೆಲ್ಲವ ।
ಮುಂದುವರಿಸುವೆನಯ್ಯ ನೆನೆಯುತೆ ನಿಮ್ಮ ನಾಮವನು ॥
ಎಂದು ಪುನರಭಿವಂದನವ ಗೈ ।
ದಂದು ತನ್ನೃಪನಾತ್ಮನಗರಿಯ ।
ನೊಂದಿದನು ತನ್ನವರೊಡನೆ ಬೀಳ್ಕೊಡಲು ಗುರುವರನು ॥ ೩೭ ॥

ಬಳಿಕೆ ಭಕ್ತರನೆಲ್ಲರನು ತಾಂ ।
ಕಳುಹುತಂ ನಿಜಮಠದ ಪೂಜಾ ।
ನಿಳಯದೊಳು ವರಲಿಂಗಪೂಜೆಯ ಸಕ್ರಮದೆ ಗೈದು ॥
ನಿಲಿಸಿ ದಿಟ್ಟಿಯನಿಷ್ಟಲಿಂಗದ ।
ಬೆಳಗಿನೊಳು ಮೈಮರೆದು ಕುಳಿತನು ।
ಚಲನೆಯಿಲ್ಲದೆ ಜಾನಸೊಗದೊಳು ಶಿವನೆ ತಾನಾಗಿ ॥ ೩೮ ॥

**॥ ಮುಗಿದುದು ॥ ಒಟ್ಟು ಪದಗಳು ॥ ೭೬೮ ॥**



॥ ಓಂ ಗಂಗೋದ್ಭವಲೀಲಾಯನಮಃ ॥

# ಹತ್ತೊಂಬತ್ತನೆಯ ಸಂಧಿ

**ಸೂಚನೆ:—** ತೆರಳ್ದು ಸಾಲಾಪುರಕೆ ತದ್ಗುರು ।
ವರನು ಗಂಗೋದ್ಭವ ಸುಲೀಲೆಯ ।
ನೆರೆ ನೆಗಳ್ದು ಮರಳಿದನು ತನ್ನಯ ಮಠಕೆ ನಲವಿಂದೇ ॥

ಅರಳಿಕಟ್ಟೆಯೊಳಾಫಲೋದನ ।
ಚರಕುಲೇಂದ್ರನ ನವಮಠಂ ಶ್ರೀ ।
ಗಿರಿಯ ಸುಕ್ಷೇತ್ರದ ತೆರದೆ ಯಾತ್ರಾಸ್ಥಲವದೆನಿಸೇ ॥
ತೆರಪುಗುಡದಂತನುದಿನದೊಳಂ ।
ಬರುವ ಭಕ್ತರ ನಿವಹಕಾನೆಲೆ ।
ಕಿರಿದೆನಿಸಿತೇನೊರೆವೆನಾಮಹಿಮನ ಸುಲೀಲೆಗಳಾ ॥ ೧ ॥

ದಿಟ್ಟಿಸಲು ಗುರುವಳಿಯುವುದು ರುಜೆ ।
ಮುಟ್ಟೆ ಕಣ್ಗಳ ಮಬ್ಬು ಹರಿವುದು ।
ಕೊಟ್ಟ ಭಸಿತವ ಧರಿಸಿದೊಡೆ ಬಡತನವದಡಗುವುದು ॥
ನೆಟ್ಟನಡಿದೊಳೆದಂಬುವೀಂಟಲು ।
ಬಿಟ್ಟು ಪೋಪುದು ಬಡಿದ ಭೂತವು ।
ಹುಟ್ಟುವರು ಸತ್ಪುತ್ರರಾಮಹಿಮನ ಕೃಪಾಬಲದೇ ॥ ೨ ॥

ಅಡಿಯಿಡಲು ನೆಲೆಗಳು ಪವಿತ್ರವು ।
ನುಡಿದುದೆಲ್ಲವು ದಿಟವು ಕೈಯಿಂ ।
ಕೊಡುವುದೆಲ್ಲ ಮಹಾಪ್ರಸಾದವು ಮನದೆ ನೆನೆದೊಡವೇ ॥
ಪೊಡವಿಯೊಳು ಮೈವೆತ್ತು ನಿಲುವುದು ।
ಕಡು ದಯದೆ ನಸು ನೋಡೆ ಜನ್ಮದ ।
ಜಡರು ಪೋಪುದು ತನ್ಮಹಾಯೋಗಿಯ ಮಹಿಮೆಯೆಂತೋ ॥ ೩ ॥

ಎಂದು ಕೊಂಡಾಡುತ್ತೆ ಭಕ್ತರ ।
ವೃಂದವೈತಂದಿಷ್ಟ ಫಲಗಳ ।
ನೊಂದಿ ಪೋಗುತ್ತಿರಲದೋರ್ವನು ಮುಗ್ಧನಾಗಮಿಸಿ ॥
ತಂದೆ ನನ್ನಯ ಗೃಹದೆ ಪುಟ್ಟ ।
ರ್ದಂದಿನಿಂ ಮೊಲೆಯುಣದೆಯೆಳೆ ಗರು ।
ಕುಂದುತಿರ್ಪುದ ನೋಡಲಾರೆನು ಮಾಳ್ಪುದೇನಯ್ಯಾ ॥ ೪ ॥

ತಿದ್ದಿ ಮಾಡಿರಿಸಿದವ್ರೊಲಿರ್ಪಾ ।
ಮುದ್ದು ಬಸವನು ಹಾಲು ಕುಡಿಯಲು ।
ಮುದ್ದು ಕೊಡು ರುಜೆಗಳೆದು ಬೆಳೆದೊಡೆ ಕೊಡುವೆನದ ನಿಮಗೇ ॥
ಬುದ್ಧಿ ನಿಮ್ಮಯ ಲಿಂಗದರ್ಚನೆ ।
ಗಿದ್ದ ಸಾಮಗ್ರಿಗಳ ಹೊರುವುದ ।
ಕಿದ್ದರೊಳ್ಳಿತು ನಿಮ್ಮ ದೇಶಾಟನದ ಕಾಲದೊಳು ॥ ೫ ॥

ಇಂತು ಮುಗ್ಧನು ಹೊರಗಿಡಲು ತ ।
ನ್ನಂತರಂಗದ ದಿಟದ ಬಯಕೆಯ ।
ಶಾಂತಮೂರ್ತಿಯು ಮೆಚ್ಚುತಾತನ ಸಹಜಸರಳತೆಗೇ ॥
ಚಿಂತಿಸದೆ ನೀಂ ಪೋಗು ನೀನೆಂ ।
ದಂತೆ ಮಾಡೆನಗಿಷ್ಟವದು ಕರು ।
ಸಂತಸದೆ ಪಾಲುಣುತೆ ವರ್ಧಿಸುತಿರುವುದೀ ದಿನದಿಂ ॥ ೬ ॥

ಎಂದು ಪರಸುತೆ ಕಳುಹೆ ಮುಗ್ಧನು ।
ಬಂದು ತಾಯಿಯ ಬಳಿಗೆ ಕರುವನು ।
ತಂದು ನಿಲ್ಲಿಸೆ ಕುಡಿದುದದು ಮಲೆವಾಲನತಿಮುದದೇ ॥
ಅಂದಿನಿಂ ಬಲಗೊಂಡ ವೈಕ ।
ಟ್ಟಿಂದೆ ವರ್ಧಿಸತೊಡಗಿ ನುಣ್ಪೆಳ ।
ಗಿಂದೆ ತಳ್ತುದು ಮುಟ್ಟಿದರೆ ಮಾಸುವವೊಲೊಪ್ಪಿದುದು ॥ ೭ ॥

ಹರಿಸಗಡಲೊಳು ಮುಳುಗಿ ಮಗ್ಧನು ।
ಗುರುಮಠಕೆ ತಕ್ಕವನು ತಾಂ ಸುಂ ।
ದರಮುಖದ ಬಸವಣ್ಣನಿವನೆಂದಾ ಕರುವ ತನ್ನಾ ॥
ಹರಣದಂತಿರೆ ಪೊರೆಯುತಂ ಮು ।
ದ್ಗುರುಧನವಿದೆಂದಳ್ತಿಮಿಗೆ ತಾ ।
ನೊರೆಯುತಿರ್ದನು ಮನೆಯವರಿಗೂರವರಿಗಂ ನಿರುತಂ ॥ ೮ ॥

ಬಳಿಕೆ ಸಾಲಾಪುರದ ಭಕ್ತಾ ।
ವಳಿಯು ಮಠಕೈತಂದು ತದ್ಗುರು ।
ತಿಲಕನಡಿದಾವರೆಗೆ ವಂದಿಸುತಿಂತು ಬೇಡಿದುದು ॥
ಅಲಘು ಮಹಿಮಾಸ್ಪದನೆ ನಮ್ಮೂ ।
ರೊಳಗೆ ಸವಿನೀರಿನ ಕೊರತೆಯಿಂ ।
ಬಳಲುವೆವು ನೀನಾಗಮಿಸುತಡಿಯಿಟ್ಟ ನೆಲೆಯಲ್ಲಿ ॥ ೯ ॥

ತೋಡೆ ಬಾವಿಯನಲ್ಲಿ ಮಧುರತೆ ।
ಗೂಡಿದುದಕವು ದೊರೆವ ನಂಬಿಕೆ ।
ಮೂಡಿರುವುದೆಮ್ಮಲ್ಲಿ ನೀಂ ದಯಮಾಡಿಸುವುದೆಂದು ॥
ಬೇಡಲೊಲಿದೊಪ್ಪುತ್ತೆ ಮಠವನು ।
ನೋಡಿಕೊಳ್ಳಲು ಸುವ್ಯವಸ್ಥೆಯ ।
ಮಾಡಿ ತಚ್ಛರವರನು ಹೊರಟನು ಭಕ್ತರೊಡಗೂಡಿ ॥೧೦॥

ಗುರುವರನು ದಯಮಾಡಿಸುವನೆಂ ।
ದರಿದು ಸಾಲಾಪುರದೊಳಿನ್ನುಳಿ ।
ದಿರುವ ಭಕ್ತರು ಸಂಭ್ರಮದೆ ಮಂಗಳ ಸುವಾದ್ಯದೊಳು ॥
ಬರುವ ಪಥಕಿದಿರ್ವಂದು ಕುಸುಮೋ ।
ತ್ಕರವಿಲಸಿತಾಂದೋಲನದೊಳಾ ।
ಪರಮ ಮೂರ್ತಿಯ ಕುಳ್ಳಿರಿಸಿ ಜಯಘೋಷವೆಸಗುತ್ತೇ ॥೧೧॥

ನೆರೆ ಮಹೋತ್ಸವದೊಡನೆ ಕರೆತಂ ।
ದಿರಿಸುತಂ ತಮ್ಮೂರ ಮಠದೊಳ ।
ಗೆರಗುತಂ ತತ್ಪಾದಪದ್ಮಕೆ ಮಂಗಳಾರತಿಯಾ ॥
ಸರಸಗೀತೆಗಳೊಡನೆ ಮಾಡಲು ।
ಪರಮಹರ್ಷಿತನಾಗಿ ತದ್ಗುರು ।
ನೆರೆದವರ ಕುಳ್ಳಿರಿಸುತವರಿಗೆ ಬೋಧಿಸಿದನಿಂತು ॥ ೧೨ ॥

ಗುರುಚರರ್ಕಳೊಳಿಟ್ಟ ನಿಮ್ಮಯ ।
ವರಮಭಕ್ತಿಯ ನಿಷ್ಠೆಯಿದು ತಾಂ ।
ಸುರಮಹೀಜಮದೆನಿಸಿ ಸಂಕಲ್ಪಿಸಿದ ವರಫಲವಾ ॥
ತ್ವರಿತದಿಂದೀಯುವುದು ಸಂಶಯ ।
ಪರರೆನಿಸದೆಯೆ ನೀವು ಪಡೆದೀ ।
ಪರಿಯ ನಂಬುಗೆಗಿನ್ನಸಾಧ್ಯವದಾವುದೆನಿಸುವುದು ॥ ೧೩ ॥

ಭುಕ್ತಿ ಮುಕ್ತಿಗಳೊಲಿದು ನೀಡುವ ।
ಭಕ್ತಿ ಮಾತೆಯ ಪುತ್ರರೆನಿಸಿದ ।
ಭಕ್ತರೆಸಗುವ ಕೃತಿಯು ನಿಷ್ಫಲಮಾಗದೆಂದಿರುವಾ ॥
ಸೂಕ್ತಿಯೇ ಸನ್ಮಂತ್ರವಿದರಾ ।
ಸಕ್ತಿ ಪೆರ್ಚುಗೆ ನಿಮ್ಮೊಳೆಂದನು ।
ರಕ್ತಿಮಿಗೆ ಬೋಧಿಸುತೆ ತನ್ಮಹಿಮಾತ್ಮನಾಬಳಿಕೇ ॥ ೧೪ ॥

ಮನೆಮನೆಗಳೊಳ್ ಗ್ರಾಮದೆಲ್ಲರು ।
ಮನವೆಳಸಿದಡಿಗೆಯನು ಗೈದದ ।
ಸನಿಹದಲ್ಲಿರ್ಪೊಂದು ಹಳ್ಳದ ತಡಿಗೆ ಕೊಂಡೊಯ್ದು ॥
ಜನರಿಗೆಲ್ಲರಿಗುಣಬಡಿಸುತಂ ।
ತಣಿಸುವೀಗಣಪರ್ವವನು ನಾ ।
ಳಿನ ದಿನದೆ ಸಲೆ ನಡೆಸಬೇಕೆಂದುಸುರಲದ ಕೇಳ್ದು ॥ ೧೫ ॥

ನೆರೆದ ಜನರೊಳಗೋರ್ವ ಭಕ್ತನು ।
ಗುರುವರನೆ ಕೇಳೆಮ್ಮ ಹಳ್ಳಿಯ ।
ಪರಿಸರದ ಹಳ್ಳದೊಳು ಮಳೆಗಾಲದೊಳಗಲ್ಲದೆಯೇ ॥
ದೊರೆಯುವುದು ದುರ್ಲಭವು ನೀರಿನ ।
ದರುಶನಮದಂತಿರ್ಪತಾಣಕೆ ।
ತೆರಳ್ದು ಗಣಪರ್ವವನು ಗೈಯುವುದೆಂತು ಸಮನಿಪುದು ॥ ೧೬ ॥

ವಿನಯದಿಂದಿಂತೆಂದ ಭಕ್ತಗೆ ।
ಮಿನುಗೆ ಕಿರುನಗೆ ಯೋಗಿ ಪೇಳ್ದನು ।
ಮನದ ಮುಡಿಯಿಂ ಗೈಯೆ ಗಣಪರ್ವವನು ನಾವಲ್ಲಿ ॥
ಜನಿಸುವಳು ಹಳ್ಳದೊಳು ಗಂಗಾ ।
ಜನನಿಯೆನಲದಕೆಲ್ಲರಚ್ಚರಿ ।
ಯನು ತಳೆದು ಗುರುವೆಂದುದೇ ವರವೆಂದು ಸಲೆ ನಂಬಿ ॥ ೧೭ ॥

ಎಲ್ಲರಾ ಗುರುವಾಜ್ಞೆಗೊಪ್ಪುತೆ।
ಸಲ್ಲಲಿತಮನರಾಗುತಾತನ ।
ಮೆಲ್ಲಡಿಗೆ ವಂದಿಸುತೆ ಮಠದೊಳು ಪೂಜೆ ಮೊದಲಾದ ॥
ಎಲ್ಲ ಕಜ್ಜಕ್ಕನುಗೊಳಿಸುತಿ ।
ನ್ನಲ್ಲಿ ಕೆಲರಾ ಸ್ವಾಮಿ ಸೇವೆಗೆ ।
ನಿಲ್ಲಲುಳಿದವರೂರ ಮನೆ ಮನೆಗಳಿಗೆ ನಡೆತಂದು ॥ ೧೮ ॥

ಉಸುರೆ ಮರುವಗಲಿನೊಳು ಸರ್ವರು ।
ಮೆಸಗುವಾ ಗಣಪರ್ವದುತ್ಸವ ।
ವಿಷಯವನು ವನಿತಾಜನರು ನಿಜಪಾಕವಸ್ತುಗಳಾ ॥
ಅಸಮ ಮುದದಿಂ ಸಂಗ್ರಹಿಸುತಂ ।
ನಿಶೆಯೊಳೆಚ್ಚರವಿರ್ದು ನಿದ್ರಾ ।
ವ್ಯಸನಮಂ ತೊರೆದೆಸಗಿದರು ಪೊಸಪರಿಯಡಿಗೆಗಳನು ॥ ೧೯ ॥

ಕರಿಗಡುಬು ಹೋಳಿಗೆಯೆ ಮೊದಲಾ ।
ಗಿರುವ ಸವಿಯುಣಿಸುಗಳ ಮತ್ತಂ ।
ತರತರದ ಕಾಯ್ಪಲ್ಲೆಗಳ ವಿವಿಧಾನ್ನಗಳ ಗೈದು ॥
ಇರಿಸಿ ಹೆಡಗೆಗಳಲ್ಲಿ ಶುಭ್ರಾಂ ।
ಬರವ ಹೊದಿಸುತೆ ಹೊತ್ತು ಶುಚಿಯಿಂ ।
ತೆರಳತೊಡಗಿದರಬಲೆಯರು ರವಿಯುದಯವಾದೊಡನೇ ॥ ೨೦ ॥

ತರತರದ ನಲ್ವಣ್ಣದುಡಿಗೆಯ ।
ನುರೆ ಧರಿಸಿದಾಗಂಡುಹೆಣ್ಗಳ ।
ಹಿರಿಕಿರಿಯ ಗುಂಪುಗಳು ಹಳ್ಳದ ತಡಿಗಳೆರಡರೊಳು ॥
ನೆರೆದುಸವಿಸವಿಯುಣಿಸುಗಳ ತುಂ ।
ಬಿರುವ ಪೆರ್ಬುಟ್ಟಿಗಳ ಸಾಲ್ಗೊಂ ।
ಡಿರಿಸಿ ಗುರುವಿನ ಬರವಕಾಯುತ್ತಿರಲರಳ್ದ ಮನದಿಂ ॥ ೨೧ ॥

ಪಾದಚಾರಿಗಳಾಗಿ ಪೂಜ್ಯಸು ।
ವಾದರೈತರುತಿರಲು ಬಳಸಿ ಸು ।
ಮೋದದಿಂ ಜಯಘೋಷವೆಸಗುತೆ ಬರುವ ಜನರೊಡನೇ ॥
ಸ್ವಾದು ಜಲಮಂ ಕುಡಿವ ವರ ಪು ।
ಣ್ಯೋದಯಂ ನಮ್ಮೂರವರಿಗಿ ।
ನ್ನಾದುದೆಂದುರೆ ಹಿಗ್ಗಿ ಹಳ್ಳದ ತಡಿಯೊಳಿರ್ದವರು ॥ ೨೨ ॥

ಅಂದು ಸರ್ವರು ನಲವಿನಿಂದಿದಿ ।
ರ್ವಂದು ವಂದಿಸೆ ಹಳ್ಳದೊಂದೆಡೆ ।
ಯೊಂದಿ ತದ್ಗುರುವೆರಡು ತೆಂಗಾಯ್ಗಳನೊಡಿಸಿ ಬಳಿಕೇ ॥
ನಿಂದ ನೆಲೆಯಿಂ ಮುಂದುವರಿಯಲು
ಮಂದಗಾಮಿನಿಯಾಗಿ ಗಂಗೆಯು ।
ಬಂದಳಾತನ ಬೆನ್ನೊಳೇ ಹಳ್ಳದೊಳಗುದ್ಭವಿಸಿ ॥ ೨೩ ॥

ನೆರೆದವರು ವಿಸ್ಮಯ ಸುಮೋದಾ ।
ಕರರೆನಿಸಿ ಹರಿವಮಳವಾರಿಯ ।
ನೆರೆ ನಿರೀಕ್ಷಿಸಿ ಜನನಿ ಗಂಗಾದೇವಿ ಜಯವೆಂದು ॥
ಕರಸುತಾಡನದೊಡನೆ ಗೈಯುವ ।
ಪರಮ ಹರ್ಷದ ರವಮುದೆಣ್ದೆಸೆ ।
ವರಿಯೆ ಗುರುಪರಮಾತ್ಮನೆಲ್ಲರಿಗೊರೆದನೀತೆರದೇ ॥ ೨೪ ॥



ಶ್ರೀ ಫಲಾಹಾರೇಶನು ಸಾಲಾಪುರದ ಹಳ್ಳದಲ್ಲಿ ಗಂಗೋದ್ಭವಲೀಲೆಯನ್ನು ಮಾಡಿದುದು.

ಈಗಳಿಲ್ಲಿಂ ಗುಪ್ತಗಾಮಿನಿ ।
ಯಾಗಿ ಮುನ್ನೆಲೆಯಲ್ಲಿ ಮೇಣ್ ಸೊಗ ।
ಸಾಗಿ ಗಂಗಾದೇವಿ ಹರಿಯುತ್ತಿರ್ಪಳನವರತಂ ॥
ನೀಗಿರೆಲ್ಲರು ಚಿಂತೆಯನು ನಿಮ ।
ಗಾಗಿ ಕೃಪೆಯಿಂ ಪುಟ್ಟಿದೀ ತಾ ।
ಯ್ಗಾಗಿಸುತೆ ಪೂಜೆಯನು ಗಣಪರ್ವವನು ನಡೆಸುವುದು ॥ ೨೫ ॥

ಎಂದೊಗೆದ ತದ್ವಚನಸುಧೆ ಕಿವಿ ।
ಯೊಂದಿ ಪರಮಾನಂದವಾಗಿಸೆ ।
ನಿಂದ ನೆಲೆಯಿಂ ಗುರುವಿಗಂ ನವಗಂಗೆಗಂ ನಮಿಸಿ ॥
ತಂದು ಪೂಜಾವಸ್ತುವೆಲ್ಲವ ।
ಮುಂದೆ ಪುಣ್ಯಾಸುರಸದ ಲಹರಿಯ ।
ಚಂದದಿಂ ಪ್ರವಹಿಸುವ ನಿರ್ಮಳ ಜಲದ ಬಳಿವಂದು ॥ ೨೬ ॥

ಏರುವಾ ಗುರುಭಕ್ತಿಯೊಡನೆದೆ ।
ಗೇರೆ ಜಲಸಂಪ್ರಾಪ್ತಿ ಸಮ್ಮುದ ।
ವೇರೆ ಮಂಗಳವಾದ್ಯರವಮೆಣ್ದೆಸೆಯೊಳೂರವರು ॥
ಭೂರಿ ಸಂಭ್ರಮದಿಂದೆ ಪೂಜಿಸಿ ।
ವಾರಿದೇವಿಯ ಗೈದು ಮಂಗಳ ।
ದಾರತಿಯ ನ್ಯೈಯಿಕ್ಕಿದರು ತನ್ಮಾತೆಗಾಬಳಿಕೇ ॥ ೨೭ ॥

ಪಡೆದು ತದ್ಗುರುವರ ಸಮಾಜ್ಞೆಯ ।
ಕಡು ಮುದದೆ ಗಣಪರ್ವವೆಸಗಲು ।
ತೊಡಗಿ ಜಲದಿಂ ತುಂಬಿ ಹರಿಯುವ ಹಳ್ಳದಿರ್ತಡಿಯೊಳ್ ॥
ಸಡಗರದೆ ಕೆಲತರುಣರೋರ್ವರ ।
ಬಿಡದೆ ಸರ್ವರ ಕುಳ್ಳಿರಿಸಿ ತಾ ।
ವೆಡೆಯ ಮಾಡಿದರೂರವರು ತಂದುಣಿಸುಗಳ ಬಳಿಕೇ ॥ ೨೮ ॥

ಮಂಗಳಾಕರಮಾದ ತತ್ಪರ ।
ಜಂಗಮಾಂಘ್ರಿಗೆ ಮಾಡುತಂ ಸ ।
ನ್ಮಂಗಳಾರತಿಯೆಸಗಿ ಸಾಂಷ್ಟಾಂಗದ ಸುವಂದನೆಯಾ ॥
ಹಿಂಗದೊಲವಿಂ ಜಯು ನಮಶ್ಶಿವ ।
ಲಿಂಗಹರಜಯವೆಂದು ಘೋಷಿಪ ।
ಮಂಗಳಧ್ವನಿಯೊಡನೆ ಮೊದಲಾಯ್ತವರ ಭೋಜನವು ॥ ೨೯ ॥

ಸವಿಯುಣಿಸುಗಳನುಂಡು ಹಳ್ಳದ ।
ಸವಿಯುದಕವನು ಕುಡಿದು ಜನತೆಯು ।
ಸವೆಯದುನ್ನತ ತೃಪ್ತಿಯಿಂ ತಳ್ತಿರುವುದನು ಗುರುವು ॥
ಎವೆಯಲುಗುದೀಕ್ಷಿಸುತೆ ತಾಂ ತ ।
ನ್ನವರಿಗಾದಾ ತಣಿವಿನಿಂದಮೆ ।
ತವೆ ತಣಿದನಾತನೆ ಜಗನ್ಮಯನಾದ ಶಿವನಲ್ತೇಂ ॥ ೩೦ ॥

ಜನತೆಗಿಂತನ್ನದೊಳು ತೃಪ್ತಿಯು ।
ಜನಿಸುವುದೆ ಗಣಪರ್ವವೆಂಬುದ ।
ಜನರಿಗೆರೆಯುತೆ ತಾನಿರುವ ಮಠಕವರನೊಡಗೊಂಡು ॥
ಘನಮುದದೊಳೈತಂದು ಸರ್ವರ ।
ಮನದೆ ಭಕ್ತಿಯ ನಿಷ್ಠೆ ನೆಲೆಗೊ ।
ಳ್ವನುಪಮದ ಬೋಧೆಯನು ಗೈಯುತ್ತಿರ್ದು ಕೆಲದಿನವು ॥ ೩೧ ॥

ಬಳಿಕೆ ಸಂಭ್ರಮದಿಂದೆ ಭಕ್ತಾ ।
ವಳಿಯು ಬೀಳ್ಕೊಡೆ ನಲವಿನಿಂ ಗುರು ।
ತಿಲಕನರಳಿಯಕಟ್ಟಿಯಾ ನಿಜಮಠಕೆ ಬಂದುದನು ॥
ತಿಳಿದೊಡನೆ ಮೊದಲಂತೆ ಬಯಸಿದ ।
ಫಲವ ಪಡೆಯಲು ನಾಡವರ ಸಂ ।
ಕುಲವು ಭಕ್ತಿಯೊಳೈತರುವ ಪದ್ಧತಿಯು ಘನವಾಯ್ತು ॥ ೩೨ ॥

ಪರಮ ಗುರುವಿನ ದೃಷ್ಟಿಪಾತದೆ ।
ಕೊರಡುಗಳು ಕೊನರಿದವು ಮೇಣ್ ತ ।
ತ್ಕರವು ಸೋಂಕಲು ಬರಡುಗಳು ಪಾಲ್ಗರೆಯ ತೊಡಗಿದವು ॥
ಒರೆವ ತನ್ಮಂತ್ರವನು ಜಪಿಸು ।
ತ್ತಿರುವ ಕುರುಡರು ಕಣ್ಬಡೆದರಾ ।
ಪರಮನಡಿಯಿಟ್ಟವರ ಮನೆಯೈಸಿರಿಗೆ ತವರಾಯ್ತು ॥ ೩೩ ॥

ಯೋಗಿವರಸಂಕಲ್ಪಶಕ್ತಿಯೊ ।
ಳಾಗದುದು ತಾನೊಂದುಮಿಲ್ಲೆಂ ।
ದಾಗಮಿಸಿ ತನ್ಮಠಕೆ ಕೆಲರು ಗೃಹಸ್ಥರೀಧರೆಯಾ ॥
ಭೋಗದೊಳು ವಿರತಿಯನು ತಳೆದವ ।
ರಾಗಿ ಮೋಕ್ಷವ ಪಡೆವ ಸ ಸು ।
ನಾಗುರುವಿನಿಂ ಬೇಡಲಾತನು ನುಡಿದನೀತೆರದೇ ॥ ೩೪ ॥

ನಾಗಕಂಕಣದಯದೆ ಗೃಹಿಗಳಿ ।
ಆಗಿರುವ ನಿಮಗೇಕೆ ಭೂಮಿಯ ।
ಭೋಗದೊಳು ವೈರಾಗ್ಯವಾದುದು ಸಮುಚಿತಮಿದಲ್ತು ॥
ತ್ಯಾಗಪೂರ್ವಕವಾದ ಭೋಗವೆ ।
ಯೋಗವೆನಿಸುವುದೀಪಥವೆ ಶಿವ ।
ಯೋಗವಿದನೊಂದಿರಲು ಜೀವನ್ಮುಕ್ತಿಯಾಗುವುದು ॥ ೩೫ ॥

ಕೇಳಿರಾಶಿವಯೋಗಮಾರ್ಗವ ।
ಪೇಳುವುದು ವರವೀರಶೈವವು ।
ತಾಳಿರುವ ಜೀವನದೆ ಜೀವನ್ಮುಕ್ತನೆನಿಸುತ್ತೇ ॥
ಬಾಳುವುದನೊರೆಯುವ ಕತದೆ ತಾಂ ।
ಮೇಲೆನಿಸಿತಂ ಲೋಕಧರ್ಮದ ।
ಕೀಲೆನಿಸಿ ಮೆರೆಯುವುದು ತಲ್ಲಿಂಗಾಂಗಿಮತಪಥವು ॥ ೩೬ ॥

ಶಿವನ ಕೃಪೆಯಿಂ ತನ್ಮತದೊಳು ।
ದ್ಭವಿಸಿರುವ ನಿಮಗೀಪಥದ ತ ।
ತ್ವವನು ವಿವರಿಸೆ ಭೋಗವಿರತಿಯ ಭಾವವಳಿಯುವುದು ॥
ಭುವಿಯ ಭೋಗವು ನನ್ನದೆಂದನು ।
ಭವಿಸಲದು ಸುಖದುಃಖರೂಪದೆ ।
ಭುವಿಯವರ ಕಾಡುವುದು ತನ್ಮಮಕಾರಭಾವವನು ॥ ೩೭ ॥

ತೊರೆಯುವುದು ತಾಂ ತ್ಯಾಗಮಿನ್ನೀ ।
ಧರೆಯ ಭೋಗವು ನನ್ನದಲ್ಲವು ।
ಪುರಹರನ ಕರುಣಾಪ್ರಸಾದಮದೆಂದರಿದು ನಿರುತಂ ॥
ಹರಿನಿಗರ್ಪಿಸಿ ಶೇಷಮಂ ಮಿಗೆ ।
ಹರಿಸದಿಂದನುಭವಿಪ ಭೋಗವ ।
ನೊರೆಯುವರು ತತ್ತ್ಯಾಗಪೂರ್ವಕ ಭೋಗವೆಂದಿದನು ॥ ೩೮ ॥

ಭೋಗವಿದ ಶಿವನೊಡನೆ ತಳ್ತುಪ ।
ಭೋಗಿಸುವ ನಿರ್ಮಮತೆಯೇ ಶಿವ ।
ಯೋಗವಿದರಿಂ ಲಭಿಪ ಚಿರಶಾಂತಿಯೆ ಸುಮುಕ್ತಿಯದು ॥
ಆಗಮೋಕ್ತದ ತತ್ವವಿದನಾ ।
ಶ್ರೀಗುರುವು ನಿಮಗೊಲಿದು ದೀಕ್ಷೆಯ .
ದಾಗುವಾಗಳೆ ತಾಂ ಕರುಣದಿಂ ಬೋಧಿಸಿಹನಲ್ತೇ ॥ ೩೯ ॥

ಇಂತು ಗುರುಬೋಧೆಯನು ನೀವಿರ ।
ದಾಂತೊಡಂ ತದ್ಗುರಚರರ ಮುಖ ।
ದಿಂ ತಿಳಿಯುತಿದರನುಭವದ ಮಾರ್ಗವನು ನೀವಿನ್ನು ॥
ಸಂತತಂ ನಡೆಯುವುದು ವಿರತಿ ।
ಭ್ರಾಂತಿಯಂ ತ್ಯಜಿಸುವುದು ನಿಮ್ಮಯ ।
ದಂಪತೀಧರ್ಮದೊಳೆ ಮುಕ್ತಿಯ ಶಾಂತಿ ದೊರೆಯುವುದು ॥ ೪೦ ॥

ವೀರಶೈವದೊಳಿಲ್ಲವಾಸಂ ।
ಸಾರಿ ಸನ್ಯಾಸಿಗಳ ಭೇದವು ।
ವೀರಶೈವರು ಸರ್ವರುಂ ನಿಜಲಿಂಗಪತಿಯೊಡನೇ ॥
ಸಾರಸಾಧ್ವಿಯರಾಗಿ ಶಿವಸಂ ।
ಸಾರಸುಖದೊಳಗಿರುತಮಾತ್ಮೋ ।
ದ್ಧಾರಮಾರ್ಗಮನಿದನು ಬೋಧಿಸುತಿರ್ಪರನ್ಯರಿಗೇ ॥ ೪೧ ॥

ಎಂದು ವಿವರಿಸಿದುದನು ಕೇಳ್ದಾ ।
ನಂದಪರವಶರಾಗಿ ವಿರತಿಯ ।
ನೊಂದಿ ಬಂದಾ ವೀರಶೈವಗೃಹಸ್ಥರಾಶಿವಗೇ ॥
ವಂದಿಸುತೆ ಬೋಧೆಯಿದು ನಮ್ಮಯ ।
ಮಂದಮತಿಯನು ಕಳೆದುದಳ್ತಿಯ ।
ತಂದೆಯೇ ಧನ್ಯತೆಯನೊಂದಿದೆವೆಂದು ಕೊಂಡಾಡೇ ॥ ೪೨ ॥

ಬಳಿಕೆ ಯೋಗೀಶ್ವರನು ಪರಸುತೆ ।
ಕಳುಹುತವರನು ಕಾದಿರುವ ಮ ।
ತ್ತುಳಿದವರಿಗಂ ಬೇಡಿದಿಷ್ಟವು ಫಲಿಸುವಂದದೊಳು ॥
ಸುಲಭಪಥಗಳನೊರೆದು ಕಳುಹಿಸಿ ।
ನಲವಿನಿಂ ಲಿಂಗಾರ್ಚನೆಯ ಸುಖ ।
ದೊಳಗೆ ಬೆರೆದಿರುತಿರ್ದನಾತನು ತನ್ನ ಮಠದೊಳಗೇ ॥ ೪೩ ॥

**॥ ಮುಗಿದುದು ॥ ಒಟ್ಟು ಪದಗಳು ॥೪೧೧॥**



॥ ಓಂ ಶ್ರೀಗುರುಬಸವಲಿಂಗಾಯನಮಃ ॥

# ಇಪ್ಪತ್ತನೆಯ ಸಂಧಿ

---

**ಸೂಚನೆ:—** ಚರಿಸುತಂ ಗುರು ಪರಸಿಯುದುಪುಡಿ ।
ಯರಸಿಗಂ ತೊರಗಲ್ಲದೊರೆಗಂ ।
ಪರಿಹರಿಸಿದನು ಶಾಪಜನ್ಮವನೋರ್ವನಿಗೆ ಕೃಪೆಯಿಂ ॥

ದಿವಸವೊಂದರೊಳುದಯಕಾಲದೆ ।
ಶಿವಸಮರ್ಚನೆ ಗೈದು ಯೋಗಿಯು ।
ಶಿವಮಯದ ಮಠದಂಗಣದೆ ತಿರಿಗಾಡುತಿರೆ ಕಂಡು ॥
ತವಕದಿಂದೈತಂದು ಭಕ್ತರ ।
ನಿವಹವಾತನ ಪದಕೆರಗಿ ತ ।
ಮ್ಮವಸರದ ಹೊಲಗೆಲಸಕಿರದಾಗಮಿಪ ಸಮಯದೊಳು ॥ ೧ ॥

ಹೊಳೆಯೆ ಬೆಳ್ಳಿಯ ಕೋಡಣಸು ಮೆ ।
ಲ್ಲುಲಿಯನಾಂತಿರೆ ಕೊರಳಗೆಜ್ಜೆಯು ।
ಚೆಲುವನಪ್ಪಿದ ಮೊಗದೆ ನಿಡುಗಣ್ಣೆದ್ದು ಕಾಣುತಿರೇ
ನಲವಿನಿಂ ಬೀಸುತ್ತೆ ಬಾಲವ ।
ಬಳಿಗೆ ಬರುತಿರೆ ಕಿರುವರೆಯವನು ।
ತಳೆದ ಬಸವನು ತಳ್ತು ಬೆಂಗೊಂಡೊಡೆಯನಿಂ ನೋಡಿ ॥ ೨ ॥

ಹೊಲಗೆಲಸವನು ಮರೆದು ನಿಲ್ಲುತೆ ।
ಬಿಳಿಯ ಬಣ್ಣದ ಬಸವನಾ ಕಡು ।
ಚೆಲುವನಳ್ತಿಯೊಳೀಕ್ಷಿಸುತ್ತಿರೆ ಭಕ್ತವೃಂದವದು ॥
ನಲವು ಮಿಗೆ ಗುರುವರನು ತಾನೇ ।
ಬಳಿಗೆ ಬರುತಂ ತದ್ವೃಷಭನನು ।
ಸಲೆ ಪಿಡಿದು ಬೆನ್ನಿನೊಳು ವರಹಸ್ತವನೆಳೆಯೆ ಬಳಿಕೇ ॥ ೩ ॥

ಒರೆವೆನೇನಚ್ಚರಿಯ ವೃಷಭನು ।
ಗುರುವ ಬಲಗೊಂಡಾತನಂಘ್ರಿಗೆ ।
ಶಿರವ ಬಾಗಿಸೆ ಕೋಡಹಿಡಿದೆತ್ತುತ್ತೆ ತದ್ಯತಿಯು ॥
ಹರಿಸದಿಂ ಬಸವಣ್ಣನೇ ನಿನ ।
ಗಿರುವ ಪಶುದೇಹದೊಳೆ ನೀನಾಂ ।
ತಿರುವೆಯೈ ಮಾನವರ ಭಕ್ತಿಜ್ಞಾನಸಂಪದವಾ ॥ ೪ ॥

ಮರುಭವದೆ ನರತನುವ ಧರಿಸುತೆ ।
ಗುರುಚರರ್ಕಳ ಸೇವೆಯೆಸಗುತೆ ।
ಪರಮ ಭಕ್ತಿಯೊಳಿರ್ದು ಮುಕ್ತಿಯನೊಂದು ನೀನೆಂದು ॥
ಪರಸೆ ನೋಡುವ ಭಕ್ತರೀತನ ।
ವರದ ಹಸ್ತಸ್ಪರ್ಶದಿಂದೀ ।
ಪರಿಯ ತಿಳಿವನು ಪೊರ್ದಿ ಬಸವನು ಪಡೆದನೀಫಲವಾ ॥ ೫ ॥

ಎಂದುಕೊಳುತಂ ಸ್ವಾಮಿಲೀಲೆಯೊ ।
ಳೊಂದಿ ಸಮ್ಮುದ ವಿಸ್ಮಯಂಗಳ ।
ಬಂದು ಮತ್ತಾ ಗುರುವಿನಡಿಗವರೆರಗೆ ಮುಗ್ಧನು ತಾಂ ॥
ತಂದೆ ನಿನ್ನಯ ವಸ್ತುವಿದ ನಾಂ ।
ತಂದು ಸನ್ನಿಧಿಗೀಗಳೊಪ್ಪಿಸು ।
ತೊಂದಿದೆನು ನಿಶ್ಚಿಂತೆಯೆಂದೆರಗಿದನು ತತ್ಪದಕೇ ॥ ೬ ॥

ಇನ್ನೆಗಂ ನೀ ಸಲಹಿದೀ ಬಸ ।
ವಣ್ಣನೇಂ ಸಾಮಾನ್ಯನೇ ಮು ।
ಕ್ಕಂಣನೇರುವ ನಂದಿಗೆಣೆಯಿಾತನನು ಪೊರೆದುದರಿಂ ॥
ನಿನ್ನ ಜನ್ಮವು ಸಾರ್ಥಕವು ಕೇ ।
ಳಣ್ಣ ನಿನ್ನಯ ಮನೆಯು ಸಂಪದ ।
ದುನ್ನತಿಗೆ ತವರಾಗುವುದು ದಿಟವೆಂದು ಮುಗ್ಧನಿಗೇ ॥ ೭ ॥

ಪರಕೆಗೊಟ್ಟಾತನನು ಕಳುಹುತೆ ।
ವರಮಠದೆ ಹೋರಿಯನು ಸಲೆ ಕ ।
ಟ್ಟಿರಿಸಿ ದಿನದಿನದಲ್ಲಿ ತಾನೇ ಮೇವು ನೀರುಗಳ ॥
ಹರಿಸದಿಂದಂ ನೋಡಿಕೊಳುತಂ ।
ಪೊರೆಯ ತೊಡಗಿದನಿಂತು ಕೂರ್ಮೆಯು ।
ಪಿರಿದೆನಿಸಿತಾವಿರತಿಮೂರ್ತಿಗೆ ಮುದ್ದು ಬಸವನೊಳು ॥ ೮ ॥

ಪ್ರತಿದಿನದೊಳೈತರ್ಪ ಭಕ್ತರ ।
ವಿತತಿ ಗುರುಪದದರ್ಶನವ ಗೈ ।
ದತಿಮುದದೊಳಾವೃಷಭಚರಣವ ಮುಟ್ಟಿ ವಂದಿಸುವಾ ॥
ವ್ರತವು ಸುಸ್ಥಿರಮಾದುದೆಲ್ಲರ ।
ನುತಿಗೆ ತಕ್ಕವನಾದನಾ ಸ ।
ನ್ಮತಿಯ ಬಸವನು ನೋಡೆ ಕಲ್ಯಾಣದ ಬಸವನೆನಿಸಿ ॥ ೯ ॥

ಇಂತಿರಲು ಬಂದನು ಬಸಂತನು ।
ಸಂತರಂತಿರೆ ಲೋಕದವರಿಗೆ ।
ಸಂತಸವನೆಸಗುತ್ತಲಿನ್ನಾ ಮಧುಸಮಯದಲ್ಲಿ ॥
ಶಾಂತಮೂರ್ತಿ ಫಲೋದನನು ಮಠ ।
ದಿಂ ತೆರಳಲೆಳಸಿದನು ಭಕ್ತರ ।
ಸಂತತಿಯು ಪೊರೆವೊಂದು ಕಜ್ಜಕೆ ಮಾರಿ ಮಾನಸವಾ ॥ ೧೦ ॥

ಗುರುವರನ ಪಯಣವನು ತಿಳಿದೊಡ ।
ನರಳಿಕಟ್ಟಿಯ ಭಕ್ತರೈತಂ ।
ದೆರಗಿ ತತ್ಪದಕಾವ ತಾಣಕೆ ಪೋಗುವುದು ಶಿವನೇ ॥
ಬರುವ ಸೇವಕರಾರು ತೆರಳುವ ।
ಪರಿಯದಾವುದು ಬಂಡಿಯೊಳು ಕು ।
ಳ್ಳಿರಿಸಿ ಬೀಳ್ಕೊಡುವೆವು ಕೃಪಾಬ್ಧಿಯೆ ಕೊಡುವುದನುಮತಿಯಾ ॥೧೧॥

ಎನೆ ಗುರುವು ಸುಲಿಪಲ್ಲಕಾಂತಿಯು ।
ಮಿನುಗೆ ಪೇಳ್ದನು ಸೇವಕರನೊ ।
ಲ್ಲೆನು ತೆರಳುವೆನು ಕಾಲ್ನಡಿಗೆಯೊಳೆ ನಮ್ಮ ಬಸವನು ತಾಂ ॥
ಮನವೆಳಸಿದೆಡೆಗೆನ್ನ ಕರೆದೊ ।
ಯ್ವನು ಬಿಡುವುದೀಚಿಂತೆಯನು ನೀ ।
ವೆನುತೆ ಕಂಟಲೆಯಲ್ಲಿ ಪೂಜಾವಸ್ತುಗಳ ತುಂಬಿ ॥ ೧೨ ॥

ಹೇರಿದೊಡನೆಯೆ ಬಸವನೆಳಸಿದ ।
ದಾರಿಯೊಂದನು ಹಿಡಿಯೆ ಸಮ್ಮುದ ।
ವಾರಿಧಿಯೆ ತಾನಾಗಿ ಬೆನ್ನೊಳೆ ತೆರಳೆ ತದ್ಗುರುವು ॥
ವೀರವಿರತಿಯಮೂರ್ತಿಯಾತನ ।
ದಾರ ಮಾತನು ಗಣಿಸನೆಂಬುದ ।
ನೂರವರು ತಿಳಿದಿರ್ದ ಕಠದಿಂದೊಂದಿ ಮೌನವನು ॥ ೧೩ ॥

ಯೋಗಿ ಪೋದಾ ಪಥದ ಕಡೆ ತಲೆ ।
ವಾಗಿ ವಂದಿಸಿ ಹಿಂತಿರುಗುತಿ ।
ನ್ನಾ ಗುರುವು ಮಠದೊಳಗೆ ಮುಂಡಿಸುತಿರ್ದ ಗದ್ದುಗೆಗೇ ॥
ಪೋಗಿ ನಮಿಸುತೆ ಮಠವ ನಿರ್ಮಲ ।
ವಾಗಿರಿಸಿಕೊಂಡಾಯತೀಶ್ವರ ।
ನಾಗಮುನವನೆ ಕಾಯ್ದುಕೊಂಡಿರುತಿರ್ದರೂರವರು ॥ ೧೪ ॥

ಆಗಳಾಬಸವಣ್ಣನೊಡನಾ ।
ಯೋಗಿ ಪಯಣಂಗೊಂಡು ಮಾರ್ಗದೊ ।
ಳಾಗುತಿರ್ಪಾ ಹಳ್ಳಿಗರ ಸೇವೆಗಳ ಕೈಕೊಂಡು ॥
ಪೋಗೆ ಕೆಲದೂರಕ್ಕೆ ಬಸವನು ।
ಸಾಗದೆಯೆ ತಾಂ ನಿಂದನುರೆ ಸೊಗ ।
ಸಾಗಿ ತೋರುವ ಚಂದ್ರಗಿರಿಯ ಪ್ರಾಂತದಟವಿಯೊಳು ॥ ೧೫ ॥

ಅಲ್ಲಿ ಸನಿಹದ ಗಿರಿವನದ ತರು ।
ವಲ್ಲಿಗಳು ಫಲಕುಸುಮವಿಸರಸ ।
ಮುಲ್ಲಸಿತಮಾಗಿರೆ ಖಗಂಗಳು ಕಲರವದೆ ಗುರುವಾ ॥
ಅಲ್ಲಿ ನೆಲಸಲು ಕರೆಯುವಂತಿರೆ ।
ಮೆಲ್ಲೆಲರು ತಣ್ಪಾಂತು ಬರುತಿ ।
ನಲ್ಲಿರುವ ವರಪುಷ್ಕರಿಣಿಯನು ಸೂಚಿಸುತ್ತಿರಲು ॥ ೧೬ ॥

ಇದು ಶಿವಾರ್ಚನೆಗುತ್ತಮುಸ್ಥಳ ।
ವಿದೆ ನಿಮಿತ್ತವು ಬಸವನಿಲ್ಲಿಯೆ ।
ಮುದದೆ ನಿಲ್ವುದಕೆಂದು ತಿಳಿಯುತೆ ತಚ್ಚರಾಧಿಪನು ॥
ಪೊದವು ಮಿಗೆ ನಡೆತರಲು ಶೋಭಿಸಿ ।
ದುದು ನಗುವ ತಾವರೆಯ ಕುಲಕಾ ।
ಸ್ಪದವೆನಿಸಿ ಹೊಕ್ಕರಣೆಯಾ ಗಿರಿವನದ ಮಧ್ಯದೊಳು ॥ ೧೭ ॥

ಜನರಹಿತದಾನೆಲೆಯೊಳಿಂತಾ ।
ವನರಮೆಯ ಮಣಿಮುಕುರದಂತಿರೆ ।
ಮಿನುಗುತಿರೆ ಪುಷ್ಕರಿಣಿಯದ ಬಳಸಿರುವ ಪೂಪೊದರು ॥
ಮನವ ಸೆಳೆದುದು ಲಿಂಗಪೂಜೆಗೆ ।
ತನಗೆ ತಕ್ಕೆಡೆಯಾಗಿ ತೋರ್ದುದು ।
ಬನದೊಳೆಳೆವುಲ್ಲೆನಿತೊ ಬಸವನು ಮೇಯಲೊಪ್ಪಿದುದು ॥ ೧೮ ॥

ಸೆಳೆಯೆ ಬನಸಿರಿಯಿಂತು ತಾಂ ಮಂ ।
ಡಲಸಮಯಮಲ್ಲಿರ್ದು ಲಿಂಗದ ।
ವಿಲಸಿತಾನುಷ್ಠಾನಮಂ ಗೈಯುವುದ ನಿಶ್ಚಯಿಸಿ ॥
ಇಳುಹುತಂ ಕಂಟಲಿಯ ಬಸವನ ।
ಕಳುಹುತಂ ಮೇಯುವುದಕಾಗುರು ।
ವೆಲೆವನೆಯ ರಚಿಸಿದನು ಪುಷ್ಕರಿಣಿಯ ಸಮೀಪದೊಳು ॥ ೧೯ ॥

ನಿಂದು ಮಡಿಯುಟ್ಟಾಯ್ದು ತರುತಂ ।
ಚಂದಚಂದದ ಪತ್ರಪುಷ್ಪವ ।
ಗಂಧಮುಖ್ಯಾರ್ಚನಸುವಸ್ತುವನೇರ್ಪಡಿಸಿ ಗುರುವು ॥
ಬಂದು ಭದ್ರಾಸನದೆ ಮಂಡಿಸು ।
ತಂದು ತಾಂ ಪ್ರಾರಂಭಿಸಿದನಾ ।
ನಂದದಾನುಷ್ಠಾನಮಂ ಪರ್ಣದ ಕುಟೀರದೊಳು ॥ ೨೦ ॥

ತೊರೆಯುತಶನಾದಿಗಳ ಬಯಕೆಯ ।
ಜರೆದು ನಿತ್ಯಾನಂದದೊಳು ಮೈ ।
ಮರೆದು ನಿಜಲಿಂಗಾಂಗಯೋಗಸಮಾಧಿಯೊಳಗಿರ್ಪಾ ॥
ಪರಮಪಾವನನಾತನಂಗಂ ।
ಸ್ಫುರಿಸಿದುದು ಶಿವತೇಜದಿಂದಾ ।
ವರಿಸಿ ತಿಳಿಜೊನ್ನದೊಳು ಮಾಡಿದ ಮೂರ್ತಿಯಂದದೊಳು ॥ ೨೧ ॥

ಮಂಡಲದವರೆಗಿಂತು ಪರ್ಣದ ।
ಮಂಡಪದೊಳಾಮಹಿತತೇಜನ ।
ಖಂಡಯೋಗಾನಂದದೊಳಗಿರಲಾತನಿದಿರಲ್ಲಿ ।
ಮಂಡೆಯಲುಗಿಸದೀಕ್ಷಿಸುತೆ ಬಳಿ ।
ಗೊಂಡು ಕಾಯುವ ಬಸವನೆಸೆದನು ।
ಖಂಡಪರಶುವಿನಿದಿರ ನಂದೀಶ್ವರನ ಮಾಳ್ಕೆಯೊಳು ॥ ೨೨ ॥

ಅರಳಿಕಟ್ಟೆಯ ಮಠದ ಯೋಗೀ
ಶ್ವರನು ಬಂದಾ ಚಂದ್ರಗಿರಿಯಾ ।
ಪರಿಸರದ ಬನದಲ್ಲಿ ನೆಲಸಿಹನೆಂಬ ವಾರ್ತೆಯದು ॥
ನೆರೆಯ ಹಳ್ಳಿಗಳಲ್ಲಿ ಪಸರಿಸೆ ।
ಬರತೊಡಗಿದರು ಭಕ್ತರಾ ನೆಲೆ ।
ಪರಮ ಪುಣ್ಯಸ್ಥಲವೆನಿಸಿತಾಮಹಿಮನಿರುವುದರಿಂ ॥ ೨೩ ॥

ಎಳಸಿದಂತಿರೆ ಲಿಂಗಸಂಗಿಯ ।
ವಿಲಸಿತಾನುಷ್ಠಾನವಿಂತಾ ।
ನೆಲೆಯೊಳಗೆ ಮುಗಿವನಿತರೊಳೆ ಯಾತ್ರಾಸ್ಥಲಮದಾಗೇ ॥
ತಿಳಿಯುತಿದನುದುಪುಡಿಯಹಲ್ಯಾ ।
ಮಳಿನರಾಜ್ಞಿಯು ಬಂದು ತದ್ಗುರು ।
ತಿಲಕನಿಂದಿಷ್ಟಾರ್ಥಸಿದ್ಧಿಯ ಪಡೆದು ಭಕ್ತಿಯೊಳು ॥ ೨೪ ॥

ಸಲಿಸೆ ಕಾಣಿಕೆಯಾಗಿ ತಂದಿ ।
ರ್ದಲಘುಧನಕನಕಾದಿಗಳ ನಿ ।
ರ್ಮಳಚರಿತ್ರಂಗಾತನಾ ವಸ್ತುಗಳನೆಲ್ಲವನು ॥
ಬಳಿಗೆ ಬರುತಿಹ ಬಡಜನಂಗಳಿ ।
ಗೊಲವಿನಿಂ ಕೊಟ್ಟುದನು ರಾಣಿಯು ।
ಸಲೆ ನಿರೀಕ್ಷಿಸಿ ತದ್ವಿರತಿಭಾವಕ್ಕೆ ತಾನೊಪ್ಪಿ ॥ ೨೫ ॥

ಕೆಲದಿನಗಳಲ್ಲಿದ್ದು ತದ್ಗುರು ।
ತಿಲಕನಳ್ತಿಯ ಬಸವನಿಗೆ ತಾ ।
ನೆಳೆಯ ಹುಲ್ಲನು ತಂದು ಮೇಯಿಸಿ ನೀರ್ಗುಡಿಸಿ ಮೈಯಾ ॥
ತೊಳೆದು ಪೂಜಿಪ ಸೇವೆಯನು ಕೈ ।
ಕೊಳುತೆ ದಾಸೀಭಾವವನು ತಾಂ ।
ತಳೆದು ರಾಜ್ಞೀಪದದಹಂಕಾರವನು ತೊರೆದಿರಲು ॥ ೨೬ ॥

ಇಂತು ನಿರಹಂಕಾರಭಾವದೆ ।
ಸಂತಸದೊಳಾವೃಷಭಸೇವೆಯ ।
ನಾಂತಿರುವ ರಾಣಿಗೆ ಗುರೂತ್ತಮನೊಲಿದು ಕೃಪೆಯಿಂದೇ ॥
ಸಂತತಂ ಪ್ರಜೆಗಳನು ತನುಭವ ।
ರಂತೆ ರಕ್ಷಿಸುತಿರ್ದು ಮುಕ್ತಿಯ ।
ಶಾಂತಿಸುಖವನು ಪಡೆವ ನಿಷ್ಕಾಮದ ಸುಕರ್ಮವನು ॥ ೨೭ ॥

ಅರುಹೆ ಧನ್ಯತೆಯೊಂದಿ ರಾಣಿಯು ।
ಪರಮ ಶಿಷ್ಯಳೆ ಆಗಿ ಮುಂದೆ ।
ನ್ನರಮನೆಯ ಸದ್ಗುರುವೆ ತಾನೀ ಮಹಿಮನೆಂದರಿದು ॥
ಪರಕೆಗೊಂಡಾ ಯೋಗಿವರನಿಂ ।
ತೆರಳಿದಳು ನಿಜಪುರಿಗೆ ನಿಜಗುರು ।
ಚರಣ ಸಂಸ್ಮರಣವನು ನೆಲೆಗೊಳಿಸುತ್ತೆ ಹೃದಯದೊಳು ॥ ೨೮ ॥

ಬಳಿಕೆ ಸಿಂಧೇಹೋಳಕರ ಸ ।
ತ್ಕುಲದ ಲಕ್ಷ್ಮಣರಾವನೆಸರಿನ ।
ನೆಲದೆರೆಯನಾವಿಲಸಿತದ ತೊರಗಲ್ಲು ಪೊಳಲಿಂದೇ ॥
ಕೆಲಸುಪರಿಚರರೊಡನೆ ತಳ್ತಾ ।
ಜ್ವಲಿತ ತೇಜೋಮೂರ್ತಿದರ್ಶನ ।
ಕೆಳಸಿ ಬಂದನು ತತ್ಪವಿತ್ರಸ್ಥಲಕೆ ಕಡು ನಲವಿಂ ॥ ೨೯ ॥



ಶ್ರೀ ಫಲಾಹಾರೇಶನು ಚಂದ್ರಗಿರಿಯ ಸಮೀಪದ ಪರ್ವತದಲ್ಲಿ ಲಿಂಗಾನುಷ್ಠಾನಕ್ಕೆ ಕುಳಿತಾಗ ಉದುತುಡಿಯ ರಾಣಿಯು ಆತನ ಕಂಟಲಿ ಬಸವನ ಸೇವೆಯನ್ನು ಮಾಡಿ ಕೃತಾರ್ಥಳಾದುದು.

ಕಂಡೊಡನೆ ಗುರುಮುಖದ ತೇಜೋ ।
ಮಂಡಲವನರಳಿರ್ದ ನಿಜಹೃ ।
ತ್ಪುಂಡರೀಕದೆ ಮೇಲ್ವರಿಯೆ ವರಭಕ್ತಿಮಧು ತುಂಬಿ ॥
ಮಂಡೆಯಿಟ್ಟಾ ಮಹಿಮನಡಿಯೊಳು ।
ಕೊಂಡು ಕೊನೆಯುತೆ ಮಣಿದು ತಾಂ ಬಳಿ ।
ಗೊಂಡು ನಿಂದಿರೆ ತನ್ನೃಪತಿ ಕೈಮುಗಿದು ವಿನಯದೊಳು ॥ ೩೦ ॥

ಎಲೆ ದೊರೆಯೆ ನಿನ್ನೂರ್ಗೆ ನಾಂಬರ ।
ಲೆಳಸಿರುವೆನೆನಗುಂಟು ಕಜ್ಜವು ।
ತಳುವದಿಲ್ಲಿಂ ಪೋಗಬೇಕೆಂದುಸುರೆ ಗುರುವರನು ॥
ನೆಲೆದೆರೆಯನಿದ ಕೇಳ್ದು ಸಂಮುದ ।
ಜಲಧಿಯೊಳಗೀಸಾಡಿ ನನ್ನಯ ।
ಕುಲವು ಪಾವನವಾದುದಾಗಮಿಸಯ್ಯ ಮದ್ಗುರುವೇ ॥ ೩೧ ॥

ಕಿರಿಯ ಸೇವೆಯ ಗೈದು ಜನ್ಮೋ ।
ದ್ಧರಣವಂ ನಾಂ ಮಾಡಿಕೊಳ್ಳಲು ।
ಹರನೆ ನಿನ್ನನು ನನ್ನ ಪೊಳಲಿಗೆ ಕರೆಯಲೈತಂದಾ ॥
ಚರಣಸೇವಕಗಿಂತು ನೀನೇ ।
ಕರುಣದಿಂದಾಗಮಿಸಲೊರೆದೀ ।
ವರವು ನನ್ನಯ ಪೂರ್ವಪುಣ್ಯಕೆ ದೊರೆತ ಫಲವಲ್ತೇ ॥ ೩೨ ॥

ಎಂಬ ಧನ್ಯೋಕ್ತಿಯೊಳು ಮತ್ತಂ ।
ಕುಂಬಿಡುತೆ ತನ್ನೃಪನು ಭಕ್ತಮು ।
ದಂಬುನಿಧಿಚಂದ್ರಮನ ಯೋಗಿಯ ಕುಳ್ಳಿರಿಸಿ ರಥದೇ ॥
ತುಂಬಿದೊಲವಿಂ ಕರೆದು ತಂದನು ।
ಮುಂಬರಿದು ನಡೆತರ್ಪ ವೃಷಭನ ।
ಬೆಂಬಳಿಯೊಳೈತರ್ಪ ಪರಿಚರರೊಡನೆ ನಿಜಪುರಿಗೇ ॥ ೩೩ ॥

ವಿಜಿತವಿಕೃತಿಯ ಯೋಗಿವರನನು ।
ನಿಜನೃಪನು ಕರೆತರುವನಿತರೊಳ್ ।
ಪ್ರಜೆಗಳೂರನು ಸಿಂಗರಿಸುತಿದಿರ್ಗೊಂಡು ಸಂಭ್ರಮದೇ ॥
ವೃಜಿನವನು ಪರಿಹರಿಪ ತದ್ಗುರು ।
ಭಜನೆಯನು ಮಾಡುತ್ತೆ ತದ್ಭೂ ।
ಭುಜನ ಭವನದೊಳೈದೆ ಬಿಜಯಂಗೈಸಿದರು ಗುರುವಾ ॥ ೩೪ ॥

ದೊರೆಗೆ ದೊರೆತುದು ಸುರತರುವು ತಾಂ ।
ಕರಗಿದುದು ತೊರಗಲ್ಲ ದುರಿತವು ।
ಪರಮ ಧನ್ಯರು ನಾವೆನುತ್ತೂರವರು ಪೊಗಳುತಿರೆ ॥
ಅರಮನೆಯ ಜಿಡದಿಯೊಳು ತದ್ಗುರು ।
ವರಗೆ ತಕ್ಕುಪಚಾರಗಳನಾ ।
ದರದೊಳಾಗಿಸುತಿರ್ದನರಸನು ಭಕ್ತಿಭಾವದೊಳು ॥ ೩೫ ॥

ದೊರೆಯ ಸೇವೆಗೆ ಮೆಚ್ಚುತವನಿಗೆ ।
ಕರುಣದಿಂದಿಷ್ಟಾರ್ಥಸಿದ್ಧಿಯು ।
ದೊರೆಯುವಂತಿರೆ ನಲ್ವರಕೆಗಳನಿತ್ತು ಶಿವಯೋಗೀ ॥
ಕಿರುನಗೆಯೊಳೀವೂರಜನರನು ।
ಪರಿಪರಿಯೊಳಳಲಿಸುವ ರಕ್ಕಸ ।
ನಿರುವುದಾವೆಡೆಯುದನು ನೋಡುವ ಕಜ್ಜವುಂಟೆನಗೇ ॥ ೩೬ ॥

ಬಂದಿರುವೆಸಿದಕಾಗಿ ನಾಂ ಮೊದ ।
ಲೆಂದುದಿಲ್ಲವೆ ಕಜ್ಜವುಂಟೆನ ।
ಗೆಂದು ಪೇಳೆನಗೀಗಳೆಂಬಾ ಯತಿಯ ಪದಕೆರಗಿ ॥
ಒಂದಿದಧಿಕಾಶ್ಚರ್ಯದಿಂ ನೃಪ ।
ನೆಂದನೆಂತಿದು ನಿನಗೆ ತಿಳಿದುದು ।
ತಂದೆಯೇ ಕಾಲತ್ರಯಜ್ಞಾನಾನ್ವಿತನು ನೀನು ॥ ೩೭ ॥

ನಿಜವೆನುತೆ ಮತ್ತೆರೆದನಾದೊರೆ ।
ಭಜಕ ಭಕ್ತೋದ್ಧಾರಕನೆ ಕೇಳ್ ।
ಪ್ರಜಗಳೆಲ್ಲರು ಪಾಪವಿರಹಿತರಾದೊಡಂ ನನ್ನಾ ॥
ವೃಜಿನಲೇಶದೊಳೆನ್ನ ಪೌರ ।
ಪ್ರಜವ ಕಾಡುವ ಬೊಮ್ಮರಕ್ಕಸ ।
ನಜಿತನಾಗಿರುವನು ಸಮಸ್ತರ ಮಂತ್ರತಂತ್ರಕ್ಕೇ ॥ ೩೮ ॥

ಅವನ ಬಾಧೆಯ ಕಳೆಯುತಂ ನಿ ।
ನ್ನವರೆನಿಸಿಪೆವೆಮ್ಮೆಲ್ಲರನು ಪೊರೆ ।
ಯುವ ಹೊರೆಯು ನಿನ್ನಡಿಯ ಮೇಲಿರ್ಪುದನು ನೀಂ ತಿಳಿದು ॥
ಶಿವನೆ ದಯಮಾಡಿಸಿದೆಯಿಲ್ಲಿಗೆ ।
ಭವವದಧಿಕ ಕರುಣಾಗುಣವ ಪೊಗ ।
ಳುವುದು ನಾಸಿರನಾಲಿಗೆಯ ಶೇಷಂಗಮರಿದಲ್ತೇಂ ॥ ೩೯ ॥

ಪೊಳಲ ಬಳಸಿದ ಕೋಟೆಯಾ ಕೊ ।
ತ್ತಳದೆ ರಕ್ಕಸನಾವಗಂ ತಾಂ ।
ನೆಲಸಿರುವನೆಂದೂರ ಹಿರಿಯರು ನುಡಿವರಿನ್ನವನಾ ॥
ಸುಳಿವ ಹಿಡಿಯಲದಾವನಿಗಮುಸ ।
ದಳವೆನಿಸಿದುದು ಪುರಜನವ ಬಿಡ ।
ದಳಲಿಸುವನಾಗಾಗಳಿನಿತೇ ತಿಳಿದಿರುವುದೆಮಗೇ ॥ ೪೦ ॥

ಗುರುವೆ ನಿನ್ನಾ ಜ್ಞಾನದೃಷ್ಟಿಗೆ ।
ದುರುಳ ರಕ್ಕಸನಿರುವ ನೆಲೆ ಗೋ ।
ಚರಿಸದಿರುವುದೆ ಕೇಳಲಿಂತೇಕೆನಲು ತನ್ನೃಪನು ॥
ದರಹಸಿತಮುಖನಾಗಿ ಯೋಗಿಯು ।
ತೊರೆಯಿದರ ಚಿಂತೆಯನು ತಾನೇ ।
ಬರುವುದೀದಿನದಿರುಳೊಳಿನ್ನೆಡೆಗಿರದೆ ಭೂತವದು ॥ ೪೧ ॥

ಎಂದೊರೆದು ತನ್ನೃಪಗೆ ದರ್ಶನ ।
ಕೆಂದು ಬಂದಿರ್ಪೆಲ್ಲರಿಗವೊಲ ।
ವಿಂದೆ ಪರಕೆಯನಿತ್ತು ಕಳುಹಿಸಿ ಬಿಡದಿ ಮನೆಯಲ್ಲಿ ॥
ಅಂದಿನಿರುಳೊಳು ಲಿಂಗಪೂಜೆಯ ।
ಚೆಂದದಿಂ ಗೈವವಸರದೆ ತಾಂ ।
ಬಂದು ಮೈಯಿಕ್ಕಿದನು ರಕ್ಕಸನಾಗುರೂತ್ತಮಗೇ ॥ ೪೨ ॥

ನೋಡಿ ಗುರು ನೀನಾರೆನಲು ಕೈ ।
ಜೋಡಿಸುತೆ ನಿನ್ನವನು ನಾಂ ಬೈ ।
ದಾಡಿ ಜಂಗಮನೋರ್ವನಿಗೆ ದುಷ್ಕೃತಿಯ ಗೈದುದರಿಂ ॥
ಮೂಡಿತೆನಗೀಜನ್ಮವಾತನು ।
ನೀಡಿದುರುಶಾಪದೊಳು ಮತ್ತಂ ।
ಬೇಡಿಕೊಳಲಡಿವಿಡಿದು ತಚ್ಚರವರನೊರೆದನಿಂತು ॥ ೪೩ ॥

ಬರುವನೀತೊರಗಲ್ಲ ಭೂವರ ।
ನರಮನೆಗೆ ಶಿವಯೋಗಿಯಾತನ ।
ಪರಕೆಯಿಂದೀಶಾಪಜನ್ಮವು ಹರಿವುದದುವರೆಗಂ ॥
ಇರುವುದೀಪುರದಲ್ಲಿ ಕಾಯುತೆ ।
ಗುರುವರನ ನೀನೆಂದು ನುಡಿಯುತೆ ।
ತೆರಳಿದನು ತಜ್ಜಂಗಮೋತ್ತಮನಯ್ಯ ಮದ್ಗುರುವೇ ॥ ೪೪ ॥

ನಿನ್ನ ದರ್ಶನಕಾಗಿ ಕಾದಿ ।
ರ್ಪೆನ್ನ ರಾಕ್ಷಸಜನ್ಮವನು ಕಳೆ ।
ದಿನ್ನು ರಕ್ಷಿಸವೇಳ್ಕುಮೆಂದವನೊರೆದು ಮರೆವುಗಲು ॥
ತನ್ನ ಹಸ್ತದೆ ಗುರುವು ಶಾಪೋ ।
ತ್ಪನ್ನ ತನುವನು ಮುಟ್ಟಲಾತನು ।
ಮುನ್ನಿನಾಮನುಜಾಕೃತಿಯ ಪಡೆಯುತ್ತಲಾಕ್ಷಣದೇ ॥ ೪೫ ॥

ಪುಣ್ಯವದು ಕಣ್ದೆರೆದುದಿನ್ನೇಂ ।
ಧನ್ಯನಾದೆನು ಗುರುವೆ ಮುಂದೆ ಸು ।
ಮಾನ್ಯ ಗುರುಚರ ಸೇವೆಯೊಳು ಮುಕ್ತಾತ್ಮನಾಗಿಸುವಾ ॥
ನನ್ನಿಯಾದುಪದೇಶವೆಸಗುತೆ ।
ನನ್ನನುದ್ಧರಿಸಲ್ಕೆ ನಿನ್ನಯ ।
ಪನ್ನಗಿನಕೃಪೆಯಾಗವೇಳ್ಕೆಂದೆರೆದನಾನರನು ॥ ೪೬ ॥

ನಿರುತವಾಗುರುಲಿಂಗಜಂಗಮ ।
ಚರಣಸೇವೆಗೆ ತನುಮನೋಧನ
ವಿರದೆ ಸಲಿಸುತೆ ತತ್ಪ್ರಸಾದದೆ ತೃಪ್ತಿಯೊಂದಿರಲು ॥
ದೊರೆಯುವುದು ಮುಕ್ತಾತ್ಮಸುಖವೆಂ ।
ದರುಹಿ ತದ್ಗುರು ಪರಸುತವನಿಗೆ ।
ಕರೆಯಿಸಿದನಾನೃಪನೆ ಮೊದಲಾದವರನಾನೆಲೆಗೇ ॥ ೪೭ ॥

ತಡೆಯದೈತಂದೆಲ್ಲರಿಗೆ ಗುರು ।
ನಡೆದುದೆಲ್ಲವ ಪೇಳೆ ನೃಪತಿಗೆ ।
ಪೊಡಮಡುತ್ತಾ ಶಾಪಮುಕ್ತನು ನುಡಿದನೀತೆರದೇ ॥
ಕಡುಬಳಲಿಸಿದೆನಿನ್ನೆಗಂ ನಾಂ ।
ಪಡೆದ ಪಾಪದೊಳೂರ ಜನರನು ।
ಪಡೆದೆನಿಂದಿಗೆ ಪೂರ್ವಜನ್ಮವನೀ ಮಹಿಮನಿಂದೇ ॥ ೪೮ ॥

ಇಂತು ನನ್ನುದ್ಧರಿಸಿದೀನಿ ।
ಶ್ಚಿಂತಮೂರ್ತಿಯನರಮನೆಗೆ ಬರು ।
ವಂತೆ ಮಾಡಿದ ಭಕ್ತಿಗುಣದಿಂದೆಸೆವ ಭೂವರನೇ ॥
ಸಂತತಂ ನಿನ್ನೊಳ್ ಕೃತಜ್ಞತೆ ।
ಯಾಂತಿರುವೆನೆಸಗಿರ್ದ ತಪ್ಪುಗ ।
ಳಿಂತುಮೆಣಿಸದೆ ನೀಂ ಕ್ಷಮಿಸಬೇಕೆಂದು ಬೇಡಿದನು ॥ ೪೯ ॥



ಶ್ರೀ ಫಲಾಹಾರೇಶನು ತೊರಗಲ್ಲ ಅರಮನೆಯಲ್ಲಿ ಶಿವಪೂಜೆಗೆ ಕುಳಿತು ಶಾಪದಿಂದ ಬ್ರಹ್ಮರಾಕ್ಷಸನಾದ ಭಕ್ತನನ್ನು ಉದ್ಧರಿಸಿದುದು.

ಇಂತು ಮಂಗಳ ಗೀತೆಗಳ ನಲ ।
ವಾಂತು ಪಾಡುತೆ ಪೊಗಳುತಿರೆ ಸಮ ।
ನಂತರದೊಳಾಯೋಗಿಯೆಲ್ಲರಿಗಿತ್ತು ಪರಕೆಯನು ॥
ಶಾಂತಿಮಯದಭಿನವ ಮಠವು ತ ।
ನ್ನಂತರಂಗಕ್ಕೊಪ್ಪಲದರೊಳು ।
ಸಂತತಂ ಲಿಂಗಾರ್ಚನಾನಂದದೊಳು ನೆಲಸಿದನು ॥ ೫೫ ॥

॥ ಮುಗಿದುದು ॥ ಒಟ್ಟು ಪದಗಳು ॥೮೬೬॥



॥ ಓಂ ರಾಜಸೇವಿತಾಯನಮಃ ॥

# ಇಪ್ಪತ್ತೊಂದನೆಯ ಸಂಧಿ

---

**ಸೂಚನೆ:—** ಬಸವನೊರಗಿದ ತಾಣದೊಳು ಕ।
ಟ್ಟಿಸಿದರವರಾದಿಯೊಳು ಮಠವನು।
ಬೆಸಸೆ ಗುರು ನರಗುಂದದವನಿಪಕುಲದುಭಯ ನೃಪರು ॥

ಪರಮ ಭಕ್ತಿಯೊಳಿಂತು ತೊರಗ।
ಲ್ಲರಸು ಕಟ್ಟಿಸಿದಾಮಠದೆ ತ।
ದ್ಗುರುವು ಲಿಂಗಾನಂದದೊಳು ಕೆಲದಿನಗಳನು ಕಳೆದು ॥
ನರಪಮುಖ್ಯರ ಸೇವೆಗುಚಿತದ।
ವರಫಲಂಗಳನಾಗಿಸುತೆ ತಾ।
ನರಳಿಕಟ್ಟಿಗೆ ಪೋಗಲೆಳಸುವೆನೆಂದುಸುರೆ ಬಳಿಕೇ ॥ ೧ ॥

ಪುರಜನಾನ್ವಿತನಾಗಿ ತದ್ಭೂ।
ವರನು ಭವ್ಯವರೂಥದೊಳು ಕು।
ಳ್ಳಿರಿಸಿ ಗುರುಮೂರ್ತಿಯನು ಗೈಯುವ ಜಯನಿನದದೊಡನೇ ॥
ಪರಮ ಸಂಭ್ರಮದಿಂದವೈತಂ।
ದರಳಿಕಟ್ಟಿಯವರೆಗೆ ಮಠದೊಳ।
ಗಿರಿಸಿ ತತ್ಪದಕೆರಗುತಪ್ಪಣೆ ಪಡೆದು ತೆರಳಿದನು ॥ ೨ ॥

ಚಂದಿರನು ಮೂಡಿದುದ ಕಂಡೊಲ।
ವೊಂದಿದಂತೆ ಚಕೋರಸಂಕುಲ।
ವಂದು ನಿಜ ಗುರುಚಂದ್ರಮನ ದರ್ಶನವನಾಂತೊಡನೇ ॥
ಒಂದುತಾನಂದವನು ಭಕ್ತರ।
ವೃಂದವಾಪರಶಿವಗೆ ವಂದಿಸಿ।
ಬಂದು ನಂದಿಗೆ ಸಮನೆನಿಸಿದಾ ಬಸವಗಂ ನಮಿಸಿ ॥ ೩ ॥

ಎಂದಿನಂತಿರೆ ಸೇವೆಯೊಳು ಸಲೆ।
ಸಂದಿರಲು ಮಠದಲ್ಲಿ ಹಳ್ಳಿಗ।
ಳಿಂದೆ ಮೊದಲಿನ ತೆರದೆ ತದ್ಗುರುಚರಣಸನ್ನಿಧಿಗೇ ॥
ಬಂದು ಹೋಗುವ ಭಕ್ತಜನಗಳ।
ಸಂದಣಿಯು ದಿನದಿನಕೆ ವೃದ್ಧಿಯು।
ನೊಂದಿದುದು ಸರ್ವರ ಮನೋಭೀಷ್ಟವು ಲಭಿಪಕತದೇ ॥ ೪ ॥

ಇತ್ತಲಾನರಗುಂದ ನಗರನೃ ।
ಪ್ರೋತ್ತಮಾನ್ವಯದರಸು ನಲ್ವಸ ।
ವೆತ್ತು ಬಾಬಾಸಾಬ ವೆಸರಿಂ ರಾಮದುರ್ಗದೊಳು ॥
ನುತ್ಯಮೆನೆ ಪೊರೆಯುತಿರೆ ತನ್ನಾ ।
ಯತ್ತ ರಾಜ್ಯವಿಭಾಗವಾತನ ।
ಚಿತ್ತವೆಳೆದುದು ಯೋಗಿಸಂದರ್ಶನವನೆಸಗಲ್ಕೇ ॥ ೫ ॥

ಮುಕ್ತಿದಾಯಕ ಗುರುಮಠಕೆ ತಾಂ ।
ರಿಕ್ತ ಹಸ್ತದೆ ತೆರಳುತಿರ್ಪುದು ।
ಯುಕ್ತಮಲ್ಲೆಂದಾ ನೃಪನು ಲಿಂಗೋಪಚಾರಗಳ ॥
ರಕ್ತಿ ಮಿಗೆ ಗುರು ನಡೆಸುವುದಕುಪ ।
ಯುಕ್ತ ಛತ್ರಾದಿಗಳ ವಿಮಳಾ ।
ಸಕ್ತಿಯಿಂ ಮಾಡಿಸಿ ಸುರತ್ನಸುವರ್ಣರಜತಗಳಿಂ ॥ ೬ ॥

ಪರಿಮಿತ ಪ್ರಿಯಚರರೊಡನೆ ನಿ ।
ರ್ಭರಮುದದೊಳಾರಾಮದುರ್ಗದ ।
ನರಪನೈತಂದಾಚರೋತ್ತಮನಂಘ್ರಿಗಳಿಗೆರಗಿ ॥
ಗುರುವೆ ವರಲಿಂಗೋಪಚಾರ ।
ಕ್ಕಿರಲಿ ನಿಮಗೆಂದರ್ಪಿಸುತ್ತಿಹ ।
ಕಿರಿಯ ಕಾಣಿಕೆಯೆಂದು ಮುಂದಿಡೆ ತಂದ ವಸ್ತುಗಳಾ ॥ ೭ ॥

ಬೆಳ್ಳಿ ಬೆಟ್ಟದೊಳಿರ್ದು ಶಿವನೀ ।
ಬೆಳ್ಳಿ ಚಿನ್ನಗಳೊಡವೆಯೊಳು ತನ ।
ಗುಳ್ಳ ಮೋಹವನಿನ್ನು ಬಿಡದಿಹನೆಂದು ಮಿಗೆ ನಗುತೇ ॥
ಕಳ್ಳರೊಯ್ಯದ ತೆರದೆ ರಕ್ಷಿಸಿ ।
ಕೊಳ್ಳಲೆಂತಾನಿವುಗಳನು ಮಠ ।
ದಲ್ಲಿರಿಸಿಕೊಂಡೆನಲು ಗುರು ತನ್ನೃಪತಿ ಕಿರು ನಗೆಯಿಂ ॥ ೮ ॥

ಕೊಡುವ ನಮ್ಮೊಳಗೀಬಗೆಯ ನ ।
ಲ್ಲೊಡವೆಗಳ ಮೇಲಿರ್ಪ ಮೋಹವೆ ।
ಮೃಡನಿಗಿವುಗಳನರ್ಪಿಸುವವೋಲ್ ಮಾಳ್ಪುದಾಶಿವನು ॥
ಕೊಡುವರಾಮನವೆಂಬ ಚೆಂಬೊ ।
ನ್ನೊಡವೆಯನು ವೊಹಿಸುವನಿನ್ನೀ ।
ಕಡವರವು ಕಸಕೆಣೆಯು ತತ್ಪರಮಾತ್ಮದೃಷ್ಟಿಯೊಳು ॥ ೯ ॥

ಎಂಬ ನೃಪನುಕ್ತಿಗೆ ನಲಿದು ಕರು ।
ಣಾಂಬುನಿಧಿ ಗುರುವೆಂದನೀಭಾ ।
ವಂ ಬಲಿತು ನಿನ್ನೊಳಗೆ ತುಂಬಿದ ಕತದೆ ಮಠದಲ್ಲಿ ॥
ಸಾಂಬಸೇವೆಗೆ ಸಲ್ಲುವಿವುಗಳಿ ।
ಗಿಂಬುಗೊಡುವೆನು ನಾನೆನುತೆ ನಗು ।
ತಂ ಬಳಿಕೆ ರಾಜೋಪಚಾರವಗೈಸಲೆಳಸುತ್ತೇ ॥ ೧೦ ॥

ಯೋಗಶಕ್ತಿಯೊಳಾನೃಪೋತ್ತಮು ।
ಭೋಗಯೋಗ್ಯ ಸುವಸ್ತುಗಳನಿರ ।
ದಾಗಿಸುತೆ ತದ್ಭೂವರನಿಗುಪಚಾರಮಂ ಗೈಸೇ ।
ಶ್ರೀಗುರುವಿನಾಮಹಿಮೆಗುರೆ ತಲೆ ।
ದೂಗುತಂ ನಿಜರಾಜ್ಯಸೌಖ್ಯಸು ।
ಭೋಗಭಾಗ್ಯವು ತೃಣಸಮಾನವು ಯೋಗದೈಸಿರಿಗೇ ॥ ೧೧ ॥

ಎಂದುಕೊಳುತಂ ಮನದೊಳಗೆ ತಾ ।
ನೊಂದಿದಾಗುರುಭಕ್ತಿ ನೂರ್ಮಡಿ ।
ಯೊಂದೆ ಮುಂದೀ ಮಹಿಮನೇ ಮನ್ಮನದ ಗುರುವೆಂದು ॥
ವಂದಿಸುತೆ ತದ್ಯೋಗಿವಲ್ಲಭ ।
ಗಂದು ಶುಭದಾಶೀರ್ವಚನಗಳ ।
ನೊಂದಿ ತನ್ನವರೊಡನೆ ಬಂದನು ನಿಜನಿವಾಸಕ್ಕೇ ॥ ೧೨ ॥

ಇಂತು ತೆರಳಿದ ಬಳಿಕೆ ತದ್ಭೂ ।
ಕಾಂತನವನರ್ಪಿಸಿದ ವಸ್ತುಗ ।
ಳಂ ತದುನ್ನತ ಮಹಿಮನುಪಯೋಗಿಸೆ ಶಿವಾರ್ಚನೆಗೇ ॥
ಸಂತತಂ ಧ್ಯಾನಪ್ರಮೋದಾ ।
ಕ್ರಾಂತನಾದೀವಿರತಿಮೂರ್ತಿಗ ।
ದೆಂತುಟೀವಸ್ತುಗಳನುಪಯೋಗಿಸುವ ಮನವಾಯ್ತೋ ॥ ೧೩ ॥

ಕೊಟ್ಟ ಧನಕನಕಾದಿಗಳ ತಾ ।
ನಿಟ್ಟುಕೊಳ್ಳದೆ ಕಂಡ ಜನತೆಗೆ ।
ಕೊಟ್ಟುಬಿಡುವೀಶಿವನು ಚಿನ್ನದ ವಸ್ತುಗಳನಿಂತು ॥
ಇಟ್ಟುಕೊಂಡುದರಿಂದೆ ಮುಂದೇಂ ।
ಪುಟ್ಟುವುದೊ ತಲ್ಲೀಲೆಯಿದರೊಳ ।
ಗುಟ್ಟನೀಗಳೆ ತಿಳಿವುದರಿದೆನುತಿರ್ದರರಿದವರು ॥ ೧೪ ॥

ಇಲ್ಲ ನಿರ್ಗುಣರಾದವರು ಮೇ ।
ಣಿಲ್ಲ ನಿರ್ದೋಷಿಗಳುವಿಾಥರೆ ।
ಯಲ್ಲಿರುವರೊಳಗೆಂಬ ನುಡಿ ಪುಸಿಯಲ್ಲವೆಂಬಂತೇ ॥
ಕಳ್ಳತನದಾ ದೋಷವಾಮಠ ।
ದಲ್ಲಿ ಗುರುದರ್ಶನಕೆ ಬರುವವ ।
ರಲ್ಲಿ ಕೆಲರೊಳಗಿರ್ದುದರಳಿಯಕಟ್ಟಿ ಜನರೊಳಗೇ ॥ ೧೫ ॥

ರಾಮದುರ್ಗದ ನೃಪತಿಯಿತ್ತಾ ।
ಹೇಮಮಯ ವಸ್ತುಗಳ ಕೆಲವರು ।
ಕಾಮಿಸುತ್ತೊಂದಿರುಳೊಳವನಪಹರಿಸಿ ತೆರಳುತಿರೇ ॥
ಭೂಮಿಯೇ ಕಾಣದೆಯೆ ಪಥದೊಳ ।
ಗಾಮಹಾದುರಿತಾನ್ವಿತರು ನಿ ।
ಸ್ಸೀಮ ದುಃಖದೆ ಮುಳುಗಿದರು ಪಡೆದಂಥಕತ್ವದೊಳು ॥ ೧೬ ॥

ಪಡೆದ ಪಶ್ಚಾತ್ತಾಪದಿಂದಂ ।
ಪಿಡಿಯುತೋರ್ವನ ಕೈಯನೋರ್ವನು ।
ನಡುಗುತೊಯ್ಯನೆ ಬಂದು ಭಯದಿಂ ತತ್ಪರಾತ್ಪರನಾ ॥
ಅಡಿಗೆರಗಿ ಕದ್ದೆಲ್ಲ ವೊಡವೆಯ ।
ನಿಡುತೆ ತಪ್ಪಾಗಿರುವುದೈ ನ ।
ಮ್ಮೊಡೆಯನೇ ಕ್ಷಮಿಸುತ್ತೆ ಕಣ್ಗಳ ಕೊಡುವುದೆಂದೆರೆಯೆ ॥ ೧೭ ॥

ನೋಡಿ ನಗುತಂ ಕೃಪೆಯ ಮೂರ್ತಿಯು ।
ಬೇಡಿದೊಡೆ ಕೊಡುತಿರ್ದೆನಿವುಗಳ ।
ಮಾಡಲೇಕೀ ಕಳವ ಕಣ್ಗಳ ಕಳೆದುಕೊಳಲೇಕೇ ॥
ನೀಡಿದೊಡಮೇಂ ನಿಮಗೆ ಕಣ್ಗಳ ।
ಮಾಡಿದೀಕೃತಿಯಿಂದೆ ನಿಮ್ಮೊಳು ।
ಮೂಡಿ ದುರ್ಯಶವೀಯದಿರ್ಪುದೆ ಕೇಡ ಜೀವನದೇ ॥ ೧೮ ॥

ಕಳವು ಕೊಲೆ ಸಟೆ ಹಾದರವು ಮೇಣ್ ।
ಬಳಸದೆಸಗಿದ ಕಡುಗಳಿಕೆಯಿವು ।
ಗಳೆ ಮಹಾಪಾತಕಗಳಿವುಗಳೊಳೊಂದ ಗೈದವಗೇ ॥
ತೊಲಗದೆಂದಿಗಮುಳಲು ನರಕದೊ ।
ಳಿಳಿವನವನೆಂದೊರೆವ ಧರ್ಮವ ।
ತಿಳಿದ ನೀವೇ ಗೈದ ತಪ್ಪಿಗೆ ಮರುಗಿತೆನ್ನೆದೆಯು ॥ ೧೯ ॥

ಮುಂದೆ ನೀವೀ ಬಗೆಯ ತಪ್ಪುಗ ।
ಳೊಂದನೆಸಗದೆ ಧರ್ಮಮಾರ್ಗವ ।
ನೊಂದಿರುವುದೆಂದೊಲಿದು ಕಣ್ಗಳ ಮುಟ್ಟಿ ಗುರುವರನು ॥
ಬಂದು ಕಣ್ಬೆಳಗಧಿಕ ಸಮ್ಮುದ ।
ವೊಂದಿ ತತ್ಪಾವನಪದಾಬ್ಜಕೆ ।
ವಂದಿಸುತೆ ಮರಳಿದರವರು ನಿಜಮಂದಿರಕೆ ಬಳಿಕೇ ॥ ೨೦ ॥

ಅರಳಿಕಟ್ಟೆಯ ಜನರು ತಮ್ಮಯ ।
ಗುರುಮಠದೆ ಶಿವಪೂಜೆಯೊಡವೆಯ ।
ದುರಿತ ಮನದಿಂ ಕದ್ದರೆಂಬುದನರಿಯಲುಳಿದವರು ॥
ಜರಿಯರೇ ಪೋದಲ್ಲಿ ನಮಗೇ ।
ನಿರುವುದೇ ಮರ್ಯಾದೆಯೂರಿಗೆ ।
ದೊರೆದುದೀದುರುಳರ ಕೃತಿಯೊಳಪಕೀರ್ತಿಯೆಂದೆನುತೇ ॥ ೨೧ ॥

ಹಿರಿಯರುರೆ ಚಿಂತಿಸುತೆ ಮತ್ತಂ ।
ಗುರುವರನು ಕಳ್ಳರಿಗೆ ಕಣ್ಣಿ ।
ತ್ತುರು ಕರುಣದಿಂ ಕ್ಷಮಿಸುತವರನು ಕಳುಹಿಸಿದ ಪರಿಗೇ ॥
ಬೆರಗುವಡೆದೀಲೀಲೆಗಾಗಿಯೆ ।
ನರವನರ್ಪಿಸಿದೊಡವೆಗಳ ತಾ ।
ಸಿರಿಸಿಕೊಂಡನು ಲೀಲೆಯಾಣ್ಮನು ತಿಳಿದುದೀಗೆಮಗೇ ॥ ೨೨ ॥

ಎಂದುಕೊಂಡುದಯದೊಳು ಭಯದಿಂ ।
ಬಂದು ವಂದಿಸುತಿರ್ಪ ಹಿರಿಯರಿ ।
ಗೆಂದನೀತೆರದಿಂದೆ ಕಿರುನಗೆಯೊಡನೆ ಗುರುಮೂರ್ತೀ ॥
ತಂದೆ ಗಿರಿಮಲ್ಲಯ್ಯನಿರುಳೊಳು ।
ಬಂದು ಕನಸಿನೊಳೆನಗೆ ನೀಂ ಬೇ ।
ರೊಂದು ನೆಲೆಯೊಳು ಮಠವನಾಗಿಸುತದರೊಳೆನಗಾಗಿ ॥ ೨೩ ॥

ವಿರಚಿಪುದು ಗದ್ದುಗೆಯ ನಾನ ।
ಲ್ಲಿರುವೆನೆಂದೊರೆದಾಗಳೇ ವೈ ।
ಗರೆದನೆನಲಿದ ಕೇಳ್ದು ಭಯವಿಹ್ವಲಹೃದಯರಾಗಿ ॥
ಹಿರಿಯರವರತಿಚಿಂತೆಗೊಂಡೇಂ ।
ಮರುನುಡಿಯನಾಡದೆಯೆ ಕಳವಾ ।
ಗಿರುವ ಕತದಿಂದಿಂತು ಪೇಳಿದನೆಂದು ಭಾವಿಸುತೇ ॥ ೨೪ ॥

ತಳೆದ ಮೌನದೊಳಿರುವನಿತರೊಳೆ ।
ನಲವಿನಿಂ ನರಗುಂದ ನಗರದ ।
ನೆಲೆದೆರೆಯನಾರಾಮದುರ್ಗಪ್ರಭುವನೊಡಗೊಂಡು ॥
ಕೆಳೆಯುರೊಡನಾಯೋಗಿಸಂಕುಲ ।
ತಿಲಕನ ಶ್ರೀಪಾದದರ್ಶನ ।
ಕೆಳಸಿ ತಾನ್ಯೆತಂದುದವನು ಕಂಡೂರವರು ಬಂದು ॥ ೨೫ ॥

ನೆರೆದು ವಂದನೆ ಗೈಯಲವರಿಗೆ ।
ತಿರುಗಿ ನಮಿಸುತಲುಭಯ ನೃಪರ್ಗೈ ।
ತರುತೆ ಮಠದೊಳು ಮಣಿದರಾತ್ಮೇಶ್ವರಪದಕೆ ಬಳಿಕೇ ॥
ಎರಗಿದರು ಮತ್ತುಳಿದವರು ಸಲೆ ।
ಬೆರೆದು ಬಂದಾದೊರೆಗಳೀರ್ವರಿ ।
ಗೊರೆದನೀತೆರದಿಂದೆ ಮಂದಸ್ಮಿತದೊಳಾಯೋಗೀ ॥ ೨೬ ॥

ಪ್ರೇಮಪಾತ್ರರೆ ನಿಮ್ಮನೀರ್ವರ ।
ನಾಮಹಿತ ಗಿರಿಮಲ್ಲಿಕಾರ್ಜುನ ।
ನೀ ಮಠಕೆ ತಾಂ ಕಳುಹಿಸಿರುವನು ತಕ್ಕ ಸಮಯದೊಳೇ ॥
ಆ ಮಹಾಗುರುವಾಜ್ಞೆಯಾಯ್ತೆಲೆ ।
ಭೂಮಿಪರೆ ಬೇರೊಂದು ನೆಲೆಯೊಳ್ ।
ಪ್ರೇಮದಿಂ ಕಟ್ಟಿಸಿರಿ ನವಮಠವಲ್ಲಿರುವೆನೆನಲು ॥ ೨೭ ॥

ಜನಪನಪ್ಪಾಸಾಬನೊಲವಿಂ ।
ಮುನಿನುತನೆ ಬಹುಕಾಲದಿಂ ಮ ।
ನ್ಮನದೊಳಿರ್ದುದು ನಮ್ಮೆರಡು ನಗರಿಗಳೊಳೊಂದರೊಳು ॥
ನಿನಗೆ ಪೂಜಾದಿಕ್ರಿಯೆಗೆ ತಾ ।
ನನುಗುಣದ ನವಮಠವ ಕಟ್ಟಿಸು ।
ವೆಣಿಕೆಯದು ಸಿದ್ಧಿಸಿದುದಿಂದಿಗೆ ನಿನ್ನ ಸನ್ನಿಧಿಯೊಳ್ ॥ ೨೮ ॥

ಎಂದುದಕ್ಕಾರಾಮದುರ್ಗನೃ ।
ಪೇಂದ್ರುವುಂ ತಾಂ ಪೆರ್ಚಿದೊಲವಿಂ ।
ಸಂದೆಗಮದೇಕೆನ ಪೊಳಲೊಳೆ ನೀನಿರಲು ಮಠವಾ ॥
ಚೆಂದದಿಂ ಕಟ್ಟಿಸುವೆನೆನ್ನಯ ।
ತಂದೆಯೇ ನೀನೊಪ್ಪಿ ಪರಸುವು ।
ದೆಂದು ವಂದಿಸಲುಭಯರಿಂತೊರೆದುದನು ಗುರು ಕೇಳ್ದು ॥ ೨೯ ॥

ಪರಮ ಭಕ್ತಿಯೊಳೆಮ್ಮ ಮಠವನು ।
ವಿರಚಿಸುವ ಕಡು ಕೂರ್ಮೆಯುಳ್ಳೀ ।
ರ್ವರೊಳಗಾರ ಪುರಾಂತರದೆ ಕಟ್ಟಿಸುವುದೆಂಬುದನು ॥
ಸ್ಥಿರಗೊಳಿಪ ತೊಡಕೇಕೆ ನಮ್ಮ ।
ಲ್ಲಿರುವ ಕಂಟಲಿಬಸವನೊಲವಿಂ ।
ತೆರಳುತಾವೆಡೆಯಲ್ಲಿ ಮಲಗುವನದೆ ಮಹಾಸ್ಥಲವು ॥ ೩೦ ॥

ಅಲ್ಲಿ ಕಟ್ಟಿಸಲಾವ ಸಂಶಯ ।
ವಿಲ್ಲವೆಂದೊರೆದುಭಯ ಧರಣೀ ।
ವಲ್ಲಭರನೊಪ್ಪಿಸಲು ನಗೆ ನುಡಿಯಿಂದೆ ಗುರು ಬಳಿಕೇ ॥
ಕಳ್ಳತನದಾವಾರ್ತೆ ಬಿಡದೂ ।
ರಲ್ಲಿ ಪರ್ಬುತೆ ಬಂದು ಮುಟ್ಟಿತು ।
ಮೆಲ್ಲಮೆಲ್ಲನೆ ನೃಪರ ಕಿವಿಗವರನುಚರರ ಮುಖದಿಂ ॥ ೩೧ ॥

ಬಳಿಯೊಳೇ ತದ್ರಾಜಭೀತಿಯ ।
ತಳೆದು ಚಿಂತಿಪ ಹಿರಿಯರಿಂದಂ ।
ತಿಳಿದು ನಡೆದುದನೆಲ್ಲವನು ವಿಸ್ಮಿತ ಹೃದಯರಾಗಿ ॥
ನೆಲದೆರೆಯರವರೀರ್ವರಾಗುರು ।
ತಿಲಕನಿಳೆಗವತರಿಸಿರುವ ತ ।
ಜ್ಜಲಜರಿಪುಧರನೆಂದು ತಲ್ಲೀಲೆಯನು ಪೊಗಳಿದರು ॥ ೩೨ ॥

ಗುರುವು ತಾನಾಬಳಿಕೆ ತದ್ಭೂ ।
ವರರ ಸಮ್ಮುಖದಲ್ಲಿ ನೆರೆದಿ ।
ರ್ಪರಳಿಕಟ್ಟೆಯ ಸರ್ವಜನರಿಗೆ ಬೋಧಿಸಿದನಿಂತು ॥
ಪರಮ ಭಕ್ತರೆ ಮಠದೆ ಕಳವಾ ।
ಗಿರುವ ಕತದಿಂ ಬೇರೆಡೆಗೆ ನಾಂ ।
ತೆರಳಲೆಳಸಿದೆನೆಂದು ಚಿಂತಿಸೆ ಭ್ರಾಂತಿಯೆನಿಸುವುದು ॥ ೩೩ ॥

ಗಿರಿಯ ಮಲ್ಲೇಶ್ವರನನುಜ್ಞೆಯ ।
ಧರಿಸಿ ಶಿರದೊಳು ಪೋಗುವೆನು ನಾ ।
ನಿರದು ಕಾರಣವಿದಕೆ ಬೇರೆನಗಿದನರಿದು ನೀವು ॥
ಪರಧನಾದಿಗಳಾಶಿಸದೆ ಸ ।
ದ್ಗುರುಚರರ್ಕಳ ನಂಬಿ ನಡೆಯಿರಿ ।
ದೊರೆವುದೆಳಸಿದ ಫಲವು ತತ್ಪರಮಾತ್ಮಕೃಪೆಯಿಂದೇ ॥ ೩೪ ॥

ಎಂದು ಸಮಯೋಚಿತದ ಬೋಧೆಯೊ ।
ಳೊಂದಿಸುತೆ ಸರ್ವರಿಗೆ ಸಂಮುದ ।
ವೆಂದಿನಂತಿರೆ ಮಠದ ರಕ್ಷಣೆಗಿರಿಸಿ ಭಕ್ತರನು ॥
ಅಂದು ಸುಮುಮಾಲಾದಿಗಳಿನೊಲ ।
ವಿಂದೆ ಸಿಂಗರಿಸಿರ್ದ ಬಸವನ ।
ಮುಂದುವರಿಸುತೆ ಪಯಣಕುಜ್ಜುಗಿಸಿದನು ಶಿವಯೋಗೀ ॥ ೩೫ ॥

ನರಪರೀರ್ವರು ಕೆಲಬಲದೊಳೈ ।
ತರೆ ತದನುಚರರೈದೆ ಬೆಂಗೊಂ ।
ಡಿರೆ ನಡುವೆ ಗುರುಮೂರ್ತಿ ಶೋಭಿಸುತಿರೆ ಬಸವನೊಲವಿಂ ॥
ತೆರಳುತಿರೆ ಮುಂಗಡೆಯೊಳುರು ಶುಭ ।
ತರರವಮುದೆಷ್ಟ ಸೆಯು ಪೊಕ್ಕಿರೆ ।
ಪರಮ ಸಂಭ್ರಮದಿಂದೆ ಬೀಳ್ಕೊಡುತಿರೆ ನೆರೆದ ಜನರು ॥ ೩೬ ॥

ಇಂತು ಪಯಣಂಗೊಂಡು ತದ್ಭೂ ।
ಕಾಂತರೊಡನಾವಿಜಿತಕಂತುವು ।
ಸಂತಸದೆ ಕೆಲ ದೂರಗಮನವ ಮಾಡೆ ಮುಂಗಡೆಯೊಳ್ ॥
ಆಂತ ತಟಶೋಭೆಯೊಳು ಕಣ್ಮನ ।
ಮಂ ತಣಿಸುತಂ ಮಧುರ ಜೀವನ ।
ಮಂ ತಳೆದು ರಾರಾಜಿಸಿದಳು ಮಲಾಪಹಾರಿಣಿಯು ॥ ೩೭ ।

ಕಂಟಕವ ತಂದೊಡ್ಡಿ ಬಳಲಿಸು ।
ವಂಟಿದಘವನು ಕಳೆದು ಸೈಪಿನ ।
ಗಂಟನಾಶ್ರಿತ ಜನರಿಗೀವ ಮಲಾಪಹಾರಿಣಿಯೊಳ್ ॥
ಈಂಟುತಂ ಮಧುರಾಂಬುವನು ಸಲೆ ।
ದಾಂಟಿಸಿದರಾನದಿಯ ಚರರಾ ।
ಕಂಟಲಿಯ ಬಸವಂಣನೊಡನಾಗುರುವ ಮೇಣ್ ನೃಪರಂ ॥ ೩೮ ॥

ತೀರದೊಳು ಶಿವಭಕ್ತರಮಳಾ ।
ಚಾರಕಾಶ್ರಯವಾಗಿ ಕೃಷಿಕರ ।
ವಾರದಿಂದವರಾದಿ ನಲ್ವೆಸರೂರು ಕಂಗೊಳಿಸೇ ॥
ಮಾರಹರ ಮಲ್ಲೇಶ್ವರನ ಸ ।
ತ್ಕೀರಣೆಯೊಳಾವೃಷಭನೊಲಿದಾ ।
ವೂರ ತೆಂಕಣಕಿರ್ಪ ಬನಕೈತಂದು ಮಲಗಿದುದು ॥ ೩೯ ॥

ಬನವನ್ನೈತಂದೊಲವಿನಿಂ ಪವ ।
ಡಿಸಿದನೀನೆಲೆಯಲ್ಲಿ ಮುಂದಿದು ।
ವಸುಧೆಯೊಳು ಪೆಸರಾಂತ ಪುಣ್ಯಕ್ಷೇತ್ರವೆನಿಸುವುದು ॥
ನಿಸದಮಿಲ್ಲಿಯೆ ನವ ಮಠವ ಕ ।
ಟ್ಟಿಸುವುದೆನೆ ಗುರು ತನ್ನೃಪರು ಸಂ ।
ತಸವನೊಂದಿ ತಥಾಸ್ತುವೆಂದೊಪ್ಪಿದರು ಕೈಮುಗಿದು ॥ ೪೦ ॥

ಬಳಿಕೆ ತತ್ಪರಿಪೂತದೆಡೆಯೊಳೆ ।
ನಲವಿನಿಂದೆಲೆವನೆಯನಾಗಿಸಿ ।
ನೆಲದೆರೆಯರಾಗುರುವಿನುಪಚಾರಕ್ಕೆ ಭಕ್ತರನು ॥
ನಿಲಿಸುತಂ ಬೇಕಾದುದೆಲ್ಲವ ।
ತಳುವದೇರ್ಪಡಿಸುತ್ತೆ ತಾವುಂ ।
ಕೆಲದಿನಗಳಲ್ಲಿರ್ದು ಕಟ್ಟಿಸತೊಡಗಿದರು ಮಠವಾ ॥ ೪೧ ॥

ಮಹಿಮರಡಿಯಿಟ್ಟೆಡೆಯದಾವುದೊ ।
ಮಹಿಯೊಳದೆ ಸದ್ಭಕ್ತವೃಂದಕೆ ।
ಮಹಿತ ಪುಣ್ಯಾಶ್ರಮವೆನಿಸುವುದು ದಿಟಮಿದೆಂಬುದನು ॥
ಮಹಿಯ ಜನಕುರೆ ತೋರಿಸುವ ಸ ।
ನ್ಮಹಿಮೆಗಳನೊಂದೆರಡು ದಿನದೊಳೆ ।
ವಹಿಸಿತವರಾದಿಯ ಬನದ ತಾಣವದು ತಾಂ ಬಳಿಕೇ ॥ ೪೨ ॥

ಪಟ್ಟಶಿಷ್ಯರು ದೋರೆಗಳೀರ್ವರು ।
ಮಿಟ್ಟು ಗುರುಪಾದದೊಳು ಭಕ್ತಿಯ ।
ನಿಟ್ಟು ತಕ್ಕಧಿಕಾರಿಗಳ ತಮ್ಮಾಳ್ವ ಕಜ್ಜದೊಳು ॥
ಬಿಟ್ಟು ತದ್ಯೋಜನೆಯ ಕರೆಯಿಸಿ ।
ಕಟ್ಟುವಾಕೌಶಲದ ಕೃತಿಯೊಳು ।
ಗಟ್ಟಿಗರನಾರಂಭಿಸಿದರಾಮಠದ ಕಟ್ಟಡವಾ ॥ ೪೩ ॥

ಕಟ್ಟಿಸುವವೋಲ್ ಭಕ್ತಿಸಂಪದ ।
ವಿಟ್ಟುಕೊಳ್ಳುವ ಬೊಕ್ಕಸವ ಮೇಣ್ ।
ಕಟ್ಟಿಸುವವೋಲ್ ಮುಕ್ತಿರಮೆಗೆ ವಿಹಾರಮಂದಿರವಾ ॥
ಕಟ್ಟಿಸಿದರುರು ಮಠನ ಪುಣ್ಯದ ।
ಬಟ್ಟೆದೋರುವ ದೊಡ್ಡ ಬಾಗಿಲ ।
ವಿಟ್ಟು ಲಸದುತ್ತರ ಸುದಕ್ಷಿಣದಿಶೆಗಳೆರಡರೊಳು ॥ ೪೪ ॥

ಇದು ಸುಪಂಚಾಚಾರದಾಶ್ರಮ ।
ವಿದು ಮಹಾಷ್ಟಾವರಣಗಳ ತವ ।
ರಿದು ಪರಮ ಷಟ್‌ಸ್ಥಲದ ತತ್ವವ ಬೋಧಿಸುವ ಶಾಲೆ ॥
ಇದು ಸುಭಕ್ತರನುದ್ಧರಿಪ ನೆಲೆ ।
ಯಿದು ಶಿವನು ಬಿನದಿಸುವ ಬೀಡೆನಿ ।
ಪುದು ಮಠವು ದಿಟವೆಂದದನು ಕಂಡವರು ಪೊಗಳಿದರು ॥ ೪೫ ॥

ಪುಣ್ಯವನು ಗಳಿಸುವವರಾದಿಯು ।
ಮಾನ್ಯ ಗುರುಕೃಪೆಯಿಂದೆ ಭಕ್ತಿಯು ।
ಕನ್ಯೆಯನು ಕೈವಿಡಿದು ಸುಖವನುಭವಿಸುವವರಾದಿ ॥
ಧನ್ಯತೆಯನೊಂದುವವರಾದಿ ಯಿ ।
ದಿನ್ನು ಗುರುಮಠದಿಂದೆ ಶೋಭಿಪ ।
ಗಣ್ಯ ಸುಕ್ಷೇತ್ರಮದೆನಿಸುತವರಾದಿ ಮೆರೆಯುವುದು ॥ ೪೬ ॥

ಎಂದು ಬಣ್ಣಿಸೆ ಬುಧರು ತನ್ನೃಪ ।
ರೊಂದು ಶುಭ ದಿನದಲ್ಲಿ ಗುರು ಪೇ ।
ಳ್ದಂದದಿಂ ಗಿರಿಮಲ್ಲಿಕಾರ್ಜುನಸಂಸ್ಮರಣಕಾಗಿ ॥
ಸುಂದರದ ತನ್ಮಠದ ಮಧ್ಯದೊ ।
ಳೊಂದು ನಲ್ಗದ್ದುಗೆಯ ಸಕ್ರಮ ।
ದಿಂದೆ ಸಂಸ್ಥಾಪನವ ಗೈದು ಮಹಾವಿಭವದೊಡನೇ ॥ ೪೭ ॥

ಅಂದು ಸರ್ವಮತೀಯರಿಗೆ ತಣಿ ।
ವೊಂದಿಸುತೆ ಮೃಷ್ಟಾನ್ನ ಭೋಜನ ।
ದಿಂದೆ ಸನ್ಮಾಹೇಶ್ವರಾದ್ಯರಿಗಿತ್ತು ದಕ್ಷಿಣೆಯಾ ॥
ಬಂದ ಪಂಡಿತ ಸುಕವಿ ಗಾಯಕ ।
ವೃಂದವಾಗುರುಮಹಿಮೆಗಳ ಪಲ ।
ವಂದದಿಂ ಚಿತ್ತರಿಸಲೇರ್ಪಡಿಸಿದರು ವರಸಭೆಯಾ ॥ ೪೮ ॥

ಯೋಗಮಹಿಮೆಯ ಬುಧರೊರೆದರಾ ।
ಯೋಗಿ ಚರಿತೆಗೆ ಕಟ್ಟಿ ಕವಿತೆಯ ।
ನಾಗಳೇ ಕಥಿಸಿದರು ಕವಿವರರಿನ್ನು ಗಾಯಕರು ॥
ರಾಗರಸವನು ತುಂಬುತಾಶಿವ ।
ಯೋಗಿ ಗುಣಗಾನವನು ಮಾಡಿದ ।
ರಾಗುರೂತ್ತಮಸನ್ನಿಧಿಯೊಳೇರ್ಪಟ್ಟ ಸಭೆಯಲ್ಲಿ ॥ ೪೯ ॥

ಇಂತುವಲ್ಲದೆ ಭಕ್ತರೊಳು ಕೆಲ ।
ರಾಂತು ಭಕ್ತಿಸುಪರವಶತೆಯಿ ।
ನ್ನೆಂತೊ ಬಗೆಯಿಂ ಬಣ್ಣಿಸಿದರಾಯೋಗಿಲೀಲೆಗಳಾ ॥
ಇಂತು ಸಂಭ್ರಮದಿಂದೆ ತದ್ಭೂ ।
ಕಾಂತರೀರ್ಶ್ವರಪೂರ್ವ ಭಕ್ತಿಯ ।
ನಾಂತು ನವಮಠಸುಪ್ರವೇಶೋತ್ಸವವ ಮುಗಿಸಿದರು ॥ ೫೦ ॥

ಉತ್ಸವಕೆ ಬಂದೆಲ್ಲರಿಗೆ ದು ।
ರ್ಮತ್ಸರಾದಿಗಳಳಿಯೆ ತನ್ನ ಯ ।
ನೋತ್ಸವಪ್ರದ ದಿವ್ಯಮೂರ್ತಿಯ ದರ್ಶನದೊಳವರು ॥
ಉತ್ಸುಕತೆಯಿಂದೆರಗಲಾತ್ಮಜ ।
ವತ್ಸಲತೆಯಿಂ ಗುರುವು ಶುಭಸಂ ।
ಪತ್ಸಮೃದ್ಧಿಯ ಪರಕೆಯಿತ್ತವರುಗಳ ತಾಂ ಕಳುಹಿ ॥ ೫೧ ॥

ಬಳಿಕೆ ಭೂವರರೀರ್ಶ್ವರನು ಕರೆ ।
ದೊಳಗಿರುವ ಕಾಮಾದಿ ರಿಪುಗಳ ।
ಗೆಲುತೆ ಹೊರಗಿನ ಪಗೆಗಳನು ಸೋಲಿಸಲು ಬೇಕಾದ ॥
ಸುಲಭ ಖಡ್ಗಗಳೆಂದೆರಡು ಮಂ ।
ಗಳದ ಬೆತ್ತಗಳಿತ್ತು ನೀವಿವು ।
ಗಳನು ನಿಮ್ಮಲ್ಲಿಟ್ಟುಕೊಳಲಿರದಾವ ಭಯವೆಂದು ॥ ೫೨ ॥

ತಿಳುಹೆ ತದ್ಗುರುವಾದೊರೆಗಳೆದೆ ।
ಯಲರೆ ನಮ್ಮರಮನೆಯೊಳಿಟ್ಟವು ।
ಗಳನು ಗುರುಭಾವದೊಳು ಪೂಜಿಸುತಿರ್ಪೆವೆಂದೊರೆದು ॥
ಬಳಿಕೆ ತತ್ಪಾದಗಳ ಧೂಳಿಯ ।
ತಳೆದು ತಲೆಯೊಳು ಪಡೆದನುಜ್ಞೆಯ ।
ನಲವಿನಿಂ ತೆರಳಿದರು ತಮ್ಮವರೊಡನೆ ನಿಜಪುರಿಗೇ ॥ ೫೩ ॥

ಇತ್ತಲಾಶಿವಯೋಗಿ ಬಗೆಯೆಳೆ ।
ಯುತ್ತಿರುವ ವರಮಠದೊಳದರೊಳು ।
ನಿತ್ಯನಿಜಲಿಂಗಾರ್ಚನಾನಂದಕ್ಕೆ ವಶನಾಗಿ ॥
ಮರ್ತ್ಯಲೋಕಕೆ ಬಂದು ಭಕ್ತರಿ ।
ಗಿತ್ತು ಬಯಸಿದ ಫಲವ ಸಲೆ ಪೊರೆ ।
ಯುತ್ತಿರುವ ಗಿರಿಜಾಮನೋಹರನಾಗಿ ನೆಲಸಿದನು ॥ ೫೪ ॥

**॥ ಮುಗಿದುದು ॥ ಒಟ್ಟು ಪದಗಳು ॥೯೨೦॥**

---

। ಓಂ ಮಲಾಪಹಾರಿಣೀಮುಗ್ಧಬಾಲಪಾಲಾಯನಮಃ ॥

# ಇಪ್ಪತ್ತೆರಡನೆಯ ಸಂಧಿ

---

**ಸೂಚನೆ:—** ತೆರಳ್ದು ತಾಂ ದೀಕ್ಷಿತರ ಯಾಗದೆ ।
ಪರಸುತಂ ಪಣ್ಗಳನು ಪೆರ್ಚಿಸಿ ।
ಗುರುವು ಮತ್ತಂ ಪೊರೆದನುದಕದೆ ಮುಳುಗುವಣುಗನನು ॥

ಆದುದವರಾದಿಯು ಮಹಾ ಪು ।
ಣ್ಯೋದಯದ ಸುಕ್ಷೇತ್ರವಾಸುಘ ।
ಲೋದನ ಸ್ವಾಮಿಯ ಚರಣಸನ್ನಿಧಿಯ ಮಹಿಮೆಯೊಳು ॥
ಮೋದದಿಂ ನಾಡವರು ತದ್ಗುರು ।
ಪಾದಕೃಪೆಯಂ ಪಡೆದು ಸಲೆ ಸಂ ।
ಪಾದಿಸುವರಿಚ್ಛಿತ ಫಲಂಗಳನನುದಿನದೆ ಬಂದು ॥ ೧

ಬಂದ ಕೆಲರಾಮಹಿತಮಹಿಮಾ ।
ಮಂದಿರನ ಸೇವೆಯೊಳು ಮಠದೊಳು ।
ನಿಂದು ಶುದ್ಧಿಯನೊಂದುತಿರೆ ಧರ್ಮಂಣನೆಂಬುವನು ॥
ಬಂದು ನನಗೀಶ್ರೀಗುರುವೆ ತಾಂ ।
ತಂದೆಯುಂ ತಾಯ್ ಬಂಧುವುಂ ಸಖ ।
ನೆಂದು ನಂಬುತೆ ತಚ್ಚರಣಸನ್ನಿಧಿಯನೊಂದಿದನು ॥ ೨

ಅವನ ಗುಣ ಶೀಲಂಗಳಿರದ ।
ಪ್ಪುವವೊಲಿರೆ ತಾಂ ಮೆಚ್ಚಿ ಸತತಂ ।
ಶಿವಸಮರ್ಚನೆ ಗೈಸಲನುಗುಣಭಕ್ತನೆಂದರಿದು ॥
ಸುವಿಮಳಾತ್ಮಕನಾಗಿ ಸೇವಿಸು ।
ವವನ ಮೆಲಿಟ್ಟಳ್ತಿಯನು ತ ।
ನ್ನವನನಾಗಿಸಿಕೊಂಡನಾಗುರುದೇವನಾಬಳಿಕೇ ॥ ೩

ತನ್ನ ಗುರುವನು ಮನದ ಗುಡಿಯೊಳ ।
ಗುನ್ನತದ ಶಿವಲಿಂಗವಾಗಿಸಿ ।
ನನ್ನಿ ನಲ್ಮೆಯೊಳಾತನಿಗೆ ನಿಜಸೇವೆಯನು ಸಲಿಸಿ ॥
ಭಿನ್ನ ಭಾವವನುಳಿದು ಸೇವೊ ।
ತ್ಪನ್ನ ಸುಖದೊಳೆ ಮುಳುಗುತಂ ಧ ।
ರ್ಮಣ್ಣನಾತ್ಮಸುನಾಮಮಂ ಸಾರ್ಥಕಮನಾಗಿಸಲು ॥ ೪

ಇದೆ ಸುಭೃತ್ಯಾಚಾರವೆನಿಸುವು ।
ದಿದನೆ ಬಸವೇಶ್ವರನು ಕಲ್ಯಾ ।
ಣದೆ ತಳೆದು ತಾನಿಳೆಗೆ ಕಲ್ಯಾಣದನೆನಿಸಿ ಮೆರೆದಂ ॥
ಇದನು ಬಿಡದಿರು ಧರ್ಮನೇ ನಿನ ।
ಗಿದೆ ಸುಜೀವನ್ಮುಕ್ತಿಯಂ ತಾ ।
ನೊದಗಿಸುವುದೆಂದಾತನಿಗೆ ಗುರು ಬೋಧಿಸಿದನೊಲಿದು ॥ ೫ ॥

ಹಿಗ್ಗಿದೆದೆಯಿಂ ಗುರುವರನೆ ನನ ।
ಗೊಗ್ಗಿದುದು ಬೋಧೆಯಿದು ನಿರುತಂ ।
ಕುಗ್ಗದಂತಿರೆ ಮಾಳ್ಪ ನಿನ್ನಯ ಸೇವೆಯಾ ಸೊಗದಾ ॥
ಸುಗ್ಗಿಯೇ ಸಾಕೆನಗೆ ನಿನ್ನೆಡೆ ।
ಬಗ್ಗದೊವಲನ ತಾಣಕಂ ಮಿಗೆ ।
ಸಿಗ್ಗನೀಯುವುದೀನೆಲೆಯ ಬಿಡೆನೆನ್ನ ಜನ್ಮದೊಳು ॥ ೬ ॥

ಎಂದು ವಂದಿಸಿ ತನಗೆ ಬೋಧಾ ।
ನಂದವನು ಕರುಣಿಸಿದ ಗುರುವಿಗ ।
ದೊಂದು ಕೊರತೆಯನಾಗಿಸದೆ ಸೇವೆಯನೆಸಗುತವನು ॥
ಬಂದ ಭಕ್ತಾದಿಗಳಿಗಂ ಪಲ ।
ವಂದದಿಂದುಪಚರಿಸುತಿರ್ಪುದ ।
ನಿಂದು ನೋಡುತೆ ತತ್ಪರಮನೊಲವೊಂದಿರಲು ಬಳಿಕೇ ॥ ೭ ॥

ಪರಮ ಪುಣ್ಯಕ್ಷೇತ್ರಮೆನಿಸುತೆ ।
ಮೆರೆಯುವವರಾದಿಯ ಸಮೀಪದೊ ।
ಳಿರುವ ಗೊಂಣಾಗರದ ಬಳಿಯ ಮಲಾಪಹಾರಿಣಿಯಾ ॥
ಸುರುಚಿರದ ತೀರದೊಳು ನಡೆಯಿಸು ।
ತಿರುವ ಯಾಗಕೆ ತದ್ಗುರುವ ತಾಂ ।
ಕರೆಯಲೈತಂದನು ಚಿದಂಬರ ದೀಕ್ಷಿತನು ನಲವಿಂ ॥ ೮ ॥

ವಿಲಸಿತದ ಮಠದಲ್ಲಿ ಭಕ್ತಾ ।
ವಳಿಯ ಮಧ್ಯದೆ ಮಂಡಿಸಿದ ಗುರು ।
ತಿಲಕನೈತರುತಿರ್ಪ ತದ್ದೀಕ್ಷಿತನ ಕಂಡೊಡನೇ ॥
ನಲವಿನಿಂದಿದಿರ್ವಂದು ನಿಜಕರ ।
ತಲವ ಪಿಡಿದೊಡನಾಮಹಾತ್ಮನಿ ।
ಗಲಘು ಮುದದಿಂ ಮಣಿಯೆ ಭೂಸುರವರ ಚಿದಂಬರನು ॥ ೯ ॥

ಮಣಿದ ತದ್ವಿಪ್ರೋತ್ತಮನ ಕರ ।
ವನು ಪಿಡಿದು ಕುಳ್ಳಿರಿಸುತುಚಿತಾ ।
ಸನದೆ ಯೋಗೀಶ್ವರನು ಕುಶಲ ಪ್ರಶ್ನೆಯನು ಕೇಳೇ ॥
ಮುನಿನುತನೆ ನಿನ್ನಧಿಕದಯೆಯಿಂ ।
ದನಿತು ಸುಖಮಯಮಿರ್ಪುದಿನ್ನೇ ।
ನೆನಲು ನಾನುರೆ ಗೈಯಲೆಳಸಿದ ಸೋಮಯಾಗವದು ॥ ೧೦ ॥

ಗಣಿಸೆ ನಿಮ್ಮನ್ನರ ಮಹಾತ್ಮರ ।
ಘನತರದ ಸನ್ನಿಧಿಯ ಮಹಿಮೆಯೊ ।
ಳಿನಿತುಮೆಡರಡಸದೆಯೆ ಮುಗಿಯುವುದಲ್ತೆ ಮದ್ಗುರುವೇ ॥
ನನಗೊಲಿದು ದಯಮಾಡಿಸೆನೆ ಚಿ ।
ದ್ಘನನೆ ನಿನಗೇಂ ಹಿರಿದೆ ಯಾಗವ ।
ಕೊನೆಗೊಳಿಸುವುದು ಬರುವೆನ್ನೈ ನಿನ್ನಿಷ್ಟದಂತಿರೆ ನಾಂ ॥ ೧೧ ॥

ಎಂದೊರೆದು ಯೋಗ್ಯೋಪಚಾರದೊ ।
ಳೊಂದಿದೊಲವಿನ ತಚ್ಚಿದಂಬರ ।
ರಿಂದೆ ತಳ್ತಾಗಮಿಸಿ ಯಾಗದ ಶಾಲೆಗಾನೆಲೆಯೊಳ್ ॥
ಬಂದಿರುವ ಸುಜ್ಞಾನತೇಜರ ।
ವೃಂದದೊಳ್ ಗುರುವೊಪ್ಪಿದನು ಪೂ ।
ರ್ಣೇಂದುವಾಗಸದುಡುಗಣದ ನಡುವೆಸೆವ ಮಾಳ್ಕೆಯೊಳು ॥ ೧೨ ॥

ಗುರುವರನ ಸಂದರ್ಶನದೆ ಸ ।
ರ್ವರ ದುರಿತವದು ಪೋಗೆ ಬಂದೆ ।
ಲ್ಲರು ನಮಿಸಲುಚಿತೋಕ್ತಿಯಿಂದವರುಗಳ ಕುಳ್ಳಿರಿಸಿ ॥
ಕಿರುನಗೆಯೊಳೀಯಾಗದೊಳು ನನ ।
ಗಿರುವ ಕಜ್ಜವದಾವುದೆಂದಾ ।
ಪರಮ ಯೋಗಿಯು ಕೇಳಲೆಂದನು ದೀಕ್ಷಿತನು ನಗುತೇ ॥ ೧೩ ॥

ಯಾಗಕಾರ್ಯವು ವಿಘ್ನವಿರಹಿತ ।
ವಾಗಿ ಮುಗಿಯುವ ತೆರದೆ ಹರ್ಷಿತ ।
ರಾಗಿ ನಲ್ವರಕೆಗಳನೀಯುವುದೊಂದನೆಯ ಕೃತಿಯು ॥
ಯಾಗಕೈತಂದವರು ನಲವಿಂ ।
ಪೋಗುತಿರಲಾಶೀರ್ವದಿಸುತನು ।
ರಾಗದಿಂ ಫಲಪಣ್ಗಳೀಯುವುದೆರಡನೆಯ ಕೃತಿಯು ॥ ೧೪ ॥

ಎಂದೊರೆದುದಕೆ ನನಗೆ ಸುಲಭಮಿ ।
ದೆಂದು ಮಂದಸ್ಮಿತದೊಳೆನೆ ಗುರು ।
ವಂದು ತತ್ಪ್ರೀತದ ಬಳಿಗೆ ಪೂಪಣ್ಣ ಪುಟ್ಟಿಗಳಾ ॥
ತಂದಿರಿಸಿದರು ಯಜ್ಞಸತ್ಕೃತಿ ।
ಯೊಂದು ವಿಘ್ನಮದಿಲ್ಲದಂತಿರೆ ।
ಮುಂದುವರಿದುದು ಸಕ್ರಮದೆ ತನ್ಮಹಿಮಕೃಪೆಯಿಂದೇ ॥ ೧೫ ॥

ಮಿಗಿಲೆನಿಪ ಸಂಭ್ರಮದೆ ಯಾಗವು ॥
ಮುಗಿದುದ್ಯೆತಂದವರು ಸರ್ವರು ।
ಬಗೆಯಲರೆ ಬಂದೆರಗೆ ಪರಸುತ್ತೆಲ್ಲರಿಗೆ ಗುರುವು ॥
ತೆಗೆತೆಗೆದು ಕೊಡುತಿರಲು ಮೊದಲಿಂ ।
ಮಿಗಿಲೆನಿಸಿ ಪುಟ್ಟಿಗಳ ಪಣ್ಗಳು ।
ಮುಗಿಯದಿರ್ದವು ತತ್ಕರಸ್ಪರ್ಶಪ್ರಭಾವದೊಳು ॥ ೧೬ ॥

ನೋಡುತಿದನಚ್ಚರಿಯೊಳುರೆ ಕೊಂ ।
ಡಾಡಿ ನಿಜಚರಣಕ್ಕೆ ಶಿರವನು ।
ನೀಡಿ ನಮಿಸುವ ದೀಕ್ಷಿತನ ಕೈವಿಡಿದು ಶಿವಯೋಗೀ ॥
ಬೇಡವೆನಗೀಗೌರವವು ನೀಂ ।
ಮಾಡಿದೀಯಾಗಕ್ಕೆ ಮೆಚ್ಚುತೆ ।
ಹೂಡಿರುವನಾಯಜ್ಞಪುರುಷನೆ ಲೀಲೆಯಿದನೆನಲು ॥ ೧೭ ॥

ಜ್ಞಾನಿಯಾದ ಚಿದಂಬರನು ಸ ।
ನ್ಮಾನನೀಯನೆ ಯಜ್ಞಪುರುಷನು ।
ನೀನೆ ನನಗಿನ್ನಾವನಲ್ಲವು ನಿನ್ನ ಲೀಲೆಯಿದು ॥
ಕ್ಷೋಣಿಯೊಳಗಿರುತಿರ್ಪ ಸರ್ವಮು ।
ತಾನುಯಾಯಿಗಳಿಷ್ಟಮೂರ್ತಿಯು ।
ನೀನೆ ದಿಟವೆಂದೆನುತೆ ತಲ್ಲಿಂಗಾರ್ಚನೆಗೆ ಬಳಿಕೇ ॥ ೧೮ ॥

ಹೊಳೆಯ ತಡಿಯೊಳಗೈದೆ ವಿರಚಿಸಿ ।
ದೆಲೆವನೆಗೆ ಕರೆದೊಯ್ಯೆ ತದ್ಗುರು ।
ತಿಲಕನೈಸಲೆ ಮುಗಿಸಿ ನಿಜಲಿಂಗಾರ್ಚನಕ್ರಿಯೆಯಾ ॥
ಬಳಿಗೆ ಪಣ್ಗಳ ಪುಟ್ಟಿಗಳ ತರಿ ।
ಸೊಲವಿನಿಂ ದೀಕ್ಷಿತರೆ ಮೊದಲಾ ।
ಗುಳಿದ ಪೂಜ್ಯರನೆಲ್ಲರನು ಕರೆಯಿಸಲು ತನ್ನೆಡೆಗೇ ॥ ೧೯ ॥

ಯಾಗಕಾರ್ಯದೊಳಳ್ತಿಯಿಂ ಸಲೆ ।
ಭಾಗವಂ ವಹಿಸಿರ್ದ ಗರಗದ ।
ಯೋಗಿ ಮಡಿವಾಳೇಶ್ವರನೆ ಮೊದಲಾದವರು ಬಂದು ॥
ಶ್ರೀಗುರುವಿನಡಿಗೆರಗಲಿನ್ನವ ।
ರಾಗಮುನದಿಂ ನಲಿದು ಪಣ್ಗಳ ।
ಭಾಗವಾಗಿಸಿ ಕೊಟ್ಟು ತಾನೆಲ್ಲರಿಗೆ ಸಮವಾಗಿ ॥ ೨೦ ॥

ಕೊಟ್ಟವೆಲ್ಲವ ನಿಮ್ಮ ಹೃದಯದೊ ।
ಳಿಟ್ಟು ಪೂಜಿಸುವಭವಗರ್ಪಿಸಿ ।
ತುಷ್ಟಿವಡೆಯುವುದೆನೆ ಫಲೋದನನಾದ ನಿನಗಿನ್ನು ॥
ಪುಟ್ಟಿಯೊಳಗೊಂದುಳಿಸಿಕೊಳ್ಳದೆ ।
ಕೊಟ್ಟುದೇಕೆಂದವರುಸುರೆ ಮೇಣ್ ।
ಪುಟ್ಟಿಗಳ ತುಂಬಿರ್ದವಾ ತನಿವಣ್ಗಳೇನೊರೆವೇಂ ॥ ೨೧ ॥

ಇದು ಫಲಾಶನನಾದುದಕೆ ಫಲ ।
ವಿದು ಭವದ್ಯೋಗೋನ್ನತಿಯ ಫಲ ।
ವಿದು ಫಲಾಹಾರೇಶನಾಮದ ಸಾರ್ಥಕತೆಯಲ್ತೇ ॥
ಸದಯಮೂರ್ತಿಯೆ ನಿನ್ನ ಲೀಲಾ ।
ಭ್ಯುದಯಗಳ ಬಣ್ಣಿಸಲು ನಮ್ಮೊಳು ।
ಚದುರತನವಿಲ್ಲೆಂದು ಮಡಿವಾಳೇಶ್ವರನು ಪೊಗಳೇ ॥ ೨೨ ॥

ಪಡೆದ ವಿಸ್ಮಯದಿಂದುಳಿದವರು ।
ಕಡು ನಲವಿನಿಂದಾಫಲೋದನ ।
ನಡಿಗೆರಗಿ ಪಲವಂದದಿಂ ಬಣ್ಣಿಸುತಿರಲು ಬಳಿಕೇ ॥
ನುಡಿದನಾಶಿವಯೋಗಿ ವಿನಯದೆ ।
ಮೃಡನ ಮಹಿಮೆಯಿದೆಲ್ಲವಾಶಿವ ।
ನಡಿಯ ಬಡ ಕಿಂಕರನೊಳೇನುಂಟೆಂತು ಪೊಗಳುವರೇ ॥ ೨೩ ॥

ಎಂದೊರೆಯೆ ಶಿವದಾಸಭಾವವ ।
ನೊಂದಿದಾನಿರಹಂಕೃತಿಯ ನುಡಿ ।
ಯಿಂದೆ ಮತ್ತಂ ಪಡೆದ ಮುದದಿಂ ಯೋಗಿವರನೊಡನೇ ॥
ಬಂದು ತಾವವರಾದಿ ಮಠಕ ।
ಲ್ಲೊಂದೆರಡು ದಿನವಿರ್ದು ಪರಕೆಯ ।
ನೊಂದಿ ತದ್ಗುರುಭಜನೆಯೊಳು ತೆರಳಿದರು ತಮ್ಮೆಡೆಗೇ ॥ ೨೪ ॥

ಬಳಿಕೆ ತದ್ಗುರುಸೇವೆಯಿಂದಂ ।
ಫಲಪದಗಳನು ಪಡೆದ ಭಕ್ತಾ ।
ವಳಿಯು ತಂದೊಪ್ಪಿಸಿದ ಧನಧಾನ್ಯಾದಿಸಂಗ್ರಹದಾ ॥
ಬಳಿಕೆಯಾಗುತ್ತಿರ್ದುದಾ ಮಠ ।
ದೊಳಗೆ ದೀನದರಿದ್ರಮುಖ್ಯ ।
ರ್ಗೊಲವಿನಿಂ ಗೈವನ್ನದಾನಾದಿಗಳಿಗನವರತಂ ॥ ೨೫ ॥

ಪೇಳಲೇಂ ಶಿವನಾಗಿ ಬಹುವಿಧ ।
ಲೀಲೆ ಗೈವಾಗುರುವಿನೆದೆಯೊಳು ।
ಕೀಲಿಸಿತು ದಾಸೋಹಮೆಂಬ ವಿಶಾಲಭಾವನೆಯು ॥
ಕೇಳಿದೆಲ್ಲರಿಗಾಸುಮಹಿಮನು ।
ಫಾಲನೇತ್ರಂಗನವರತಮಡಿ ।
ಯಾಳೆನಿಸುವುದೆ ಸಕಲಧರ್ಮದ ಸಾರವೆಂಬಿದನು ॥ ೨೬ ॥

ಅರುಹಿ ಮೊದಲಾಬಳಿಕೆ ಮತ್ತಿ ।
ನ್ನೊರೆಯುತುಳಿದಾಚಾರತತ್ವವ ।
ಕಿರಿತನಕೆ ಹರನೊಲಿವನೆಂಬೀ ನಂಬಿಕೆಯ ಬೆಳಸೀ ॥
ಪೊರೆಯುವುದೆ ನಿಜಕಾಯಕಮದೆನಿ ।
ಸಿರಲು ಬಂದವರೆಲ್ಲರುಂ ತ ।
ದ್ಗುರು ಮಠದೆ ದಾಸಾನುದಾಸರೆ ಆಗತೊಡಗಿದರು ॥ ೨೭ ॥

ಪಡೆದ ಭೃತ್ಯಾಚಾರದಿಂ ಸಲೆ ।
ನಡೆದುಕೊಳ್ಳವರಾದಿ ಭಕ್ತನು ।
ಸಡಗರದೆ ರುದ್ರಪ್ಪನೆಂಬುವ ಕರಣಿಕನು ಬಂದು ॥
ಅಡಿಗೆರಗಿ ನನ್ನಾಲಯದೆ ನೀ ।
ವಡಿಯಿಡುತೆ ಶಿವಪೂಜೆ ಗೈಯುತೆ ।
ಬಡವನನು ರಕ್ಷಿಸುವುದೆಂದಾಯೋಗಿಯನು ಬೇಡೇ ॥ ೨೮ ॥

ಆತನಾಕಿರಿತನಕೆ ಮೊದಲಿಂ ।
ಪ್ರೀತನಾಗಿರ್ದಾಗುರುವು ತ ।
ತ್ಪೂತ ಭಕ್ತನ ಮನೆಗೆ ನಡೆತಂದೆಸಗಿ ಪೂಜೆಯನು ॥
ಸಾತಿಶಯ ತೀರ್ಥಪ್ರಸಾದವ ।
ನೋತು ತದ್ಗೃಹದವರಿಗಿತ್ತು ಪು ।
ನೀತರಂ ಗೈದಿಂತು ನುಡಿದನು ಕುಲಕರಣಿಕಂಗೇ ॥ ೨೯ ॥

ಮನೆತನದ ದೀಪವನು ಬೆಳಗಿಸ ।
ಲನುದಿನದೆ ತೈಲಕ್ಕೆ ಕೊರತೆಯು ।
ದೆನಿಸದೆಂದೊರೆಯುತ್ತೆ ನೂಲುವ ರಾಟಿಯೊಂದನು ಮೇಣ್ ॥
ತನಗಿರುವ ಕಿವಿಟೊಪ್ಪಿಗೆಯನಾ ।
ತನಿಗೆ ಕೊಟ್ಟುರೆ ಪರಸಿ ತಾಂ ಬಂ ।
ದನು ಮಠಕೆ ನಲವಾಂತು ಬರುವಾ ಭಕ್ತನೊಡವೆರೆದು ॥ ೩೦ ॥

ಬಳಿಕೆ ರುದ್ರಸುಭಕ್ತನಾಗುರು ।
ತಿಲಕನುರೆ ತನಗಿತ್ತ ರಾಟಿಯೆ ।
ನಿಳಯದ್ಯೈಸಿರಿಯೆಂದು ನಂಬಿದಕತದಿನನವರತಂ ॥
ಗಳಿಕೆ ಬಳಕೆಗಳಲ್ಲಿ ಕೊರತೆಯ ।
ಸುಳಿವು ಕಾಣದೆ ಸುಖದೊಳಿರ್ದನು ।
ಫಲರಹಿತಮೆನಿಸುವುದೆ ಯೋಗಿಯು ಗೈದನುಗ್ರಹವು ॥ ೩೧ ॥

ಆವ ಮತದವರಾದೊಡಂ ನಿಜ ।
ದೇವರಿಗೆ ದಾಸೋಹಮೆಂಬ ಸು ।
ಭಾವದಿಂ ತಳ್ತಿರ್ಪ ಭಕ್ತಿಯ ಮಾರ್ಗದೊಳು ನಡೆಯೇ ॥
ಜೀವಿಗಳ ತದ್ಭಾವದೊಳಗಾ ।
ದೇವರೊಡಮೂಡುತ್ತೆ ಬೇಡಿದು ।
ದೀವನಿದು ನಿಜವೆಂದು ತನ್ನಡಿಯೊಂದಿದಖಿಳರಿಗೇ ॥ ೩೨ ॥

ಆವಗಂ ಬೋಧಿಸುವ ತದ್ಗುರು ।
ದೇವನಂ ಪ್ರತ್ಯಕ್ಷಮಾದಾ ।
ದೇವರೆಂದೇ ನಂಬಿ ಬರುತಿರ್ಪಖಿಳಮತದವರು ॥
ತೀವಿ ಮಠದೊಳು ತನ್ಮಹಾತ್ಮನ ।
ಸೇವೆಯೊಳು ತಾವಾಂತ ಮತದನು ।
ಭಾವದಿಂ ಚಿರಶಾಂತಿಯೊಂದುತ್ತಿರ್ದರನುದಿನದೇ ॥ ೩೩ ॥

ಇಂತು ಬೋಧಿಸುತಿರ್ದುದಲ್ಲದೆ ।
ಸಂತತಿಯು ಸದ್ವಿದ್ಯೆ ಧನವಾ ।
ಕ್ರಾಂತ ರೋಗನಿವಾರಣೆಯೆ ಮೊದಲಾದ ಫಲಗಳನು ॥
ಸಂತತಂ ಕರುಣಿಸುತೆ ಭಕ್ತರ ।
ಸಂತತಿಯ ಸುರಭೂಜವೆನಿಸುತೆ ।
ಸಂತಸದೊಳಾಪರಮಕರುಣಾಭರಣನಿರೆ ಬಳಿಕೇ ॥ ೩೪ ॥

ಒಂದು ಶುಭದಿನದಲ್ಲಿ ತದ್ಯೋ ।
ಗೀಂದುವಿನ ಮಠದಲ್ಲಿ ಭಕ್ತರ ।
ವೃಂದವೆಸಗುವ ಗಣಸಮಾರಾಧನೆಯ ಸಮಯದೊಳು ॥
ಮಿಂದು ಮಡಿಯುಟ್ಟಾಸನದೊಳೈ ।
ತಂದು ಮಂಡಿಸಿ ಸಕ್ರಮದೊಳಾ ।
ನಂದಮೂರ್ತಿಯು ಗುರುವು ನಿಜಲಿಂಗಾರ್ಚನೆಯನೆಸಗಿ ॥ ೩೫ ॥

ಲಿಂಗದೊಳು ನಿಲೆ ದಿಟ್ಟಿ ತತ್ಪರ ।
ಲಿಂಗಗತ ದೃಷ್ಟಿಯೊಳು ಮನವಿರೆ ।
ಕಂಗಳೀಕ್ಷಣದಲ್ಲಿ ಬೆರೆದಾ ಮನದೆ ಭಾವವಿರೇ ॥
ಹಿಂಗದಂತಿರೆ ಮನದ ಸಂಗದೆ ।
ಕಂಗೊಳಿಪ ಭಾವದೊಳು ತೃಪ್ತಿಯ ।
ಲಿಂಗವೇ ತಾನಾಗಿ ಮೈಮರೆದಿರುವ ಶಿವಯೋಗೀ ॥ ೩೬ ॥

ಕರವನಿರದೆತ್ತುತ್ತೆ ಭೀತಿಯ ।
ತೊರೆಯುವುದು ಮುಳುಗಿಸದು ಮಗನನು ।
ತೊರೆಯೆನುತ್ತೊರೆಯುತಿರೆ ಕೇಳೀ ನುಡಿಯನಚ್ಚರಿಯೊಳ್ ॥
ಬೆರೆದು ನೆರೆದವರಿಂತು ತದ್ಗುರು ।
ವರನು ಪೇಳ್ದುದರಿಂಗಿತವ ತಾ ।
ವರಿಯದಿರೆ ಕೆಲಹೊತ್ತು ಲಿಂಗಧ್ಯಾನಮಗ್ನತೆಯಾ ॥ ೩೭ ॥

ತೊರೆದು ಯೊಗಿಯು ನಲಿದು ನೋಡು ।
ತ್ತಿರುವನಿತರೊಳೆ ಬಂದು ತತ್ಪದ ।
ಕೆರಗಿ ನಿಜಸತಿಪುತ್ರರೊಡನೋರ್ವನು ಮಹೇಶ್ವರನು ॥
ಗುರುವರನ ಸನ್ನಿಧಿಗೆ ತನ್ನಯ ।
ವರಸುತನನರ್ಪಿಸಲು ಬರುತಿರೆ ।
ಸರಣಿಯೊಳು ನಡೆದುದನು ತಾನಿಂತುಸುರತೊಡಗಿದನು ॥ ೩೮ ॥

ಗುರುವೆ ಬಹುದಿನದಿಂದೆ ನಮ್ಮಗೆ ।
ದೊರೆಯದಿರೆ ಸಂತತಿಯ ಫಲವದು ।
ಕೊರಗಿ ಕಡೆಯೊಳು ನಿನ್ನ ನಾಮಸ್ಮರಣಮಂ ಗೈದು ॥
ತರುಳನೋರ್ವನು ಜನಿಸೆ ನಿಮ್ಮಯ ।
ಚರಣಸೇವೆಗೆ ಕೊಡಲು ಸಲೆ ನಿ ।
ರ್ಧರಿಸಿಕೊಂಡಿರೆ ನಾವು ಭವದನುಪಮ ಕೃಪಾಬಲದೇ ॥ ೩೯ ॥

ಹುಟ್ಟಲಿವನಿಗೆ ಶಿವಸುನಾಮವ ।
ನಿಟ್ಟು ರಕ್ಷಿಸಿ ಕಲಿಸಿ ವಿದ್ಯೆಯ ।
ನೆಟ್ಟನೀಮಠದಲ್ಲಿ ನಿನ್ನು ಪಚರಿಸಲರ್ಹತೆಯು ॥
ಪುಟ್ಟಲೀತನುಭವನನಿಲ್ಲಿಯೆ ।
ಬಿಟ್ಟು ಪೋಗಲು ಸತಿಪತಿಗಳುರೆ ।
ಪುಟ್ಟದೊಲವಿಂದಾಗಮಿಸಲೀವೂರ ಹೊಳೆಯುಲ್ಲಿ ॥ ೪೦ ॥

ಪುಟ್ಟನಿವನೀಸಾಡುವುದಕಡಿ ।
ಯಿಟ್ಟೊಡನೆ ತಜ್ಜಲದ ಸೆಳೆತದೆ ।
ಕಟ್ಟುವಡೆದದರೊಳಗೆ ತೇಲುತೆ ನಡು ಹೊಳೆಗೆ ಹೋಗೇ ॥
ತಟ್ಟಕೊಳ್ಳುತ್ತಿದೆಯ ಹರಣವ ।
ಬಿಟ್ಟನಾತ್ಮಜನೆಂದು ಮಿಗೆ ಮೊರೆ ।
ಯಿಟ್ಟು ನಿನಗಜ್ಜಯ್ಯ ಪೊರೆಯುವುದೆಂದು ಬೇಡಿದೆವು ॥ ೪೧ ॥

ಅನಿತರೊಳೆ ಜಲಮಧ್ಯದಿಂದಂ ।
ಘನತರದ ಕಾಂತಿಯನು ಪಸರಿಸಿ ।
ಮಿನುಗುತಂ ವರದಿವ್ಯ ಹಸ್ತಮದೊಂದು ಪೊರಮಟ್ಟು ॥
ತನುಜನನು ನೂಂಕಿದುದು ತೀರಕೆ ।
ಜನಿಸಿದೊಲವಿಂ ನಿನ್ನ ಮಹಿಮೆಯಿ ।
ದೆನುತೆ ಕೊಂಡಾಡುತ್ತೆ ಬಂದೆವು ಸನ್ನಿಧಿಗೆ ಗುರುವೇ ॥ ೪೨ ॥

ಹಸುಳನನು ನಿನ್ನವನ ನಿನಗ ।
ರ್ಪಿಸಿದೆನಾನೆಂದಾ ಮಹೇಶ್ವರ ।
ನುಸುರೆ ನೆರೆದ ಸಮಸ್ತರಿದ ಕೇಳ್ದಚ್ಚರಿಯನೊಂದೇ ॥
ನಸು ನಗೆಯೊಳಾಯೋಗಿ ನಿಮ್ಮೊಳು ।
ವಿಸುಪ ಭಕ್ತಿಗೆ ಮೆಚ್ಚಿ ಬಾಲಕ ।
ನಸುವನುಳಿಸಿದಳಿಂತು ಗಂಗಾಂಬಿಕೆಯು ಕೃಪೆಯಿಂದೇ ॥ ೪೩ ॥

ಎಂದು ನುಡಿದಾ ಸುಂದರಾಸ್ಯನ ।
ನಂದನನ ಕರೆದಂತಿಕಕೆ ನಲ ।
ವೊಂದಿ ಮೈದಡವುತ್ತೆ ಶಿರದೊಳಗಿರಿಸಿ ಹಸ್ತವನು ॥
ಮುಂದೆ ಮಠದಧಿಕಾರವನು ನೀ ।
ನೊಂದಿ ಭಕ್ತರ ಪೊರೆವ ಕಜ್ಜವ ।
ಮುಂದುವರಿಸುವುದೆಂದು ಪರಕೆಯನಿತ್ತನಾಗುರುವು ॥ ೪೪ ॥



ಶ್ರೀ ಫಲಾಹಾರೇಶನು ತಮ್ಮ ಮಠದೊಳಗೆ ಶಿವಪೂಜೆಗೆ ಕುಳಿತಾಗ ಕೈಯೆತ್ತಿ ಹೊಳೆಯಲ್ಲಿ ಮುಳುಗುತ್ತಿದ್ದ ಬಾಲಕನನ್ನು ಕಾಪಾಡಿದುದು.

ಬಳಿಕವಾಮಾಹೇಶ್ವರನ ಸ ।
ತ್ಕುಲಗುಣಾದಿಗಳಾತ್ಮದೃಷ್ಟಿಗೆ ।
ಹೊಳೆದೊಡಂ ಭಕ್ತರ್ಕಳರಿಯುವ ಕತದೆ ತನ್ಮುಖದಿಂ ॥
ಸಲೆ ವಿಚಾರಿಸುತಖಿಳರಿಗೆ ಕಡು ।
ನಲವನಾಗಿಸುತಾಗ ಗಣಸಂ ।
ಕುಲಸಮಾರಾಧನೆಯ ಮುಗಿಸಿದನಾಚರೋತ್ತಮನು ॥ ೪೫ ॥

ಮಗನು ಮಠದಧಿಕಾರಿಯಾಗಲು ।
ಸೊಗಸಿನಿಂ ನಲ್ವರಕೆವೆತ್ತುದ ।
ಬಗೆದು ತಮ್ಮಯ ಜನ್ಮಮೀ ಸಾರ್ಥಕಮದಾಯ್ತೆಂದು ॥
ಬಗೆಯಲದಾ೯ ದಂಪತಿಗಳಿಗೆ ।
ಮಗುಳ್ದು ಪುತ್ರರ ಪಡೆಯುತವರಾ ।
ಸೊಗದೊಳಿರಲಾಶೀರ್ವದಿಸಿ ಕಳುಹಿಸಿದನಾ ಸ್ವಾಮಿ ॥ ೪೬ ॥

ನೆರೆದವರುಮವರಾದಿ ಭಕ್ತರು ।
ಪರಮ ಹರ್ಷಿತರಾಗಿ ನಿತ್ಯದೆ ।
ಹಿರಿಯ ಗುರುವನು ಸೇವಿಸುವವೋಲ್ ಶಿವಸುನಾಮವನು ॥
ಧರಿಸಿದಾಮರಿದೇವನನು ಸ ।
ತ್ಕರಿಸತೊಡಗಿದರಾಸುಬಾಲನು ।
ಹರಿಸವೀಯುತೆ ಬೆಳೆಯುತಿರ್ದನು ಬಾಲ ಶಶಿಯಂತೇ ॥ ೪೭ ॥

**॥ ಮುಗಿದುದು ॥ ಒಟ್ಟು ಪದಗಳು ॥ ೯೬೭ ॥**



॥ ಓಂ ಸದ್ಭಕ್ತಧರ್ಮೋಪದೇಶಕಾಯನಮಃ ।

# ಇಪ್ಪತ್ತಮೂರನೆಯ ಸಂಧಿ

---

**ಸೂಚನೆ:—** ಧರೆಯ ಭಕ್ತರ ಪೊರೆವ ಕಜ್ಜವ ।
ನೆರೆಮುಗಿಸಿ ಭಕ್ತಿಯ ಸುಮಹಿಮೆಯ ।
ನರುಹಿ ಶಿಷ್ಯಂಗಡಗಿದನು ಲಿಂಗದೊಳು ತದ್ಗುರುವು ॥

ತುಂಬಿ ಪಿಡಿದಿಹ ಪುಳುವು ದಿನಗಳು ।
ತುಂಬುತಿರಲಾಬಳಿಕೆ ತಾನುಂ ।
ತುಂಬಿಯಾದಂತಾಕುಮಾರನು ಗುರುಸುಬೋಧೆಯೊಳು ॥
ತುಂಬೆ ತನ್ನೊಳು ಯೋಗಶಕ್ತಿಯು ।
ತುಂಬುವೆರೆಯಾಗುತ್ತೆ ಭಕ್ತಮು ।
ದಾಂಬುಧಿಯ ಪೆರ್ಚುಗೆಗೆ ಮರಿಯೋಗೀಶನೆನಿಸಿದನು ॥ ೧ ॥

ನಿರುತಮುಂ ಮಠಕೈತರುವ ಭ ।
ಕ್ತರಿಗೆ ಭೋಜನ ಮುಖ್ಯ ಕಾರ್ಯವ ।
ನುರು ಮುದದೆ ಕಿರುವರೆಯದೊಳೆ ತಾಂ ನಡೆಸತೊಡಗಿರುವಾ ॥
ಮರಿಗುರುವ ನಿರುಕಿಸುತೆ ಯೋಗೀ ।
ಶ್ವರನು ಹರ್ಷಿತನಾಗಿ ತಾಂ ಸಂ ।
ಚರಿಸಿ ದೇಶದವರನು ಪೊರೆವುಜ್ಜುಗದೆ ತೊಡಗಿದನು ॥ ೨ ॥

ಪೊಕ್ಕ ಪಳ್ಳಿಯು ಪಾವನವು ಪದ ।
ವಿಕ್ಕಿದಾಲಯಗಳು ಸುಸಂಪದ ।
ದಿಕ್ಕೆಯಾದವು ಬಂದು ಮೊರೆವೊಕ್ಕವರ ದುರ್ವಿಧಿಯಾ ॥
ಸೊಕ್ಕು ಮುರಿದುದು ನುತಿಪರಘಗಳು ।
ದಿಕ್ಕುಗೊಂಡೋಡಿದವು ತದ್ಗುರು ।
ವಕ್ಕರೆಯ ಸಂಚಾರಕಾಲದೆ ನಾಡಿನಗಲದೊಳು ॥ ೩ ॥

ದೇವರೇ ಶಿವಯೋಗಿರೂಪದೆ ।
ಭೂವಲಯದೊಳು ಸಂಚರಿಸುತಂ ।
ಜೀವಿಗಳನುದ್ಧರಿಸತೊಡಗಿದನಿಂತು ಕೃಪೆಯಿಂದೇ ॥
ಆವ ಜನ್ಮದ ಪುಣ್ಯವೋ ನಮ ।
ಗೀವಿಮಳ ಗುರುದರ್ಶನದೆ ಮಿಗೆ ।
ಪಾವನಾತ್ಮಕರಾಗಿ ಬಾಳುವ ಫಲವು ಲಭಿಸಿದುದು ॥ ೪ ॥

ಎಂದು ಜನತೆಯು ಪಾಡಿ ಪೊಗಳುತೆ ।
ಬಂದು ತತ್ಪರಮಾತ್ಮನಂಘ್ರಿಗೆ ।
ವಂದಿಸುತೆ ಬಯಸಿದುದಕಿರ್ಮಡಿಯಾದ ಫಲಗಳನು ॥
ಒಂದುತಿರ್ದುದು ದೇಶದಗಲದೊ ।
ಳಂದು ಭಕ್ತರ ಸುಖದ ಸುಗ್ಗಿಯೆ ।
ಬಂದ ತೆರನಾಯ್ತಾಮಹಿಮಸಂಚಾರಸಮಯವದು ॥ ೫ ॥

ಆಪರಮ ಯೋಗಿಯೊಳಗಿರ್ದುಂ ।
ಶಾಪಸದನುಗ್ರಹಗಳಾರ್ಪದು ।
ಕೋಪವಾತನೊಳಿಲ್ಲದುದರಿಂ ಕೆಲಜನರು ಗೈವಾ ॥
ಪಾಪಕೃತ್ಯವ ಕಂಡೊಡಂ ತಾಂ ।
ಶಾಪದುಕ್ತಿಯನುಳಿದನುಗ್ರಹ ।
ರೂಪಬೋಧೆಯೊಳವರ ದುಷ್ಕೃತಿಗಳೆವನಾಗುರುವು ॥ ೬ ॥

ಗುರುವರನು ಸಂಚಾರಕಾಲದೆ ।
ಬರಲು ನರಗುಂದಕ್ಕೆ ತತ್ಪುರ ।
ದರಸು ತನಗಾಮುಕ್ತಿರಾಜ್ಯದ ಸಿರಿಯು ಬಂದಂತೇ ॥
ಪರಮ ಹರ್ಷವನೊಂದಿ ಸಂಭ್ರಮ ।
ತರದಿನಂದಣವೇರಿಸುತ್ತಾ ।
ಚರಕುಲೇಂದ್ರನ ಮೆರವಣಿಗೆಯನು ಗೈಯುತರಮನೆಗೇ ॥ ೭ ॥

ಕರೆದು ತಂದು ಶಿವಾರ್ಚನೆಯ ತಾಂ ।
ಪರಮ ಮುದದಿಂ ಮಾಡಿಸುತೆ ತ ।
ದ್ಗುರುವಿನಿಂ ಧರ್ಮೋಪದೇಶವನೊಂದಿ ಕಾಣಿಕೆಯಾ ॥
ಚರಣಸನ್ನಿಧಿಗಿತ್ತು ಪಡೆದಾ ।
ಪರಕೆಯಿಂ ಧನ್ಯತೆಯನೊಂದಿದ ।
ನರಸು ಬಳಿಕಂ ಸಿದ್ಧರಾಮ ಶ್ರೇಷ್ಠಿಯನು ನಲವಿಂ ॥ ೮ ॥

ಮುಂದುಗೊಂಡಾಪುರದ ಭಕ್ತರು ।
ಬಂದು ವಂದಿಸಿ ಬಿನ್ನವಿಸಿ ಯೋ ।
ಗೀಂದುವನು ವರ ಮಠಕೆ ಬಿಜಯಂಗೈಸುತುತ್ಸವದೇ ॥
ಒಂದುತೆಲ್ಲರು ತತ್ಪದಾರ್ಚನೆ ।
ಯಿಂದೆ ಧನ್ಯತೆಯಾಬಳಿಕೆ ಗುರು ।
ವೊಂದಿದೊಲವಿಂ ಬೋಧಿಸುವ ಧರ್ಮಾಮೃತದ ಸವಿಯಾ ॥ ೯ ॥

ಹರಿಸದಿಂ ಸವಿಸವಿದು ಸಲ್ಲಿಸು ।
ತುರುತರದ ಕಾಣಿಕೆಯ ದುರಿತವ ।
ಪರಿಹರಿಸಿಕೊಳುತಿಂತಿರಲು ತಡಹಾಳ ಜನತತಿಯು ॥
ಉರು ಮುದದೊಳೈತಂದು ತಮ್ಮೂ ।
ರ್ಗ್ಗಿರದೆ ಬಿಜಯಂಗೈಸಿ ತದ್ಗುರು ।
ವರನ ಬೋಧಾಮೃತದೆ ತಣಿದಿರೆ ತಾವುಮಾಬಳಿಕೇ ॥ ೧೦ ॥

ಕೊಂಗವಾಡದ ಭಕ್ತರುಂ ವಿಮು ।
ಳಾಂಗರಾಸುರಕೋಡದವರುಂ ।
ಮಂಗಳಾಕರರಾದ ಹದ್ಲಿಯ ಜನರು ಹಡಗಲಿಯಾ ॥
ಲಿಂಗಭಕ್ತರು ಯಾವಗಲ್ಲಿನ ।
ತುಂಗಗುಣಿಗಳು ಬೆಳವಣಿಕೆಯಾ ।
ಜಂಗಮಪ್ರಿಯ ಭಕ್ತರುಂ ತಮತಮ್ಮ ನೆಲೆಗಳಿಗೇ ॥ ೧೧ ॥

ಭೋಗಮೋಕ್ಷಸುಫಲಗಳನು ಕೊಡು ।
ವಾಗುರುವ ತದ್ಭಕ್ತಿಪರವಶ ।
ರಾಗಿ ಕರೆತಂದಧಿಕಭಕ್ತಿಯೊಳಿರಿಸಿ ಮಠಗಳೊಳು ॥
ರಾಗದಿಂ ಮತಬೋಧೆಯನು ತ ।
ದ್ಯೋಗಿವರನಿಂ ಪಡೆದು ಸೌಖ್ಯದ ।
ಭೋಗವನು ಸಲೆಗಳಿಸಿದರು ತತ್ಪಾದಸೇವೆಯೊಳು ॥ ೧೨ ॥

ಬಳಿಕೆ ಮಲ್ಲಾಪುರದ ಭಕ್ತರು ।
ಸಲೆ ಬೆಳಗುವಾದಾನರಡ್ಡಿಯ ।
ಕುಲದ ಮುಖ್ಯಸ್ಥನ ಶಿವಪ್ಪನ ಮುಂದು ಗೈಯುತ್ತೇ ॥
ನಲವಿನಿಂದೈತಂದು ತದ್ಗುರು ।
ತಿಲಕನನು ಕರೆದೊಯ್ದು ಪೂಜಿಸಿ ।
ತಿಳಿದು ತನ್ಮುಖಧರ್ಮಬೋಧೆಯ ಧನ್ಯರೆನಿಸಿದರು ॥ ೧೩ ॥

ತಿಳಿಯುತೀಗುರುವಾರ್ತೆಯನು ಬಾ ।
ಚಲ ಪುರದವರು ರೋಣದವರುಂ ।
ಚೊಳಚಗುಡ್ಡದ ಭಕ್ತರುಂ ತಮ್ಮೂರ್ಗ್ಗಳಿಗೆ ಗುರುವಾ ॥
ನಲವು ಮಿಗೆ ಸಂಭ್ರಮದೆ ಕರೆತಂ ।
ದಲಘುಭಕ್ತಿಯ ಸೇವೆಯನು ಗೈ ।
ದೊಲವಿನಿಂ ಪಡೆದರು ಸದುಪದೇಶವನು ತನ್ಮುಖದಿಂ ॥ ೧೪ ॥

ಚೊಳಚಗುಡ್ಡದಿನಾಬದಾಮಿಯ ।
ನೆಲೆಗೆ ಬಂದಾಪ್ರಾಂತದೊಳು ಮಿಗೆ ।
ಮಳೆಯನಾಗಿಸಿ ಬರವ ಕಳೆದುರೆ ಬೋಧಿಸುತೆ ಬಳಿಕೇ ॥
ವಿಲಸಿತಾತ್ಮನು ಗುರುವು ತನ್ನಯ ।
ನಲವಿನಾಬಸವಣ್ಣನೊಡನೈ ।
ಸಲೆ ತೆರಳಿದನು ಗುಡ್ಡದಾಮಲ್ಲಾಪುರಕ್ಕೊಲವಿಂ ॥ ೧೫ ॥

ಅಲ್ಲಿ ಕೆಲದಿನಗಳ ಕಳೆಯುತೂ ।
ರಲ್ಲಿರುವ ಸರ್ವರಿಗೆ ಭಕ್ತಿಸ ।
ಮುಲ್ಲಸಿತ ಬೋಧೆಯನು ಮಾಡುವುದಲ್ಲದೆಯೆ ನೆರೆಯಾ ॥
ಹಳ್ಳಿಗಳಿನ್ನೈತಂದ ಸಜ್ಜನ ।
ರೆಲ್ಲರಿಗೆ ಬಯಸಿದುದನಾಚರ ।
ವಲ್ಲಭನು ಕರುಣಿಸುತೆ ಕಾಮಾರಿಯವೊಲೊಪ್ಪಿದನು ॥ ೧೬ ॥

ಒರೆವೆನೇಂ ತದ್ಗ್ರಾಮದೊಳಗಸು ।
ದೊರೆದನಾ ಮಲ್ಲಯ್ಯವೆಸರಿನ ।
ವರವೃಷಭನಾತನಿಗೆ ಗೈದ ಸಮಾಧಿಯೆಡೆಯಲ್ಲಿ ॥
ಮೆರೆಯುವುದು ತಾನಿಂದಿಗಂ ಸುರು ।
ಚಿರದ ಪಾವನ ಬಿಲ್ವ ವೃಕ್ಷವು ।
ಪುರದವರ ವಾಂಛಿತವನೀಯುವ ದೇವತರುವಾಗಿ ॥ ೧೭ ॥

ಇಂತು ಚರಿಸುತೆ ಗುರುವು ಜನರೊಳ ।
ನಂತ ಸದ್ಗುಣಗಳನು ಮೂಡಿಸಿ ।
ಸಂತಸದೊಳನ್ಯೋನ್ಯಸತ್ಪ್ರೇಮದೊಳು ನಡೆಯುತ್ತೇ ॥
ಅಂತಕಾಂತಕಭಕ್ತಿಯೊಳು ತ ।
ಮ್ಮಂತರಂಗವ ಶುದ್ಧವಾಗಿಸು ।
ತಾಂತ ಚಿರಶಾಂತಿಯೊಳು ಜೀವಿಸುವಂತೆ ಮಾಡಿದನು ॥ ೧೮ ॥

ನುಡಿದುದೇ ವರವಾಗಿ ಕೈಯಿಂ ।
ಪಿಡಿದುದೇ ಮಣಿಯಾಗಿ ದಿಟ್ಟಯ ।
ಕೆಡವಲಾರೊಳಮವರು ಸಜ್ಜನರಾಗಿ ಪದವಿಟ್ಟಾ ॥
ಎಡೆಗಳೇ ದೇವತೆಗಳಳ್ತಿಯ ।
ಗುಡಿಗಳಾಗಿ ಸುಮನದೆ ನೆನೆದುದು ।
ಬಿಡದೆ ಸೃಷ್ಟಿಯದಾಗಿ ತೋರುವ ತೆರದೆ ನಾಡಿನೊಳು ॥ ೧೯ ॥

ಚರಿಸುತದ ಪೂರೈಸಿ ಕರುಣಾ ।
ಭರಣನಾದ ಫಲಾಶನ ಪ್ರಭು ।
ಬರುತೆ ಮಠದೊಳಗನ್ನದಾನಾದಿಗಳಿಗೇನೊಂದು ॥
ಕೊರತೆ ಬಾರದ ತೆರದೆ ನಡೆಸು ।
ತ್ತಿರುವ ಮರಿಗುರುವಿನ ಸುಕಾರ್ಯದ ।
ಪರಿಯ ಕಂಡುರುಮುದಶರಧಿಯೊಳಗೀಸುತಿರೆ ಬಳಿಕೇ ॥ ೨೦ ॥

ನೆರೆಯ ಹಳ್ಳಿಯ ಲಿಂಗವಂತರು ।
ಹಿರಿಯರೊಲವಿಂ ಬಂದು ಯೊಗೀ ।
ಶ್ವರನ ಚರಣಕ್ಕೆರಗಿ ಕೈಮುಗಿದಿಂತು ಬೇಡಿದರು ॥
ಗುರುವರನೆ ಕಟ್ಟಿಸುತೆ ಗುಡಿಯನು ।
ಪರಮ ಶಿವಲಿಂಗಪ್ರತಿಷ್ಠೆಯ ।
ವಿರಚಿಸಲು ಸಂಕಲ್ಪಿಸಿರುವೆವು ವೀರಶೈವರಿಗೇ ॥ ೨೧ ॥

ಸರಿಯೆನಿಸುವುದೆ ಗುಡಿಗಳಾಸ್ಥಾ ।
ವರಸುಲಿಂಗನಿರೀಕ್ಷಣಾದಿಗ ।
ಳುರುನಿಷಿದ್ಧಗಳೆಂಬರಿನ್ನೀ ಧರ್ಮಸಂಶಯವು ॥
ಕೊರೆಯುತಿರ್ಪುದು ನಮ್ಮನಿದ ನೀಂ ।
ಪರಿಹರಿಸಿ ಪೊರೆಯೆನಲು ತದ್ಗುರು ।
ದರಹಸಿತಮುಖನಾಗುತವರಿಗೆ ನುಡಿದನೀತೆರದೇ ॥ ೨೨ ॥

ವೀರಶೈವರುಪಾಸನೆಯ ಸುವಿ ।
ಚಾರವವರ ಸುಧರ್ಮತತ್ವದ ।
ಸಾರವೆನಿಸುವುದದನರಿಯಲಾಗುಡಿಯ ಲಿಂಗಗಳೊಳ್ ॥
ತೋರುತಿರುವೀಧರ್ಮಸಂಶಯ ।
ವಾರೊಳಂ ಸಂಭವಿಸದಂತೆ ನಿ ।
ವಾರಿಸಲ್ಕನುಕೂಲಮೆನಿಸುವುದೊರೆವೆನಿನ್ನದನು ॥ ೨೩ ॥

ಧರಿಸಿದಿಷ್ಟಸುಲಿಂಗಪೂಜಾ ।
ಚರಣೆಯೇ ಧಾರಣಮೆನಿಸುವುದು ।
ಪರಮ ತಲ್ಲಿಂಗದ ಮನನವೇ ಧ್ಯಾನಮೆನಿಸುವುದು ॥
ನಿರುತಮಾಲಿಂಗದೊಳು ಮಾನಸ ।
ವೆರಕಗೊಳಲು ಸಮಾಧಿಯಪ್ಪುದು ।
ಪರಿಕಿಸಲ್ಕಿವು ಮೂರು ಶಿವಯೋಗಾಂಗಮೆನಿಸುವವು ॥ ೨೪ ॥

ಅನುದಿನದೊಳಿಂತಿಷ್ಟಲಿಂಗಾ ।
ರ್ಚನವುನನಲೀನಂಗಳೊಡನಿ ।
ನ್ನನಘ ತತ್ತೀರ್ಥಪ್ರಸಾದದ ಸಮರಸದ ಸುಖವಾ ||
ಅನುಭವಿಪ ಸಿಯುವುವಿದುಪಾಸನೆ ।
ಯೆನಿಸುವುದು ಗುರುಜಂಗಮೋಪಾ ।
ಸನೆಯನಿದರಂತೆಸಗುವುದು ವಿಧಿ ವೀರಶೈವರಿಗೇ || ೨೫ ||

ಸತಿಯು ಸಮರಸಭಾವದಿಂದಂ ।
ಪತಿಯ ಸೇವಿಸುವಂದದಿಂದಿ ।
ನ್ನಿತರ ಪುರುಷರ ಸೇವಿಸುವುದಘಮೆನಿಸಿದೊಡಮವರೊಳ್ ||
ನುತಗುಣಂಗಳು ಕಂಡೊಡವರು ।
ನ್ನತದ ದರ್ಶನವೆಸಗಿ ತದ್ಗುಣ ।
ನುತಿಯ ಗೈದೊಡೆ ದೋಷವೆನಿಸದು ತಿಳಿವೊಡಿದರಂತೇ || ೨೬ ||

ಧೃತ ಸುಲಿಂಗೋಪಾಸನೆಯ ಸ ।
ದ್ವ್ರತವನುಳಿದಿನ್ನನ್ಯಲಿಂಗ ।
ವ್ರತವ ಗೈದೊಡೆ ದುರಿತಮಪ್ಪುದು ವೀರಶೈವರಿಗೇ ||
ಕ್ಷಿತಿಯ ಪುಣ್ಯ ಸ್ಥಾನದೊಳ್ ಸ್ಥಾ ।
ಪಿತದ ಶಿವಲಿಂಗಗಳ ದರ್ಶನ ।
ನುತಿಗಳಿಂದಂ ದೋಷವಂಟದು ಧರ್ಮಸೂಕ್ಷ್ಮವಿದು || ೨೭ ||

ಇಷ್ಟಲಿಂಗವನುಳಿಯುತನ್ಯ ಕ ।
ನಿಷ್ಠದೇವತೆಗಳನು ನಿಜಕುಲ ।
ದಿಷ್ಟ ದೈವಗಳೆಂದು ತದುಪಾಸನೆಗೆ ಮನವೀವಾ ||
ದುಷ್ಟ ಭಾವವ ಕಳೆವ ಕತದಿಂ ।
ಕಟ್ಟು ಮಾಡಿದರಿತರದೈವದ ।
ಬಟ್ಟೆಗಡಿಯಿಡದಂತೆ ಶರಣರು ತಮ್ಮ ವಚನಗಳಿಂ || ೨೮ ||

ಇತರ ಧರ್ಮಮಧರ್ಮವೆಂಬುವ ।
ಮತಿಯಿರದು ಶಿವಶರಣರಲ್ಲಿ ।
ನ್ನಿತರ ಧರ್ಮದೊಳಧಿಕ ಕಷ್ಟದಿನಲ್ಪ ಫಲಮಕ್ಕುಂ ||
ಅತಿಸಹಜಮಾದಲ್ಪ ಕಷ್ಟದೊ ।
ಳತುಳ ಫಲಮಂ ವೀರಶೈವೋ ।
ನ್ನತದ ಧರ್ಮವು ಕೊಡುವುದೆಂದವರೊರೆವರನವರತಂ || ೨೯ ||

ಅರಿಯೆ ಲಿಂಗಾಂಗಿಗಳು ಗುಡಿಗಳ ।
ವಿರಚಿಸುತೆ ಲಿಂಗಪ್ರತಿಷ್ಠೆಯ ।
ನೆರೆ ನೆಗಳ್ಚುವುದಿತರರಾಲಿಂಗಗಳುಪಾಸನೆಯಿಂ ॥
ಹರಸುಭಕ್ತಿಯನಾಂತು ಮೋಕ್ಷ ಸ ।
ದ್ಗುರುವಿನಿಂ ದೀಕ್ಷೆಯೊಳು ಲಿಂಗವ ।
ಧರಿಸಿಕೊಳಲೆಂಬೊಂದು ಧಾರ್ಮಿಕ ಭಾವನೆಯನಾಂತು ॥ ೩೦ ॥

ಈ ತೆರದ ಸದ್ಭಾವನೆಯು ಸಂ ।
ಜಾತಮಾಗಿರೆ ನಿಮ್ಮೊಳಗೆ ಸಂ ।
ಪ್ರೀತಿಯಿಂ ಕಟ್ಟಿಸಿರಿ ದೇಗುಲವೆಂದರುಹಲವರು ॥
ಪೂತ ಗುರುಪದಕೆರಗುತಂ ಸುವಿ ।
ನೀತಭಾವದೆ ನಿಮ್ಮ ಬೋಧೆಯ ।
ನೋತು ನಡೆಸುವೆವೆಂದು ಪರಕೆಯ ಪಡೆದು ತೆರಳಿದರು ॥ ೩೧ ॥

ಮಲರಹಿತ ಗುರವಾಗಿ ಜಂಗಮ ।
ತಿಲಕನಾಗಿ ಸುಲಿಂಗವಾಗು ।
ತ್ತಲದ ತೀರ್ಥದನಾಗಿ ನಾಡೆ ಪ್ರಸಾದಮಯನಾಗಿ ॥
ಬೆಳಗುವವಮಳಿನ ಭೂತಿಯಾಗಿ ಸು ।
ಲಲಿತವರರುದ್ರಾಕ್ಷಿಯಾಗು ।
ಜ್ವಲಿಪ ಘನತರ ಮಂತ್ರವಾಗಿ ಸಮಸ್ತರಿಗೆ ಯೋಗೀ ॥ ೩೨ ॥

ತೊಳಗುತಂ ಮಠದಲ್ಲಿ ಕೆಲದಿನ ।
ಗಳೆಯುತಂ ತಾನೊಂದು ದಿನದೊಳು ।
ನಲವಿನಿಂ ನರಗುಂದ ತೊರಗಲ್ ರಾಮದುರ್ಗಗಳಾ ॥
ನೆಲದೆರೆಯರೊಡನುಳಿದ ಭಕ್ತಾ ।
ವಳಿಯ ಕರೆಯಿಸಲವರು ಭಕ್ತಿಯ ।
ತಳೆದು ತಳುವದೆ ಬಂದು ನಿಜಪದಕೆರಗಲಾಬಳಿಕೇ ॥ ೩೩ ॥

ಮುಗಿದುದೆನ್ನಯ ಕಜ್ಜವಿಳೆಯೊಳು ।
ನಗಜೆಯಾಣ್ಮನನುಜ್ಞೆಯಾದುದು ।
ಸೊಗದೊಳಾಂ ಲಿಂಗದೊಳಗಡಗುವೆನಿನ್ನು ಕೆಲದಿನದೇ ॥
ಮಗುವಿಗೀ ಶಿವಮೂರ್ತಿಗೈಸಲೆ ।
ಜಗದ ಜೀವಿಗಳನು ಪೊರೆಯುವು ।
ಜ್ಜುಗದ ಜಂಗಮ ಪಟ್ಟವನು ಕಟ್ಟುವುದು ನೀವೆಂದು ॥ ೩೪ ॥

ನಸು ನಗೆಯೊಳಾಯೋಗಿಯಿಾಪರಿ ।
ಬೆಸಸಿದುದ ಕೇಳ್ದೊಡನೆ ಸರ್ವರಿ ।
ಗಸುವೆ ಪೋದಂತಾದೊಡಂ ತದ್ವ್ಯಸನವನು ಕಳೆದು ॥
ಪೊಸ ಬಗೆಯ ಚೈತನ್ಯವನು ಮೂ ।
ಡಿಸುವ ಮಹಿಮೆಯ ಮರಿಗುರುವ ಕರು ।
ಣಿಸಿದನೆಂಬೀ ಮುದದೊಳವರೊಪ್ಪುತೆ ತದುಕ್ತಿಯನು ॥ ೩೫ ॥

ದೊರೆಗಳಪ್ಪಣೆಯಂತೆ ಸರ್ವರು ।
ಗುರುಮಠವ ಸಿಂಗರಿಸುತಂ ತಂ ।
ದಿರಿಸಿ ಚರಪಟ್ಟಾಧಿಕಾರಕೆ ಬೇಕೆನಿಸಿದುದನು ॥
ಕರೆಯಿಸುತೆ ಗುರುಚರರ ಮಾಹೇ ।
ಶ್ವರರ ಮೇಣ್ ಭಕ್ತರ ಸುಕಾರ್ಯೋ ।
ತ್ಕರದೆ ಭಾಗವ ವಹಿಸಿದರು ನಿಶ್ಚಿತದ ಶುಭದಿನದೇ ॥ ೩೬ ॥

ಆಗಮಸ್ತುತ ಗುರುಚರರ ಮುಂ ।
ದಾಗಮೋಕ್ತ ವಿಧಾನದಿಂ ತ ।
ಳ್ತಾಗಮಿಕರುಚ್ಚರಿಪ ಮಂತ್ರದ ಪುಣ್ಯರವದೊಡನೇ ॥
ಆಗುತಿರೆ ಶುಭವಾದ್ಯನಿನದವು ।
ಸಾಗಿದುದು ಶಿವಮೂರ್ತಿಗೆಸಗುವ ।
ರಾಗವಿರಹಿತ ಜಂಗಮದ ಸಂಸ್ಕಾರಸತ್ಕ್ರಿಯೆಯು॥ ೩೭ ॥

ಪರಿಸಮಾಪ್ತಿಯನೊಂದೆ ಚರಸಂ ।
ಸ್ಕರಣವಿಧಿ ವರಪೀಠದೊಳು ಕು ।
ಳ್ಳಿರಿಸಿದಾಶಿವಮೂರ್ತಿಜಂಗಮನುತ್ತಮಾಂಗದೊಳು ॥
ಕರವನಿತ್ತಾಶೀರ್ವದಿಸಿ ತ ।
ತ್ಪರಮ ಯೋಗೀಶ್ವರನು ಕೊಡೆ ತಾಂ ।
ಕರುಣದಿಂದೆ ಚರಾಧಿಕಾರದ ಮುದ್ರೆಗಳ ಬಳಿಕೇ ॥ ೩೮ ॥

ಆರ್ತರಕ್ಷಣಕಾರ್ಯದೊಳು ಶುಭ ।
ಕೀರ್ತಿವೆತ್ತಿರ್ಪಿರ್ೀರ್ವರಿಗೆ ಚರ ।
ಮೂರ್ತಿಗಳಿಗಾರತಿಯನೆಸಗುತೆ ಜಯರವದೆ ಬಳಿಕೇ ॥
ಛತ್ರ ಚಾಮರಮುಖ್ಯವಾದ ಪ ।
ವಿತ್ರ ವಸ್ತೂತ್ಕರದ ಕಾಣಿಕೆ ।
ಯರ್ತಿಯಿಂದರ್ಪಿಸುತೆ ಸರ್ವರು ಪಾಲಿಕೋತ್ಸವವಾ ॥ ೩೯ ॥

ನಡೆಯಿಸುತೆ ಸಂಭ್ರಮದೆ ಜನ್ಮದ ।
ಜಡರನೆಲ್ಲವ ಕಳೆದುಕೊಂಡುರೆ ।
ಪಡೆದು ಮಠದವರಿಂ ಪ್ರಸಾದಾಶೀರ್ವಚನಗಳನು ॥
ಕಡುನಲವಿನಿಂ ತೆರಳಿದರು ತ ।
ಮ್ಮಡೆಗಳಿಗೆ ಮೊದಲಂತೆ ಮಠದೊಳು ।
ನಡೆಯತೊಡಗಿತು ಭಕ್ತರಕ್ಷಣಕಾರ್ಯವನುದಿನದೇ ॥ ೪೦ ॥

ವಿರತಿಮೂರ್ತಿಯು ಭಕ್ತರಕ್ಷಣ ।
ಪರಮಕಾಯಕಭಾರವನು ತಾ ।
ನಿರಿಸಿ ಶಿವಮೂರ್ತಿಯೊಳು ಲಿಂಗಧ್ಯಾನಪರನಾಗಿ ॥
ಇರುತಿರಲು ತದ್ಗುರುವೆ ತನ್ನಯ ।
ಹರಣವೆಂದುರೆ ನಂಬಿದಾಮರಿ ।
ಗುರುವಿಗಾತನ ಸೇವೆಯೇ ಲಿಂಗಾರ್ಚನಮದಾಯ್ತು ॥ ೪೧ ॥

ಬಳೆದ ವೈರಾಗ್ಯದೊಳು ಮುಪ್ಪನು ।
ತಳೆದ ಫಲಭಕ್ಷಣದ ಗುರುವಿಗ ।
ಮೆಳೆತನದೆ ರಕ್ಷಿಸಿದ ಮಾತೃಪ್ರೇಮಹೃದಯವನು ॥
ಬಳಿಕೆ ನೆನಪಿಗೆ ತಂದುಕೊಟ್ಟುದು ।
ಬಳಿಯೊಳೈಸಲೆ ಕುಳಿತು ಮರಿಗುರು ।
ವೊಲವು ಮಿಗೆ ದಿನದಿನದೆ ತನ್ನುಪಚರಿಪ ಪದ್ಧತಿಯು ॥ ೪೨ ॥

ಧ್ಯಾನವಿಮುಖತೆಯೊಂದಿ ತನ್ನ ।
ಪ್ರಾಣಲಿಂಗವೆ ಆದ ಶಿಷ್ಯಗೆ ।
ಭೂನುತನು ಗುರುವೊಲಿದು ಶಿವಯೋಗದ ರಹಸ್ಯವನು ॥
ತಾನರುಹುತಿರೆ ತನ್ಮಹಿತ ಯೋ ।
ಗಾನುಭವದೊಳು ಬಿಡದೆ ತನಗೆ ಸ ।
ಮಾನನಾದಾಮರಿಗುರುವ ಕಂಡಾಂತನತಿಮುದವಾ ॥ ೪೩ ॥

ಭಕ್ತರೆಳಸಿದ ಫಲವನೀಯುವ ।
ಶಕ್ತಿಯೇ ಶಿವಭಕ್ತಿಯೆಂದರಿ ।
ಮುಕ್ತಿ ಕನ್ಯೆಯ ಜನನಿಯೇ ತದ್ಭಕ್ತಿಯೆಂದೊರೆವಾ ॥
ಸೂಕ್ತಿಯನು ನೆರೆ ನಂಬಿ ಯೋಗದ ।
ಶಕ್ತಿಯೇ ಹಿರಿದೆಂಬುದುಳಿದು ವಿ ।
ರಕ್ತಿಯಿಂದಿರೆ ನೀನೆ ಶಿವನಾಗುವುದು ಸತ್ಯವಿದು ॥ ೪೪ ॥

ಶಿವಮತದೆ ಗುರುಚರರಿಗಿನ್ನುಳಿ ।
ದವರಿಗಂ ಶಿವಪೂಜೆಯಿಂ ಲಭಿ ।
ಸುವ ಮಹತ್ಫಲವೇ ಸುಭಕ್ತಿ ವಿಕಾಸವಿದನುಳಿದು ॥
ಶಿವನ ಬೇಡುವುದಾವುದಿಲ್ಲವು ।
ಶಿವನ ಶರಣರಿಗೆಂಬ ಭಕ್ತಿಯು ।
ಸುವಿಮಳದ ಮಹಿಮೆಯನು ಶಿಷ್ಯಂಗೊರೆಯುತಾಬಳಿಕೇ ॥ ೪೫ ॥

ವೀರಶೈವರು ತಮ್ಮ ಲಿಂಗಾ ।
ಕಾರದಾತ್ಮನ ಶಕ್ತಿನಾಮದು ।
ದಾರಭಕ್ತಿಯ ಸದ್ವಿಕಾಸವ ಸಾಧಿಸುವ ಕೃತಿಗೇ ॥
ಮೂರು ಬಗೆಯಿಂದಿರ್ಪ ಮುಖ್ಯಾ ।
ಧಾರಗಳು ತಾವಾಗಿ ಪಂಚಾ ।
ಚಾರವಷ್ಟಾವರಣಮುಂ ಷಟ್‌ಸ್ಥಲಮಿವೆಸೆಯುವವು ॥ ೪೬ ॥

ಮೂರು ಬಗೆಯಾದಿವುಗಳಮಳ ವಿ ।
ಚಾರವನು ಬೋಧಿಸುತೆ ಜನ್ಮೋ ।
ದ್ಧಾರಕಾರ್ಯವನೆಸಗುವುದು ನೀಂ ವೀರಶೈವರೊಳು ॥
ಬೇರೆಯವರಿಗೆ ಶಿವಸುಭಕ್ತಿಯ ।
ದಾರಿಗಳನವರಿಷ್ಟದಂತಿರೆ ।
ತೋರಿಸುತ್ತವರುಗಳ ಪೊರೆವುದು ನಿನ್ನ ಕಾಯಕವು ॥ ೪೭ ॥

ಎಂದರುಹಿ ಶಿವಮೂರ್ತಿಗಾಯೋ ।
ಗೀಂದು ತಾಂ ಲಿಂಗೈಕ್ಯನಾಗುವು ।
ದೆಂದದೆಂಬುದನೊರೆದು ತನ್ನ ಸಮಾಧಿರಚನೆಯನು ॥
ಮುಂದೆ ಮಠದೊಳು ಮಾಡಲಿರ್ಪೆಡೆ ।
ಯೊಂದ ಸೂಚಿಸುತಿಷ್ಟಲಿಂಗಾ ।
ನಂದಪರವಶನಾದನಾತನು ಮೊದಲಮಾಳ್ಕೆಯೊಳು ॥ ೪೮ ॥

ಗುರುವು ಲಿಂಗದೊಳಡಗುವಾಶುಭ ।
ಕರದ ದಿನವುಂ ಕೇಳ್ದ ಶಿಷ್ಯಂ ।
ಗರೆಗಳಿಗೆ ನಿಶ್ಚೇಷ್ಟತೆಯನೊದಗಿಸಿರಲಾಬಳಿಕೇ ॥
ನಿರುತವ್ಮೈಸಲೆ ಗೈವ ನಿಜಗುರು ।
ಚರಣ ಸೇವೆಯು ಮುಂದೆ ದೊರೆಯದೆ ।
ಯಿರುವುದರಿಂದೆದೆ ಕರಗಿ ಕಣ್ಣೀರಾದುದಾತನಿಗೇ ॥ ೪೯ ॥

ತನ್ನ ತನುವನು ಲಿಂಗದೊಳಗಿ ।
ಟ್ಟಿನ್ನ ತನುವಿನೊಳಿನ್ನು ತಾನೇ ।
ನನ್ನಿ ನಲ್ಮೆಯೊಳಿರುವನಾಗುರುವೆಂಬ ಸನ್ಮತಿಯು ॥
ಖಿನ್ನವಾದಾಮನದ ಮರವೆಯ ।
ಛಿನ್ನವಾಗಿಸಿದೊಡನೆ ಶಿಷ್ಯನು ।
ಕಣ್ಣಹನಿಗಳನೊರಸಿ ಸುಸ್ಥಿರಚಿತ್ತನಾಗುತ್ತೇ ॥ ೫೦ ॥

ಗುರುವಿನಪ್ಪಣೆಯಂತೆ ತದ್ಗುರು ।
ವರಸಮಾಧಿಯ ಪೂರ್ವಸಿದ್ಧತೆ ।
ಯುರು ರಚಿಸಿ ನರಗುಂದ ನಗರಾಧಿಪನೆ ಮೊದಲಾದ ॥
ಪರಮ ಭಕ್ತರನೆಲ್ಲರನು ತಾಂ ।
ಕರೆಯಿಸುತ್ತವರೊಡನೆ ತಳ್ತಾ ।
ನಿರುಪಮಿತ ಲೀಲಾಚರಿತನುರುಭಜನೆಯೊಳು ತೊಡಗೇ ॥ ೫೧ ॥

ಮತ್ತೊರೆವೆನೇಂ ಧ್ಯಾನಸೌಖ್ಯಾ ।
ಯತ್ತನಾದಾಪರಮಗುರುವೆ ।
ಚ್ಚತ್ತು ನೆರೆದಿರ್ದಖಿಳಭಕ್ತರ್ಗೆಸಗಿ ಪರಕೆಯನು ॥
ಇತ್ತು ನಿಜಕರಚರಣದೃಷ್ಟಿಸು ।
ಚಿತ್ತವಚನದ ಪರುಷಮಣಿಗಿ ।
ರ್ದತ್ಯಧಿಕಶಕ್ತಿಯನು ವರಶಿಷ್ಯಂಗೆ ತಾಂ ಬಳಿಕೇ ॥ ೫೨ ॥

ಶಾಲಿವಾಹನ ನೃಪಶಕದ ಹದಿ ।
ನೇಳುನೂರರ ಮೇಲಿನ್ನೈವ ।
ತ್ತೇಳನೆಯ ಮನ್ಮಥದ ಫಾಲ್ಗುಣ ಕೃಷ್ಣಪಕ್ಷದೊಳು ॥
ಕೀಲಿಸಿರ್ದೇಕಾದಶಿಯ ಸುವಿ ।
ಶಾಲ ರವಿವಾರದೊಳು ತತ್ಕರು ।
ಣಾಳುಮೂರ್ತಿಯು ಲಿಂಗದೊಳಗಾದನು ಮಹಾಮುದದೇ ॥ ೫೩ ॥

ಇಂತು ಲಿಂಗದೊಳಡಗಿದಾಶಿವ ।
ಶಾಂತಮೂರ್ತಿಯನಲ್ಲಿ ನೆರೆದವ ।
ರಂತರಂಗದ ಪೀಠದೊಳು ಕುಳ್ಳಿರಿಸುತಾಬಳಿಕೇ ॥
ಆಂತು ಸದ್ಭಕ್ತಿಯನು ತನ್ಮಠ ।
ದಂತರದ ಭದ್ರಾಸನದೊಳಗ ।
ನಂತವಿಧ ಗುರುಗೀತೆಗಳ ಪಾಡುತ್ತೆ ಕುಳ್ಳಿರಿಸಿ ॥ ೫೪ ॥

ಪಾಡಿ ಬಾಯ್ತುಣಿಯದಿರೆ ಪೂಜೆಯ ।
ಮಾಡಿ ಕೈ ಸಾಕೆನಿಸದಿರೆ ಸಲೆ ।
ನೋಡಿ ಕಣ್ ಪಡೆಯದಿರೆ ತೃಪ್ತಿಯನಿಂತು ಸಕ್ರಮದಿಂ ॥
ಮಾಡಿ ಸರ್ವಕ್ರಿಯೆಗಳನು ಮುದ ।
ಗೂಡಿ ಗುರುಮೂರ್ತಿಗೆ ಸಮಾಧಿಯ ।
ಮಾಡಿದರು ನಾಡಗಲದವರೈತಂದು ನೆರೆ ಕೂಡಿ ॥ ೫೫ ॥

ಪರಿಯುತಿರೆ ತೆಂಗಾಯ್ಗಳುದಕವು ।
ಹರಡುತಿರೆ ಧೂಪದ ಸುಧೂಮವ ।
ದುರಿಯುತಿರೆ ಬೆಳಗುತಿಹ ಕಪ್ಪುರದಾರತಿಯು ನಲಿದು ॥
ಧರಿಪ ನಿರ್ಮಳ ಪತ್ರಪುಷ್ಪೋ ।
ತ್ಕರದೊಳಡಗಿರೆ ಗುರುಸಮಾಧಿಯು ।
ಪರಮಭಕ್ತಿಯೊಳಿಂತು ಗೈದರು ಗುರುಗೆ ಮಂಗಳವಾ ॥ ೫೬ ॥

ಮಂಗಳವು ಗುರುಪುಂಗವಗೆ ಸ ।
ನ್ಮಂಗಳವು ವರಜಂಗಮಗೆ ಜಯ ।
ಮಂಗಳವು ನಿಜಲಿಂಗಸೌಖ್ಯಾಲಿಂಗಿತಾತ್ಮನಿಗೇ ॥
ಮಂಗಳವು ನತಕಲ್ಪಭೂಜಗೆ ।
ಮಂಗಳವು ಲಿಂಗೈಕ್ಯನಿಗೆ ವರ ।
ಮಂಗಳವು ವಿಲಸತ್ಪಲಾಹಾರೇಶನಾಮಕಗೇ ॥ ೫೭ ॥

**॥ ಮುಗಿದುದು ॥ ಒಟ್ಟು ಪದಗಳು ॥ ೧೦೨೪ ॥**



॥ ಓಂ ಪ್ರಾಣದಾನಾದಿಲೀಲಾಜಾಲಾಯನಮಃ ॥

# ಇಪ್ಪತ್ತುನಾಲ್ಕನೆಯ ಸಂಧಿ

---

**ಸೂಚನೆ:—** ಕ್ಷೋಣಿಗದ್ಭುತಮಾಗೆ ಗೈದಾ ।
ಪ್ರಾಣದಾನಾದಿಗಳ ಲೀಲೆಯ ।
ತಾನೆಸೆದು ಶಿವಮೂರ್ತಿಗುರುವಡಗಿದನು ಲಿಂಗದೊಳು ॥

ಒರೆವೆನಿನ್ನವರಾದಿಯಾಮಠ ।
ದೆರಡನೆಯ ಗುರುವಾಗಿ ಭಕ್ತರ ।
ಪೊರೆದ ಶಿವಮೂರ್ತಿಯ ಸುಚರಿತವನಾಚರೋತ್ತಮನು ॥
ಗುರುಸಮಾಧಿಯ ನಿತ್ಯಪೂಜೆಯ ।
ಪರಮ ಸಂಭ್ರಮದಿಂದೆ ಮಾಡಿಸು ।
ತಿರುವುದಲ್ಲದೆ ಮಾರ್ಗಶಿರಪೌರ್ಣಿಮೆಯ ಶುಭದಿನದೇ ॥ ೧ ॥

ಅನ್ನದಾನಾದಿಗಳನೆಸಗುತೆ ।
ಮಾನ್ಯ ಪಂಡಿತವೃಂದ ಮುಖದಿಂ ।
ದುನ್ನತದ ಧರ್ಮದ ಸುಬೋಧೆಯನಾಗಿಸುತೆ ಮತ್ತಂ ॥
ತನ್ನ ಗುರುಮೂರ್ತ್ತಿಯ ರಥೋತ್ಸವ ।
ಪುಣ್ಯಕೃತಿ ಪ್ರತಿವತ್ಸರದೆ ವಿ ।
ಚ್ಛಿನ್ನಮಾಗದೆ ನಡೆಯುವಂತೇರ್ಪಡಿಸಿದನು ನಲವಿಂ ॥ ೨ ॥

ತೋಷದಿಂದಂ ಗುರುವಿನಂತೆ ಫ ।
ಲಾಶನವ್ರತವಾಂತು ತಾನುಂ ।
ದೇಶಪರ್ಯಟನವನು ಕೈಕೊಂಡಾಶ್ರಿತರಿಗೊಲಿದು ॥
ಆಶಿಸಿದ ಫಲಗಳನು ಕರುಣಿಸಿ ।
ಪೋಷಿಸುವ ಕಜ್ಜದೊಳು ತೊಡಗು ।
ತ್ತಾ ಶಿವಸ್ವಾಮಿಯು ಸುಭಕ್ತಪ್ರೇಮಿ ತಾನೊರ್ಮೆ ॥ ೩ ॥

ಮೆರೆಯುತಿರೆ ನಿಜಗುರುವಿನದ್ಭುತ ।
ವಿರತಿತೇಜವು ತನ್ನೊಳಂ ಸಂ ।
ಚರಿಸುತ್ತೈತರೆ ಹಂಚಿನಾಳೆಂಬೂರ ಕೆರೆಯೆಡೆಗೇ ॥
ಅರಿದಿದನು ತದ್ಗ್ರಾಮದವರಾ ।
ಗುರುವರನಿಗಿದಿರ್ಪ್ಪಂದು ವಂದಿಸು ।
ತೊರೆದರೂರೊಳು ಮಾರಿಕಾರೋಗವದು ಹಿರಿದಾಗಿ ॥ ೪ ॥

ಹರಡಿರುವುದಲ್ಲದೆಯೆ ಗೌಡನ ।
ಹರಣವುಳಿವುದು ಸಂಶಯಮದೆನಿ ।
ಸಿರುವುದಾತನಿಗಂ ರುಜೆಯದಾಕ್ರಮಿಸಿರುವ ಕತದೇ ॥
ಗುರುವೆ ನೀನೂರೊಳಗೆ ಬರದೀ ।
ಕೆರೆಯ ತಡಿಯಲ್ಲಿರುವುದೊಳ್ಳಿತು ।
ವಿರಚಿಸುವೆವನುಕೂಲವಾದ ಕುಟೀರವನು ನಿನಗೇ ॥ ೫ ॥

ಎಂದು ಕೈಮುಗಿದೆಂದ ಭಕ್ತರ ।
ವೃಂದಕಾಗುರು ನಸುನಗೆಯೊಳಿಂ ।
ತೆಂದನೆನ್ನಯ ಹರಣವಿದು ನಿಮ್ಮಸುವಿನಿಂ ಹಿರಿದೇಂ ॥
ಬಂದೊಡೆನಗಾಕುತ್ತವದರಿಂ ।
ದೆಂದಿಗಂ ಭಯವಿಲ್ಲವೆನುತ್ತೈ ।
ತಂದನವರೊಡನಾಪುಹಿಮನಾಗ್ರಾಮಣಿಯ ಮನೆಗೇ ॥ ೬ ॥

ದಿಕ್ಕು ತೋರದೆಯುಳಲಮುಡುವೊಳು ।
ಪೊಕ್ಕಿರುವ ಮನೆಯವರ ಮಧ್ಯದೆ ।
ತೆಕ್ಕೆಗೊಂಡಾ ಮೃತ್ಯುವಿಗೆ ವಶನಾದ ಗೌಡನಿಗೆ ॥
ಅಕ್ಕರೆಯೊಳಾಯೋಗಿ ಭಸ್ಮವ ।
ನಿಕ್ಕೆ ಹಣೆಯೊಳು ಹರಣದಲೆದಾ ।
ಟಕ್ಕೆ ಮೊದಲಾಯ್ತೆಲ್ಲರೆದೆಯಿಂದುಕ್ಕಿದುದು ಮುದವು ॥ ೭ ॥

ನೆಲಕೊರಗಿದಾಗೌಡನೊಳು ಕಂ ।
ಗೊಳಿಸೆ ನವಚೇತನವನಿತರೊಳೆ ।
ತಿಳಿಯೆ ಗುರುಕೃಪೆಯಿಂದೆ ಬದುಕಿದೆನೆಂಬುದಾಕ್ಷಣವೇ ॥
ತಳುವದೆದ್ದೈತಂದು ತದ್ಗುರು ।
ತಿಲಕನಡಿದಾವರೆಗೆರಗಿ ಕೈ ।
ಗಳ ಮುಗಿದು ಪೊಸಜನುಮವಿತ್ತೆಯ ತಂದೆ ನೀಂ ಬಂದು ॥ ೮ ॥

ಹಿಂದಿನೆನ್ನಯ ಹಿರಿಯರಾಸ್ತೈ ।
ಪಿಂದಮಿಲ್ಲಿಗೆ ಬರುತಮುಳ್ತಿಯ ।
ಕಂದನಾದೆನಗಸುವ ಕೊಟ್ಟಾಶಿವನುನೀನಲ್ತೇಂ ॥
ಎಂದು ಪಲವಂದದೊಳು ನುತಿಸುತ ।
ಮುಂದ ಭಕ್ತಿಯನೊಂದೆ ಗೌಡನು ।
ಬಂದವರು ತದ್ಯೋಗಿಲೀಲೆಗೆ ವಿಸ್ಮಯವನೊಂದಿ ॥ ೯ ॥

ಪೊಗಳುತಿರೆ ತದ್ಗುರುವು ಮೋಕ್ಷ ತೆಂ ।
ಗುಗಳೆರಡ ತರಿಸುತ್ತಮವುಗಳ ।
ತೆಗೆದುಕೊಂಡೂರವರಿಗಾಶೀರ್ವದಿಸಿ ಕೊಡುತಿನ್ನು ॥
ಮಿಗಿಲೆನಿಸದಳಿಯುವುದು ರೋಗವು ।
ಸೊಗದೊಳಿರುವಿರಿ ಭಯದ ಮಾತನು ।
ತೆಗೆದೊಗೆಯಿರೆಂದೊರೆದನೆಲ್ಲರಿಗಾಗೆ ಸಂತಸವು ॥ ೧೦ ॥

ಇಂತು ಮಿಗೆ ಸಂತಸವು ತೆಂಗುಗ ।
ಳಂ ತರುತೆ ಪೀಠದೊಳಗಿಟ್ಟವ ।
ರಾಂತ ಭಕ್ತಿಯೊಳರ್ಚಿಸಿದುದಲ್ಲದೆಯೆ ಗುರುವರಗೇ ॥
ಶಾಂತಿಮಯವಾದೊಂದು ವಿಮಳೈ ।
ಕಾಂತದೆಡೆಯೇರ್ಪಡಿಸುತದರೊಳ ।
ನಂತವಿಧದಿಂದಾತನುಪಚಾರದೊಳು ತೊಡಗಿದರು ॥ ೧೧ ॥

ಒಂದೆರಡು ದಿನಗಳೆಯೆ ನಂದಿತು ।
ಬಂದ ಮಾರಿಕದುರಿಯುದೂರವ ।
ರೊಂದಿದೊಲವಿಂ ಕಾಣಿಕೆಯನರ್ಪಿಸುತೆ ಗುರುಪದಕೇ ।
ತಂದೆ ದುಃಖಾಬ್ಧಿಯೊಳು ಮುಳುಗಿರೆ ।
ತಂದೆಯ್ಯೆ ನಮ್ಮೆಲ್ಲರನು ಹೊರ ।
ಗೆಂದು ಕೊಂಡಾಡಿದ ಬಳಿಕೆ ಕೈಮುಗಿದು ಗೌಡನು ತಾಂ ॥ ೧೨ ॥

ಗುರುವೆ ನೀನಡಿಯಿಟ್ಟ ಮನೆಯಂ ।
ಗುರುಮಠವನಾಗಿಸುತಲದರ ।
ಲ್ಲಿರಿಸಿ ನಿನ್ನಯ ಹಾವುಗೆಗಳನು ಪೂಜಿಸಲ್ಕೆಮಗೇ ॥
ಕರುಣದಿಂದೊಪ್ಪಿಗೆಯ ನೀಡೆಂ ।
ದೆರೆದುದಕೆ ಸಮ್ಮತಿಸೆ ಜಂಗಮ ।
ವರನು ತದ್ಗ್ರಾಮಣಿಯು ತಳುವದೆ ತನ್ನ ನಿಲಯುವನು ॥ ೧೩ ॥

ಗುರುಚರರ್ಕಳ ಪೂಜೆಗೊಪ್ಪುವ ।
ತೆರದೆ ನೂತನ ಮಠವನಾಗಿಸಿ ।
ಹರಿಸದಿಂ ಶುಭವಾದ್ಯರವದಿಂದೂರಜನರೊಡನೇ ॥
ಕರೆದುತಂದಾ ಯೋಗಿತಿಲಕನ ।
ನಿರಿಸುತಂ ತತ್ಪಾದಸನ್ನಿಧಿ ।
ಗುರು ಮುದದೊಳರ್ಪಿಸಿದನುನ್ನತತರದ ಕಾಣಿಕೆಯಾ ॥ ೧೪ ॥

ಬಳಿಕೆ ತದ್ಗ್ರಾಮಣಿಯ ಮಾನಸ ।
ದಲಘು ಭಕ್ತಿಗೆ ವಶನೆನಿಸಿ ನಿ ।
ರ್ಮಳ ಚರಿತ್ರನು ಗುರುವು ಲಿಂಗಸಮರ್ಚನೆಯ ಸುಖದೇ ॥
ನೆಲಸುತಂ ಮಠದಲ್ಲಿ ಭಕ್ತಾ ।
ವಳಿಗೆ ಸಲೆ ಬೋಧಿಸುತೆ ಕೆಲದಿನ ।
ಗಳೆಯುತಿರೆ ಮತ್ತೊಂದು ಲೀಲೆಯು ನಡೆದುದೀತೆರದೇ ॥ ೧೫ ॥

ಸುರುಚಿರದ ನೈಜಾಮರಾಜ್ಯದೊ ।
ಳಿರುವ ಗೆಜ್ಜಲಗಟ್ಟೆವೆಸರಿನ ।
ಪುರದ ಚೆನ್ನಪ್ಪಾಖ್ಯದೇಶಾಯಿಯು ಸುಸತಿಯೊಡನೇ ॥
ಪರಿಚರಾನ್ವಿತನಾಗಿ ಯಾತ್ರೆಗೆ ।
ಪೊರಮಡುತೆ ತನಗಿಷ್ಟದೇವನಿ ।
ಕರದ ದರ್ಶನವೆಸಗಿ ಬರುತಿರುಳಾಗೆ ಪಯಣದೊಳು ॥ ೧೬ ॥

ವಸತಿಗೈಯಲು ಹಂಚಿನಾಳೊಳು ।
ನಿಶೆಯ ತಮದೊಳು ಬರುವ ತದ್ಗುಣ ।
ಲಸಿತನಡಿಯನು ಕಚ್ಚೆ ಕಾಳೋರಗವದಾಕ್ಷಣದೇ ॥
ವಸುಮತಿಗೆ ಬಿದ್ದಾತನನು ದುಃ ।
ಖಿಸುತೆ ಪರಿಚರರೆತ್ತಿ ತಂದೊರ ।
ಗಿಸಿದರೂರೊಳಗೋರ್ವ ಸದ್ಗೃಹಿಯಾಲಯಾಂತರದೇ ॥ ೧೭ ॥

ದಿಟ್ಟಿಯುಂ ವೈವರ್ಣ್ಣವುಂ ಮಿಗೆ ।
ಕೆಟ್ಟು ಪೋದವು ನೊರೆಯು ಮೂಗಿನ ।
ಬಟ್ಟೆಯೊಳು ಬಾಯೊಳವೊಸರ್ದುದು ತಣ್ಪಡರಿ ತನುವೊಳ್ ॥
ಕಟ್ಟಿತುಸಿರಾಟವದು ವಿಸ್ಮೃತಿ ।
ವಟ್ಟನಾತನು ಪೇಳ್ವೆನೇನಾ ।
ಕೆಟ್ಟ ಹಾವಿನ ವಿಷದುರಿಯ ಪೆರ್ಚುಗೆಯನದ ಕಂಡು ॥ ೧೮ ॥

ಒರಗೆ ಮೂರ್ಛೆಯೊಳವನ ಪತ್ನಿಯು ।
ನೆರೆದವರ ಶೈತ್ಯೋಪಚಾರದ ।
ನೆರವಿನಿಂದೆಚ್ಚರವನಾಂತಾಸತಿಯು ಕಣ್ಣೀರಾ ॥
ಸುರಿಸುತಂ ಸತ್ಕ್ಷೇತ್ರ ತೀರ್ಥೇ ।
ತ್ಕರದ ದರ್ಶನವೆಸಗಿದುದರಿಂ ।
ದೊರೆತ ಪುಣ್ಯಮದಿತ್ತುದೇನೀಫಲವನೆಂದಳುತೇ ॥ ೧೯ ॥

ಇದಕೆ ಮದ್ದನು ಕೊಡುವರಾರಿ ।
ನ್ನಿದನು ಕಳೆಯುವ ದೇವರಾರೆಂ ।
ದೆದೆಯ ತಾಡನದೊಡನೆ ಹಂಬಲಿಸುತಿರೆ ಪರಿಚರರು ॥
ಒದಗಿದೀದುರ್ಘಟನೆಯಳಲಿಂ ।
ಕುದಿಯುತಿರೆ ವಿಷವಹ್ನಿದಗ್ಧನ ।
ಹೃದಯ ಕುಹರವನುಳಿಯತೊಡಗಿರೆ ಪ್ರಾಣಪಕ್ಷಿಯದು ॥ ೨೦ ॥

ನೆರೆದ ಜನರೊಳು ಕೆಲರು ಸೈರಿಸ ।
ಲೊರೆದು ದುಃಖಿಪ ಸತಿಗೆ ಮತ್ತಾ ।
ಪರಿಚರರಿಗಾತನನು ಹೊತ್ತೈತರಲುಸುರ್ದು ತಾವು ॥
ಗುರುಮಠಕ್ಕವರೊಡನೆ ಬಂದಾ ।
ಪರಮ ಯೋಗಿಯ ಚರಣದಿದಿರ ।
ಲ್ಲಿರಿಸುತವನನು ನಡೆದ ಹದನವನೈದೆ ಬಿನ್ನವಿಸೇ ॥ ೨೧ ॥

ಗುರುವರನು ಕಿರುನಗೆಯೊಳಿಲ್ಲಿಗೆ ।
ಹರಣವಿಲ್ಲದ ತನುವ ಹೊತ್ತೈ ।
ತರಲು ಜೀವಿಸುವಂತೆ ಮಾಡಲು ದೇವರೇಂ ನಾನು ॥
ಮರುಳು ಹಿಡಿದುದು ನಿಮಗೆ ತಾಂ ಮುಗಿ ।
ದಿರಲು ಪಡೆದಾಯುಷ್ಯವೆಲ್ಲರು ।
ಮರಣವೊಂದುವರುಳಿಯರಾರೀಭೂತಳದೊಳೆನಲು ॥ ೨೨ ॥

ಪತಿಯು ಮೃತನಾಗಿರುವನೆಂಬುದು ।
ಶ್ರುತಿಗೆ ಬೀಳಲು ಬಿದ್ದಳಾವರ ।
ಸತಿಯು ಮೂರ್ಛಿತೆಯಾಗಿ ತದ್ಗುರುಪಾದತಲದಲ್ಲಿ ॥
ಯತಿಯು ಕಂಡಾ ಪತಿಹಿತದ ಸ ।
ದ್ವ್ರತದ ಕಾಂತಾಮಣಿಯ ದುಃಖ ।
ಸ್ಥಿತಿಯ ಕರುಣಾರಸಮಯದ ಶರಧಿಯೊಳು ಮುಳುಗುತ್ತೇ ॥ ೨೩ ॥

ಮುಂದಿರುವ ಮೃತದೇಹಕತಿಕೃಪೆ ।
ಯಿಂದೆ ತನ್ನ ಪವಿತ್ರತರ ಕರ ।
ದಿಂದ ಭಸ್ಮೋದ್ಧೂಳನವ ಗೈದೊಡನೆ ವಿಷದುರಿಯು ॥
ನಂದಿತಾದೇಶಾಯಿ ಹರಣವ ।
ನೊಂದಿ ಕಣ್ದೆರೆದೆದ್ದು ಕುಳಿತಿರ ।
ಲಂದು ಸತಿಗುಪಚರಿಸಲಾಕೆಗೆ ಬಂದುದೆಚ್ಚರವು ॥ ೨೪ ॥

ಮೊದಲಮಾಳ್ಕೆಯೊಳೊಪ್ಪುತಿರುವಾ ।
ಹೃದಯನಾಥನ ಕಂಡೊಡನೆ ಸಂ ।
ಮುದದ ಮೂರ್ತಿಯೆ ಆಗುತಾ ಸತಿ ಪತಿಯನೆಬ್ಬಿಸುತೇ ॥
ಸದಯ ಹೃದಯದ ಯೋಗಿಯ ಶ್ರೀ ।
ಪದಕೆರಗಿಸುತೆ ತಾನು ವಂದಿಸು ।
ತಿದಿರೊಳಿರ್ಪೀ ಶಿವನೆ ನಿನ್ನನು ಬದುಕಿಸಿದನೆಂದು ॥ ೨೫ ॥

ನಡೆದುದೆಲ್ಲವನುಸುರಲಚ್ಚರಿ ।
ವಡೆಯುತಾದೇಶಾಯಿ ಗುರುವರ ।
ನಡಿಗೆ ಮತ್ತಂ ಮಣಿದು ನಮ್ಮಯ ಮತದೊಳೀಬಗೆಯಾ ॥
ಮೃಡಸಮರ ಮೂರ್ತಿಗಳ ಕೃಪೆಯಿಂ ।
ಪಡೆಯದಿಷ್ಟಾರ್ಥಗಳ ಧರಣಿಯ ।
ಗುಡಿಗಳೆಲ್ಲವ ಸುತ್ತಿ ಬಂದೆವು ಬರಿದೆ ಭ್ರಾಂತಿಯೊಳು ॥ ೨೬ ॥

ಎಂದು ಮತ್ತಂ ಸತಿಯೊಡನೆ ಸಲೆ ।
ನಿಂದು ಕರಗಳ ಮುಗಿದು ತಾಂ ಪಲ ।
ವಂದದಿಂ ಕೊಂಡಾಡುವಾ ದೇಶಾಯಿಗಾಗುರುವು ॥
ಮಂದಹಾಸದೊಳೆಂದನಸು ನೀ ।
ನೊಂದಿದುದು ನಿನ್ನಂಗನೆಯು ತಾ।
ನೊಂದಿರುವ ಸಾಧ್ವೀವ್ರತದ ಮಹಿಮೆಯೊಳು ತಿಳಿಯಿದನು ॥ ೨೭ ॥

ನಿನ್ನ ಮಡದಿಯೊಳಿಸೆಯುತಿರ್ಪ
ತ್ಯನ್ನತದ ಪತಿಭಕ್ತಿಯೇ ತಾ ।
ನೆನ್ನ ಕೈಯಿಂ ಭಸ್ಮದುದ್ಧೂಳನವನಾಗಿಸುತೇ ॥
ನಿನ್ನ ಹರಣವ ತಂದು ಕೊಟ್ಟಿತ ।
ದಿನ್ನೊರೆವೆನೇಂ ಭಕ್ತಿಮಾತೆಯ ।
ನನ್ನಿಯಿಂ ಸೇವಿಸುವರದ್ಭುತ ಮಹಿಮೆಯೊಂದಿರವಾ ॥ ೨೮ ॥

ಎಂದು ಪತಿಭಕ್ತಿ ಪ್ರಸಂಗದೊ ।
ಳಿಂದುಧರಭಕ್ತಿಯ ಮಹಿಮೆಗಳ ।
ನಂದು ವಿವರಿಸೆ ಯೋಗಿಯದನಾಲಿಸುತೆ ದೇಶಾಯಿ ॥
ಮಂದಭಾಗ್ಯನಿಗಿಂತು ನೀಂ ಕೃಪೆ ।
ಯಿಂದೆ ಪ್ರಾಣವನಿತ್ತು ಬಹುವಿಧ ।
ದಿಂದೆ ಭಕ್ತಿಯ ಹಿರಿಮೆಯನು ಭೋಧಿಸಿದೆಯೈ ಗುರುವೇ ॥ ೨೯ ॥

ಧನ್ಯನಾದೆನು ಶಿವನೆ ನಾಂ ಮುಂ ।
ದಿನ್ನು ನಿನ್ನಯ ಹಾವುಗೆಗಳನು ।
ನನ್ನ ಮನೆಯೊಳಗಿಟ್ಟು ಪೂಜಿಸುತಿರ್ದು ಜೀವನದ ॥
ಬನ್ನಗಳನಡಗಿಸುವೆನೆಂದಾ ।
ಸನ್ನುತನ ತೀರ್ಥಪ್ರಸಾದಸ ।
ಮುನ್ನತದ ಸುಖವಾಂತನಾತನು ನಿಶೆಯೊಳಾಮಠದೇ ॥ ೩೦ ॥

ಉದಯದೊಳು ತನ್ನವರೊಡನೆ ಸಂ ।
ಮುದದೊಳಾದೇಶಾಯಿ ತದ್ಗುರು ।
ಪದಕೆರಗಿ ಪರಕೆಗಳ ಪಡೆಯುತೆ ಪಯಣದೊಳಗೆಡರು ॥
ಒದಗದಂತಿರೆ ಬಂದು ಮನೆಯೊಳು ।
ಪೊದಪಿನಿಂ ಪೂಜಿಸಲು ತೊಡಗಿದ ।
ಸದಮಲದ ಹಾವುಗೆಗಳಿದುವರೆಗಿರುವವಾಗೃಹದೇ ॥ ೩೧ ॥

ಇಂತುಮಲ್ಲದೆ ಹಂಚಿನಾಳ ।
ಪ್ರಾಂತದೊಳು ಮಾರಿಕೆಯು ಬರಲದ ।
ಶಾಂತವಾಗಿಸಲೂರವರು ತದ್ಗುರುವರನ ಪೆಸರಾ ॥
ಅಂತರಂಗದೆ ನೆನೆದು ತೆಂಗುಗ ।
ಳಂ ತರುತೆ ಮಠದಲ್ಲಿ ಗದ್ದುಗೆ ।
ಯಂತಿಕದೊಳಿಟ್ಟರ್ಚಿಸುವುದುಂ ನಡೆವುದಿದುವರೆಗಂ ॥ ೩೨ ॥

ಪೇಳಲೇನೀ ಬಗೆಯ ರೂಢಿಗೆ ।
ಮೂಲಕಾರಣವಾದ ಲೀಲಾ ।
ಜಾಲವನು ತಾನೆಂತೊ ನಡೆಸುತೆ ಹಂಚಿನಾಳವರ ॥
ಪಾಲಿಸಿದ ಬಳಿಕಾರ್ತರಕ್ಷಣ ।
ಶೀಲಗುರುತಾಂ ಚರಿಸುತಂ ಸುವಿ ।
ಶಾಲಕೃಪೆಯಿಂ ಬಂದನಾಬ್ಯಾಯಟ್ಟಿಯೆಂಬೂರ್ಗೇ ॥ ೩೩ ॥

ಗುರುವಿನಾಗಮನವದು ಬಡವಗೆ ।
ಸಿರಿಯು ಬಂದಂತಾಗೆ ಮಂಗಳ ।
ಕರದ ತದ್ದರ್ಶನವ ಗೈದೂರವರು ಭಕ್ತಿಯೊಳು ॥
ಪರಮ ಸಂಭ್ರಮದಿಂದೆ ಕರೆತಂ ।
ದಿರಿಸುತಂ ಮಠದಲ್ಲಿ ತಚ್ಚರ ।
ವರನ ಸೇವೆಯೊಳಿರ್ದು ಲಿಂಗಾರ್ಚನೆಯ ಗೈಸಿದರು ॥ ೩೪ ॥

ಬಳಿಕೆ ಸನ್ನಿಧಿಗೈದ ಭಕ್ತಾ ।
ವಳಿಗೆ ವಾಂಛಿತಫಲವ ಪರಸುತೆ ।
ಬಳಿಯೊಳಿರ್ದಾಮಠದ ಮಾಹೇಶ್ವರನ ನಿರುಕಿಸುತೆ ॥
ನಲವಿನಿಂ ನಿನ್ನೋರ್ವನಣುಗನ ।
ಸಲಿಸು ನಮ್ಮಯ ಸೇವೆಗೆಂದಾ ।
ವಿಲಸದಾತ್ಮಪ್ರಭೆಯ ಯೋಗಿಯು ಕೇಳೆ ಕಿರುನಗೆಯಿಂ ॥ ೩೫ ॥

ಚರಕುಲೇಂದ್ರನೆ ನಾನು ಮಕ್ಕಳ ।
ಸಿರಿಯ ಕಾಣದೆ ದುಃಖಕೊಳಗಾ ।
ಗಿರುವ ಪರಿ ನಿನ್ನಮಳ ದೃಷ್ಟಿಗೆ ಗೋಚರಿಸದಿಹುದೇಂ ॥
ದುರಿತಭಾಗಿಯು ನಾನು ಸಂತತಿ ।
ವಿರಹಿತನು ಸತ್ಪುತ್ರಫಲಮಂ ।
ಪರಸಿದೊಡೆ ಜನಿಸಿದ ಸುತನ ನಿನಗರ್ಪಿಸುವೆನೆಂದು ॥ ೩೬ ॥

ವಂದಿಸುತೆ ಮಠದಯ್ಯನೆರೆಯುತೆ ।
ಮುಂದೆ ನಿಲಲಾತನಿಗೆ ತಾಂ ದಯೆ ।
ಯಿಂದೆ ಯೋಗೀಶ್ವರನು ಜನಿಸುವರುಭಯರಾತ್ಮಜರು ॥
ಮುಂದೆ ನಿನಗವರಲ್ಲದೋರ್ವನ ।
ನಂದನನ ನೀಂ ನಮಗೆ ಕೊಡಬೇ ।
ಕೆಂದು ಮಂದಸ್ಮಿತಮುಖದೊಳೊರೆಯುತ್ತೆ ಪರಸಿದನು ॥ ೩೭ ॥

ಅಂದೆ ಸುತನುದಯಿಸಿದವೋಲಾ ।
ನಂದತುಂದಿಲನಾಗಿ ಗುರುವಿಗೆ ।
ವಂದಿಸುತೆ ಮಾಹೇಶ್ವರನು ಬಂದದನೊರೆದು ಸತಿಗೆ ॥
ಬಂದು ನಮ್ಮಯ ಮಠಕೆ ಶಿವಯೋ ।
ಗೀಂದುವಿಂತಾಶೀರ್ವದಿಸಿದುದು ।
ಹಿಂದೆ ಮಾಡಿದ ನಮ್ಮ ಪುಣ್ಯದ ಸತ್ಫಲವಿದೆನುತೆ ॥ ೩೮ ॥

ದಿನದಿನದೆ ನಿಜಮಠದೆ ತಾಂ ತ ।
ನ್ನಿನೆಯಳಿಂ ತಳ್ವಾಚರೋತ್ತಮ ।
ನನಘಸೇವೆಗೆ ತೊಡಗಿದನು ಮಠದಯ್ಯನಾಬಳಿಕೆ ॥
ಘನಮಹಿಮದಾ ಸ್ವಾಮಿಯಾ ವೂ ।
ರಿನ ಸುಭಕ್ತರು ಬೀಳ್ಕೊಡಲು ಬಂ ।
ದನು ಸೊಟಕನಾಳೆಂಬ ಸದ್ಗ್ರಾಮಕ್ಕೆ ನಲವಿಂದೆ ॥ ೩೯ ॥

ಮಾನ್ಯ ಮೂರ್ತಿಯು ಬರಲು ತಮ್ಮರಿಯು ।
ಪುಣ್ಯವೇ ಕಣ್ದೆರೆದುದೆನುತಂ ।
ಗಣ್ಯರಾದಾಪೂರ ಹಿರಿಯರು ಭಕ್ತಿಯಿಂ ಬಂದು ॥
ಧನ್ಯರಾದೆವೆನುತ್ತೆ ತತ್ಪದ ।
ಪುಣ್ಯಧೂಳಿಯ ಹೊತ್ತು ಯೋಗಿವ ।
ರೇಣ್ಯನಾತನನಿರಿಸಿದರು ತಮ್ಮೂರ ಮಠದಲ್ಲಿ ॥ ೪೦ ॥

ಬಿಡದೆ ಸೇವಿಸಿ ಬೋಧೆಯನು ಸಲೆ ।
ಪಡೆದು ಮನವೆಳಸಿದುದ ಗುರುವಿಂ ।
ಪಡೆದುಕೊಳ್ಳುತ್ತಿರ್ದ ಭಕ್ತಸಮೂಹವನು ಕಂಡು ॥
ಬಡತನದ ಬೇಗೆಯೊಳು ನಿರುತಂ ।
ಸುಡುವದೋರ್ವನು ಸೊನ್ನಗಾರನು ।
ತಡೆಯದ್ವೈತಂದಾಪರಾತ್ಪರನಡಿಗೆರಗಿ ನಿಂದು ॥ ೪೧ ॥

ಗುರುವೆ ನನ್ನಾಲಯದೆ ತುಂಬಿರು ।
ವರು ಕಿರಿಯ ಬಹು ತನುಜರವರನು ।
ಪೊರೆಯಲಾರದೆ ಬಡತನದೆ ಬಳಲುವೆನು ನೀನೆನಗೆ ॥
ಕರುಣದಿಂ ಪೇಳುವುದು ಸುಖದಿಂ ।
ದಿರುವ ವೃತ್ತಿಯನೊಂದನೆನುತಂ ।
ಕರವ ಮುಗಿಯಲು ತದ್ದಯಾಘನನಿಂತು ವಚಿಸಿದನು ॥ ೪೨ ॥

ನಿನ್ನ ವೃತ್ತಿಯ ಬಿಡದೆ ಮಕ್ಕಳ ।
ಸಣ್ಣ ರುಜೆಗಳಿಗಾಸುತರ ಕಿವಿ ।
ಗಿನ್ನು ಮುರುವನು ಹಾಕುತ್ತಿರ್ದೇ ಕಾಸುಗಳ ಕೊಳ್ಳು ॥
ಪುಣ್ಯಕೃತ್ಯವ ನಡೆಸು ನೀನು ।
ತ್ವನ್ನ ಶಿಶುರೋಗಗಳು ಪೋಗುವ ।
ವನ್ನವಸ್ತ್ರಾದಿಗಳಿಗೂಣೆಯವಿರದು ನಿನಗೆಂದು ॥ ೪೩ ॥

ಒರೆಯೆ ತದ್ಗುರುವಾಕ್ಯಸುಮವನು ।
ಶಿರದೆ ಧರಿಸುತ್ತಕ್ಕಸಾಲಿಗ ।
ನುರು ಮುದದೆ ಮನೆಯೊಂದಿ ತೊಡಗಿದನಾಸುಕಾರ್ಯದೊಳು ॥
ಒರೆವೆನೇನೇನೊಂದು ಕೊರತೆಯ ।
ನರಿಯದಂತಿರೆ ಸುಖದೊಳಿರ್ಪರು ।
ತೊರೆಯದೆಯೆ ತತ್ಕೃತಿಯನಿಂದಿಗಮವನ ವಂಶಜರು ॥ ೪೪ ॥

ಇಂತು ಜನ್ಮೋದ್ಧಾರವೆಸಗುವ ।
ನಂತವಿಧ ಸತ್ಕಾಯಕವನಾ ।
ಶಾಂತಮೂರ್ತಿಯು ಬೋಧಿಸುತ್ತೂರವರಿಗಲ್ಲಿಂದೇ ॥
ತಾಂ ತೆರಳುತಾ ಸಿದ್ಧನಾಳಿಗೆ ।
ಸಂತಸದೊಳಾಪೂರ ಗೌಡನ ।
ಚಿಂತಿತಾರ್ಥವನೀಯುತಾತನ ಗೃಹದೆ ನೆಲಸಿದನು ॥ ೪೫ ॥

ಗ್ರಾಮಣಿಯು ನಿಜತನುಮನವನಾ ।
ಸ್ವಾಮಿಸೇವೆಗೆ ಕೊಟ್ಟುದಲ್ಲದೆ ।
ಭೂಮಿಯೊಂದನು ಮಠದ ಮಾನ್ಯವನಾಗಿಸುತ್ತದನು ॥
ಪ್ರೇಮದಿಂದರ್ಪಿಸಲು ತನ್ನಿ ।
ಷ್ಕಾಮ ಗುರುವವರಾದಿಯೊಳು ಗೈ ।
ವಾ ಮಹತ್ತರವನ್ನದಾನದ ಕೃತಿಗೆ ನೆರವಾಯ್ತು ॥ ೪೬ ॥

ಭೂಮಿದಾನವಿದೆಂದೊರೆದು ನಿ ।
ಸ್ಸೀಮ ಭಕ್ತಿಸಮನ್ವಿತನಿಗಾ ।
ಗ್ರಾಮಣಿಗೆ ನಲ್ವರಕೆಯಿತ್ತೂರಖಿಳಭಕ್ತರಿಗೇ ॥
ಪ್ರೇಮದಿಂ ಸದ್ಬೋಧೆಯನು ಗೈ ।
ದಾ ಮಹಾಶಿವಯೋಗಿ ಸ್ವೈಪಿನ ।
ಧಾಮವಾದವರಾದಿ ಮಠಕ್ಕೈತಂದನಲ್ಲಿಯೊಳು ॥ ೪೭ ॥

ವಿಲಸಿತದ ತನ್ಮಠದೆ ನೆಲಸುತೆ ।
ನಲವಿನಿಂ ಭಕ್ತಿಯ ಸುತತ್ವವ ।
ತಿಳಿಸುತಂ ಭಕ್ತರ್ಗವರ ಮನದಿಷ್ಟಗಳನಿತ್ತು ॥
ಸಲಹುವೀಕಾಯಕದೆ ಕಾಲವ ।
ಕಳೆಯುತಿರ್ದನು ಲಿಂಗಪೂಜಾ ।
ಮಳಸುಖಾಂಭೋನಿಧಿಗೆ ಚಂದ್ರಮನಾಗಿ ತದ್ಯೋಗೀ ॥ ೪೮ ॥

ಇತ್ತಲಾ ಬ್ಯಾಯಟ್ಟಿ ಮಠದ ಗು ।
ರೂತ್ತಮನು ಪಡೆದುಭಯ ತನುಜರಿ ।
ಗಿತ್ತು ಧಾರ್ಮಿಕವಿದ್ಯೆಯುನ್ನತ ಶಿಕ್ಷಣವ ಬಳಿಕೇ ॥
ನುತ್ಯಯೋಗೀಶ್ವರನ ಸನ್ನಿಧಿ ।
ಗಿತ್ತು ಹಿರಿಯಣುಗನನು ಪರಕೆಯ ।
ಪೆತ್ತು ಬರಲಾಂ ಪೊರಮಡುವೆನೆಂದೊರೆದು ನಿಜಸತಿಗೇ ॥ ೪೯ ॥

ನಂದನಾನ್ವಿತನಾಗಿ ಬಂದಭಿ ।
ವಂದಿಸುತೆ ಶಿವಯೋಗಿ ಚರಣಕೆ ।
ತಂದೆ ನಿನ್ನಯ ವರದೊಳೊಗೆದಿರ್ಪುಭಯ ತನುಜರೊಳು ॥
ಸುಂದರಾಸ್ಯನು ಜ್ಯೇಷ್ಠಸುತನಿವ ।
ಸಿಂದು ನಿನಗರ್ಪಿಸಿದೆನೆನೆ ನಲ ।
ವಿಂದೆ ಗುರು ಬರಸೆಳೆಯುತಾ ತನುಭವನ ಮೈದಡವಿ ॥ ೫೦ ॥

ನೆರೆದವರ್ಗೀ ಮಗನೆ ಮುಂದಿನ ।
ಚರಪದಕ್ಕಧಿಕಾರಿಯೆಂಬುದ ।
ನೊರೆಯಲವರಚ್ಚರಿಯೊಳಾ ಬಾಲಕನ ಪದಕೆರಗಿ ॥
ನಿರುಕಿಸುತ್ತಾತನ ಸುತೇಜವ ।
ನುರುಮುದವನೊಂದುತ್ತೆ ತಾವುಪ ।
ಚರಿಸಿದರು ತತ್ಪಿತೃಸುತರ ಕರೆದೊಯ್ದು ಮಠದಲ್ಲಿ ॥ ೫೧ ॥

ಪರಕೆವೆತ್ತಾ ಮಠದ ಮಾಹೇ ।
ಶ್ವರನು ತೆರಳಿದ ಬಳಿಕೆ ತತ್ಸುತ ।
ನುರುತರದ ನಿಷ್ಠೆಯೊಳು ಗುರುಸೇವೆಯನು ಮಾಡುತ್ತೇ ॥
ತೊರೆದು ನಿಜಪಿತೃಜನರ ಮೋಹವ ।
ವಿರತಿಯೊಳು ಮನವಿತ್ತು ಜಂಗಮ ।
ಕಿರುವ ಸದ್ವೃತ್ತಿಯನು ತನ್ನೊಳು ಬೆಳೆಸತೊಡಗಿದನು ॥ ೫೨ ॥

ಹಿಡಿದ ನಿಜಗುರುಸೇವೆಯೊಳು ನಸು ।
ಬಿಡುವು ದೊರೆತೊಡನಿರದೆ ಮಠದೊಳ ।
ಗಡವಿಗೈತಂದಲ್ಲಿ ಮಡುವೊಳ್ ಮಿಂದು ಪೂಗಳನು ॥
ಪಡಗರದೆ ತಂದೊಂದು ನಿರ್ಜನ ।
ದೆಡೆಯೊಳಾತ್ಮಸುಲಿಂಗಪೂಜೆಗೆ ।
ತೊಡಗುತರ್ಚನಸುಖದೆ ಬೆರೆಯುತ್ತಿರ್ದನಾಸುತನು ॥ ೫೩ ॥

ನಡೆಯುವೀ ಪದ್ಧತಿಯ ಗುರು ತಿಳಿ ।
ದೊಡನೆಯಡವಿಸ್ವಾಮಿಯಿವನೆಂ ।
ದಿಡೆ ಪೆಸರನಾಬಾಲಕಂಗುಳಿದವರದೇ ಪೆಸರಿಂ ॥
ಮೃಡಸಮನ ಮರಿಗುರುವ ಕರೆಯಲು ।
ತೊಡಗಲಾತಗೆ ಗುರುವಿನಿಂದಂ ।
ಪಡೆದ ನಾಮವದಾವಗಂ ಸ್ಥಿರಮಾದುದಾ ಬಳಿಕೇ ॥ ೫೪ ॥

ಗುರುವಿನೊಳಗೆಂತಂತೆ ತನ್ನೊಳು ।
ವಿರತಿಯುಂ ಶಿವಯೋಗವುಹಿಮೆಯು ।
ಧರೆಯ ಭಕ್ತರಿಗಿತ್ತು ಬಯಕೆಯ ಪೊರೆವ ಶಕ್ತಿಯದುಂ ॥
ನೆರೆ ಸಮೃದ್ಧಿಯನೊಂದೆ ಮಠದೊಳು ।
ನಿರುತವೆಸಗುವ ಕಾರ್ಯವೆಲ್ಲವ ।
ಹರಿಸದಿಂದಾ ಪಟ್ಟಶಿಷ್ಯನೆ ನಡೆಸತೊಡಗಿದನು ॥ ೫೫ ॥

ತನ್ನ ಸತ್ಕಾಯಕವ ಶಿಷ್ಯನ ।
ದಿನ್ನು ನಡೆಸುವುದರಿಯುತಾಸ ।
ನ್ನಾನ್ಯ ಗುರು ಕರೆಯಿಸುತೆ ಗುರುಚರಮುಖ್ಯರಾದವರಾ ॥
ಸನ್ನುತರ ಗುರುಚರರ ಮುಂದ ।
ತ್ಯುನ್ನತದ ಸಂಸ್ಕಾರವಾಗಿಸಿ ।
ತನ್ನ ಚರಪಟ್ಟಾಧಿಕಾರವನಿತ್ತನಾತನಿಗೇ ॥ ೫೬ ॥

ಇಂತು ಜಂಗಮತಾಧಿಕಾರಾ ।
ಕ್ರಾಂತನಡವಿಸ್ವಾಮಿ ಭಕ್ತಜ ।
ನಾಂತರಂಗಸುಪೀಠಶೋಭಿತಮೂರ್ತಿಯಾಗಿರಲು ॥
ಶಾಂತಶಿವಗುರು ಮೊದಲೆ ನಿಜಲಿಂ ।
ಗಾಂತರದೊಳಡಗುವುದ ತಿಳಿಸಿ ।
ರ್ದಂತೆ ಬಂದ ಸುದಿನದೊಳೈಕ್ಯವನೊಂದೆ ಲಿಂಗದೊಳು ॥ ೫೭ ॥

ನಾಡವರ ಕರೆಯಿಸುತಮುವರೊಡ ।
ಗೂಡುತಡವಿಸ್ವಾಮಿಯೈಸಲೆ ।
ಮಾಡಿ ಮಠದೊಳು ಸಕ್ರಮದೆ ನಿಜಗುರುಸಮಾಧಿಯನು ॥
ಮಾಡಿಸಿದನಾರತಿಯನೆಲ್ಲರು ।
ಪಾಡುತಿಹ ಶುಭಗೀತೆಗಳ ದನಿ ।
ಕೂಡಿ ಮಂಗಳವಾದ್ಯರವದೊಡನೇರೆದಿಕ್ತಟಕೇ ॥ ೫೮ ॥

**॥ ಮುಗಿದುದು ॥ ಒಟ್ಟು ಪದಗಳು ॥ ೧೦೮೨ ॥**



॥ ಓಂ ಜಗದಾನಂದಕರವೃಷ್ಟಿಪ್ರದಾಯನಮಃ ॥

# ಇಪ್ಪತ್ತೈದನೆಯ ಸಂಧಿ

**ಸೂಚನೆ:—** ತುಂಗಮಹಿಮೆಯ ಗುರುಗಳೀರ್ವರು ।
ಲಿಂಗದೊಳಗಡಗಿದ ಬಳಿಕೆ ಗುರು ।
ಸಂಗಮೇಶ್ವರನೆಸಗಿ ನಲ್ಗಜ್ಜಗಳನೆಸೆಯುವನು ॥

ದಿನದಿನಕ್ಕಟವೀಶಗುರುವಿನ ।
ಮನದೆ ಪೆರ್ಚುವ ವಿರತಿ ತಾನಾ ।
ತನಿಗೆ ಮಠದಧಿಕಾರಕೃತಿಯಿಂ ವಿಮುಖತೆಯನೀಯೇ ॥
ಗುಣಸುವಿದ್ಯಾದಿಗಳನಾಂತಿ ।
ರ್ಪನಘಮಾಹೇಶ್ವರಸುತನನೋ ।
ರ್ವನ ಸುಶಿಷ್ಯನನರಸಿ ಕರೆತಂದಾತನಿಗೆ ವಿಧಿಯಿಂ ॥ ೧ ॥

ಮಂಗಳಾಕರ ತದ್ಗುರುವು ತಾಂ ।
ಜಂಗಮಸುಸಂಸ್ಕಾರವಾಗಿಸು ।
ತಂಗಲಿಂಗಸುಯೋಗದನುಭವದಿರವ ಬೋಧಿಸುತೇ ॥
ಭೃಂಗಕೀಟನ್ಯಾಯದಿಂ ಚರ ।
ಪುಂಗವನೆ ತಾನಾದ ನಿಜಶಿ ।
ಷ್ಯಂಗೆ ಶಿವನಾಮವನಿಡುತೆ ಗುರುಚರರ ಸಮ್ಮುಖದೇ ॥ ೨ ॥

ಕೊಟ್ಟು ಮಠದಧಿಕಾರಮುದ್ರೆಯ ।
ಕೊಟ್ಟು ನಲ್ವರಕೆಗಳ ಜಂಗಮ ।
ಪಟ್ಟಮಂ ಗೈದಿರಿಸುತಾತನ ತನ್ಮಠದೆ ಬಳಿಕೇ ॥
ಬಿಟ್ಟು ಜನಸಂಗವನು ತನಗಳ ।
ವಟ್ಟಯೋಗಸಮಾಧಿಯೊಳೆ ಮನ ।
ವಿಟ್ಟು ತಾನಾ ಹಂಚಿನಾಳಿನ ಮಠದೆ ನೆಲಸಿದನು ॥ ೩ ॥

ಪರಮಭಕ್ತಾವಳಿಯೊಡನೆ ನಿಜ ।
ಗುರುವಿನಾಜ್ಞಾ ಸುಮಗಳನು ತಾಂ ।
ಶಿರದೊಳಾಂತತಿಭಕ್ತಿಯಿಂ ಶಿವನಾಮಕಸ್ವಾಮಿ ॥
ಗುರುಪರಂಪರೆಯಿಂದೆ ಬಂದಾ ।
ವರಮಠದ ಸತ್ಕಾರ್ಯಕಿನಿತುಂ ।
ಕೊರತೆಯಾಗದ ತೆರದೊಳದ ನಡೆಸಲ್ಕೆ ತೊಡಗಿದನು ॥ ೪ ॥

ಪೇಳಲೇನವರಾದಿಮಠದಾ ।
ಮೂಲಕರ್ತೃ ಫಲಾಶನನೆ ಭ ।
ಕ್ತಾಳಿರಕ್ಷಣೆಗಾಗಿ ಮೇಣ್ ವ್ಯೆವೆತ್ತು ಬಂದಿಂತು ॥
ಕೇಳಿದಿಷ್ಟವನಿತ್ತು ಜನತೆಯ ।
ಪಾಲಿಸುವನೋ ಎಂದು ಪಂಡಿತ ।
ರೋಳಿ ಬಣ್ಣಿಸುವಧಿಕಮಹಿಮೆಯನಚಿರಕಾಲದೊಳೇ ॥ ೫ ॥

ಪಡೆದು ಭಕ್ತರ ಚಿಂತಿತಾರ್ಥವ ।
ಕೊಡುವ ಚಿಂತಾಮಣಿಯೆನಿಸುತಂ ।
ಕಡು ಮುದದೊಳಾ ಸ್ವಾಮಿ ನಾಡೊಳು ಬೋಧಿಸುತೆ ಚರಿಸಿ ॥
ಪಿಡಿದ ಭೂತವನಾಂತ ರೋಗವ ।
ಬಡತನವ ಮೇಣ್ ಬಂಜೆತನವನು ।
ಪಡೆದ ಪಾಪವ ಕಳೆಯತೊಡಗಿದನಡಿವಿಡಿದ ಜನರಾ ॥ ೬ ॥

ನಲವಿನಿಂದೀತೆರದೆ ನಾನಾ ।
ಸ್ಥಲದೆ ಚರಿಸುತೆ ಧರ್ಮ ತತ್ವದ ।
ತಿಳಿವನುರೆ ಪೆರ್ಚಿಸುತೆ ನಾಡಿನೊಳೊಂದೆ ನಿಜಮಠವಾ ॥
ಬಳಕದೊಂದಬ್ದದೊಳು ಮಳೆಯಾ ।
ಸುಳಿವೆ ಕಾಣದೆ ಜನತೆ ಭೀತಿಯ ।
ತಳೆಯುತಂ ಕ್ಷಾಮವದು ತಪ್ಪದೆ ಬರುವುದೆಂದರಿದು ॥ ೭ ॥

ಬಂದು ಮಠದ ಸ್ವಾಮಿಯಂಘ್ರಿಗೆ ।
ವಂದಿಸುತೆ ಮದ್ಗುರುವೆ ಮಳೆವನಿ ।
ಯೊಂದುಮುದುರದೆ ಗತಿಸುತಿರ್ಪುದು ಕಾರಕಾಲವಿದು ॥
ಮುಂದೆ ಗತಿಯೇನೆಮಗೆ ಬರವೈ ।
ತಂದೊಡೆಂದತಿ ಚಿಂತೆಯಾಗಿಹು ।
ದೆಂದು ಜನವೃಂದವದು ಮೊರೆಯಿಡೆ ಗುರುವೊರೆದನಿಂತು ॥ ೮ ॥

ತೊರೆಯಿರೀ ಚಿಂತೆಯನು ಮಳೆಯನು ।
ತರಿಸುವನು ಮಠದಾದಿಕರ್ತೃವು ।
ಭರದೊಳೆಂದುಸುರುತ್ತೆ ಸೈರಿಸವೇಳ್ದು ಸರ್ವರಿಗೇ ॥
ಗುರುವರನು ಮುಗಿಸುತ್ತೆ ಮಜ್ಜನ ।
ಹರಸಮರ್ಚನಗಳ ಫಲಾಶನ ।
ಪರಮಯೋಗೀಶ್ವರಸಮಾಧಿಯ ಸಮ್ಮುಖದೆ ಕುಳಿತು ॥ ೯ ॥

ಪರಮಪಂಚಾಕ್ಷರಿಯ ಜಪಿಸು ।
ತ್ತಿರೆ ದಿನಾಂತದವರೆಗೆ ಗಗನಾಂ ।
ತರದೆ ಘನರವದೊಡನೆ ಮಿಂಚುವ ಮೋಡಗಳು ಕವಿದು ॥
ನಿರುಕಿಪರ ಸುಖಬಾಷ್ಪದೊಡನೆಯೆ ।
ಸುರಿದುದದ್ಭುತ ವೃಷ್ಟಿಯಾಗಳೆ ।
ಕೆರೆತೊರೆಗಳುರೆ ತುಂಬಿ ಹರಿದವು ನಾಡಿನಗಲದೊಳು ॥ ೧೦ ॥

ಅಂದು ತೆಂಗಾಯಿಗಳ ರಾಶಿಯ ।
ತಂದೊಡೆದು ಗೈಯುತ್ತೆ ಕಪ್ಪುರ ।
ದಿಂದೆ ದೀಪೋತ್ಸವವ ಮಂಗಳದಾರತಿಯನೆಸಗಿ ॥
ವಂದಿಸುವರಿಂ ತುಂಬಿ ಮಠದೊಳು ।
ಬಂದವರಿಗೆಡೆಯಿಲ್ಲದಂತಿರೆ ।
ಮಂದಹಾಸದೊಳಿಂತೊರೆದನಾಸ್ವಾಮಿ ಸರ್ವರಿಗೇ ॥ ೧೧ ॥

ಗುರುಕೃಪೆಯೊಳಾಯ್ತಾಸುವೃಷ್ಟಿಯು ।
ಮರುವಗಲಿನೊಳು ತಳ್ತು ಸರ್ವರು ।
ವಿರಚಿಸಿರಿ ಗಣತೃಪ್ತಿಯನು ಬೆಳೆ ಪೆರ್ಚುವುದು ನಿಮಗೇ ॥
ಗುರುಚರರ್ಕರೊಳಿಟ್ಟ ಭಕ್ತಿಯು ।
ಪರಿಹರಿಸಿದುದು ಬರದ ಭೀತಿಯ ।
ನರಿವೊಡಾಸದ್ಭಕ್ತಿಗಾವುದು ಸಿದ್ಧಿಸದು ಜಗದೇ ॥ ೧೨ ॥

ಎಂದೊರೆಯೆ ಕೇಳ್ದಖಿಳರತ್ಯಾ ॥
ನಂದದಿಂ ಮೃಷ್ಟಾನ್ನ ಭೋಜನ ।
ದಿಂದೆ ಮರುದಿನದಲ್ಲಿ ಗಣಸಂತೃಪ್ತಿಯನು ಗೈದು ॥
ಎಂದಿನಂತಿರೆ ಮಠದ ಕೃತಿಗಳ ।
ನೊಂದ ಬಿಡದಂತಧಿಕ ನಿಷ್ಠೆಯ ।
ನೊಂದಿ ಗೈಯುತ್ತಿರ್ದರಾ ಗುರುಭಕ್ತರಾಬಳಿಕೇ ॥ ೧೩ ॥

ಭೂಮಹಿತನಾದಾಶಿವಾಖ್ಯ ।
ಸ್ವಾಮಿ ತಾನೊಂದನುಳದಿನದೊಳ್ ।
ಪ್ರೇಮದಿಂ ನಿಜಲಿಂಗಪೂಜೆಯ ಗೈವ ಕಾಲದೊಳೇ ॥
ಆ ಮಹಾಲಿಂಗದೊಳು ಬೆರೆದನು ।
ಭೂಮಿಯಲ್ಲಿರ್ಪಾತ್ಮ ಭಕ್ತ ।
ಸ್ತೋಮವನು ರಕ್ಷಿಸುವ ಭಾರವ ವಹಿಸಿ ನಿಜಗುರುಗೇ ॥ ೧೪ ॥

ಬೆರಗುವಡೆದೀತೆರದೆ ಲಿಂಗದೆ ।
ಬೆರೆದುದನು ಕಂಡೂರಭಕ್ತರು ।
ಕರೆಯಿಸುತ್ತಟವೀಶಗುರುವನು ಹಂಚಿನಾಳಿಂದೇ ॥
ನೆರೆದ ಭಕ್ತವ್ರಜದೊಡನೆ ತ ।
ದ್ಗುರುಸಮಾಧಿಕ್ರಿಯೆಯ ಮುಗಿಸಿದ ।
ರುರುತರದ ಭಕ್ತಿಯೊಳು ಸಕ್ರಮದಿಂದೆ ಮಠದೊಳಗೇ ॥ ೧೩ ॥

ಬಳಿಕಮಡವಿಸ್ವಾಮಿ ತನ್ಮಠ ।
ದೊಳಗೆ ನಿಜಶಿವಯೋಗ ಸುಖಸಂ ।
ಕಲಿತನಾಗಿರುತಿಂತು ಕೆಲದಿನಗಳೆದು ನಾಡಿನೊಳು ॥
ಸಲೆ ಸುಭಕ್ತಿಯ ಪೆರ್ಚಿಸುವ ಕೃತಿ ।
ಗೆಳಸಿ ನಿಜಪದಧೂಳಿಯಿಂ ಭೂ ।
ತಲವ ಪಾವನವೆಸಗುತಂ ಸಂಚರಿಸತೊಡಗಿದನು ॥ ೧೬ ॥

ಈ ತೆರದೆ ಸಂಚರಿಸುತಂ ನಿ ।
ರ್ಧೂತದೋಷನು ತದ್ಗುರುವು ಸಂ ।
ಪ್ರೀತಿಯಿಂ ಮೆಣಸಿಗೆವೆಸರ ಸದ್ಗ್ರಾಮಕೈತರಲು ॥
ಸಾತಿಶಯಭಕ್ತಿಯೊಳು ಜನಸಂ ।
ಘಾತವಾಗಮಿಸುತ್ತಿದಿರ್ಗೊಂ ।
ಡಾ ತಪೋಧನವಂದಿತನ ಕರೆತಂದು ಸಂಭ್ರಮದೇ ॥ ೧೭ ॥

ಇರಿಸುತಂ ತಮ್ಮೂರ ಮಠದೊಳು ।
ಪರಮಬೋಧೆಯ ಪಡೆಯುತಂ ತ ।
ದ್ವಿರತಿಮೂರ್ತಿಯಿನಾಂತು ವಾಂಛಿತಫಲವನೂರವರು ।
ನೆರೆ ಸಮರ್ಪಿಸೆ ಕಾಣಿಕೆಗಳನು ।
ನಿರುಕಿಸುತೆ ತನ್ಮಠದ ಮಾಹೇ ।
ಶ್ವರನ ತೋಟಪ್ಪಯ್ಯನನು ತದ್ಗುರುವೊರೆದನಿಂತು ॥ ೧೮ ॥

ಸತಿಯೊಡನೆ ನೀಂ ಭಕ್ತಿಯಿಂದಂ ।
ಪ್ರತಿದಿನದೆ ಗುರುಚರರ ಸೇವಾ ।
ವ್ರತವ ಗೈದುದರಿಂದೆ ತತ್ಫಲವಾಗಿ ಜನಿಸಿರ್ಪಾ ॥
ಸುತರೊಳೀರ್ವರೊಳೆಮ್ಮ ಮಠದಧಿ ।
ಪತಿಯನಾಗಿಸಲೆರಡನೆಯ ಸ ।
ನ್ಮತಿಯುತನ ತನುಭವನ ಕೊಡವೇಳ್ಕೆಂದೆನಲು ನಗೆಯಿಂ ॥ ೧೯ ॥

ಗುರುಚರರ ಕೃಪೆಯಿಂದೆ ತಮಗಾ ।
ಗಿರುವ ತರುಳರ ಪರಿಯನರಿದಿಂ ।
ತೊರೆದುದಕ್ಕಚ್ಚರಿಯನೊಂದುತ್ತಾಮಹೇಶ್ವರನು ॥
ದರಹಸಿತಮುಖನಾಗಿರುವ ತ ।
ದ್ಗುರುವಿನಡಿಗೆರಗುತ್ತೆ ನಿಮ್ಮಯ ।
ಪರಕೆಗಳ ಸತ್ಫಲವನಿಮಗರ್ಪಿಸುವ ಭಾಗ್ಯವಿದು ॥ ೨೦ ॥

ದೊರೆದುದಕೆ ನಾಂ ಧನ್ಯನೆನುತಂ ।
ತ್ವರಿತದಿಂ ತನ್ನಣುಗರನು ತಾಂ ।
ಕರೆದುತಂದಾ ಪರಮನಡಿಗೆರಗಿಸಲು ಚಿಕ್ಕವನ ॥
ಪರಮಮುದದಿಂ ನೋಡುತಾತನ ।
ಶಿರದೆ ಹಸ್ತವನಿಟ್ಟು ಪರಸುತೆ ।
ಯಿರಲಿ ನಮಗೀವಟುವು ಜಂಗಮಪದಕೆ ತಕ್ಕವನು ॥ ೨೧ ॥

ಎಂದೊರೆಯುತಾಬಾಲಕನ ತಾ ।
ಯ್ತಂದೆಗಳಿಗಂ ಬಂದ ಭಕ್ತರ ।
ವೃಂದಕಂ ವಾಂಛಿತಫಲಂಗಳನಿತ್ತು ತದ್ಗುರುವು ॥
ಬಂದನವರಾದಿಗೆ ಮಹಾಮುದ ।
ದಿಂದೆ ತನ್ನೊಡಗೊಂಡು ತಾಂ ಪೂ ।
ರ್ಣೇಂದುವದನದ ಸಂಗಮೇಶ್ವರನಾಮುದಾ ಸುತನಾ ॥ ೨೨ ॥

ಬಳಿಕೆ ಮಠದೊಳು ಸಂಗಮೇಶ್ವರ ।
ನಲಘುಭಕ್ತಿಯೊಳಾತ್ಮಗುರುನಿ ।
ರ್ಮಳಪದಾಬ್ಜದ ಸೇವೆಯಾಸುಖವೆಂಬ ಮಧುವೀಂಟಿ ॥
ನಲಿವ ಷಟ್ಪದನಾಗಿರುವುದನು ।
ತಿಳಿದ ಭಕ್ತರು ತದ್ವಟುವಿನೊಳು ।
ಬಳೆಯುವಾ ಗುರುಭಕ್ತಿಯನು ಸಲೆ ಪೊಗಳತೊಡಗಿದರು ॥ ೨೩ ॥

ಬೆಳಗುವೀ ಗುರುಭಕ್ತಿಯೊಡನೆಯೆ ।
ಬಳೆಯುತಿರುವಾ ಮುಖ್ಯಶಿಷ್ಯನ ।
ತಿಳಿನಡೆಯ ಕಂಡಧಿಕಮುದವಾಂತಿರುವ ತದ್ಗುರುವು ॥
ಬಳಿಕೆ ಸದ್ಗುರುಜಂಗಮರ ಸಂ ।
ಕುಲವ ಭಕ್ತಮಹೇಶಮುಖ್ಯ ।
ರ್ಕಳುಮನುರೆ ಕರೆಯಿಸುತೆ ಶುಭಸಮ್ಮಿಳಿತದಿವಸದೊಳು ॥ ೨೪ ॥

ಗುರುಚರರ ಸಮ್ಮುಖದೆ ವಿಧಿಯಿಂ ।
ಚರಸುಸಂಸ್ಕಾರವನು ಮಾಡಿಸಿ ।
ಪರತರದ ಲಿಂಗಾಂಗಸಮರಸದಿರವ ಬೋಧಿಸುತೇ ॥
ಪರಮಜಂಗಮಪಟ್ಟವನು ಕೊ ।
ಟ್ಟುರುಮುದದೆ ನಲ್ವರಕೆಗಳ ನಿ ।
ತ್ತಿರದೆ ಸರ್ವರ ಸತ್ಕರಿಸಿ ತಣಿಸಿದನು ತದ್ಗುರುವು ॥ ೩೫ ॥

ಇಂತು ಮಠದಧಿಕಾರವನು ಶು ।
ದ್ಧಾಂತರಂಗದ ಶಿಷ್ಯಗಿತ್ತು ನಿ ।
ರಂತರದೆ ನಿಜಲಿಂಗಪೂಜಾಧ್ಯಾನದೊಳು ಬೆರೆದು ॥
ಶಾಂತಿಮಯನಾಗಿರ್ಪ ಗುರುವರ ।
ನಂತಿಕದೊಳಿರ್ದಾತನನು ಬಿಡ ।
ದಂತೆ ಸೇವಿಸುತಿರ್ದನಾ ವರಸಂಗಮೇಶ್ವರನು ॥ ೩೬ ॥

ವಿರತಿಯೊಳ್ ಪ್ರಭುದೇವರಂದದೊ ।
ಳಿರುವ ಗುರುವಿಗೆ ಭಕ್ತಿಯೊಳು ಬಸ ।
ವರಸನಂತಿರುತಿಂತು ಸೇವೆಯ ಗೈಯೆ ಶಿಷ್ಯನು ತಾಂ ॥
ಪರಿಕಿಸಲ್ಕಿವರೊಡಲುಗಳು ತಾ ।
ವೆರಡೆನಿಸಿದೊಡಮಾತ್ಮವೊಂದಾ ।
ಗಿರುವುದೆಂದುಭಯರನು ಬಣ್ಣಿಸುತಿರ್ದರರಿದವರು ॥ ೩೭ ॥

ಕಳೆಯೆ ಕೆಲದಿನವೊಂದು ಶುಭದಿನ ।
ದೊಳು ತದಟವೀಶ್ವರನು ಲಿಂಗವ ।
ನೊಲವಿನಿಂ ಪೂಜಿಸಿದ ಬಳಿಕದರಲ್ಲಿ ಬಯಲಾಗೇ ॥
ಬಳಿಯೊಳಿರ್ದಾಸಂಗಮೇಶನು ।
ತಳುವದೆಯೆ ಕರೆಯಿಸುತೆ ಭಕ್ತಾ ।
ವಳಿಯನವರಿಂ ತಳ್ತು ನಿಜಸದ್ಗುರುಸಮಾಧಿಯನು ॥ ೩೮ ॥

ಭಕ್ತಿಮಿಗೆ ಪೂರೈಸಿ ತಾಂ ಶಾ ।
ಸ್ತ್ರೋಕ್ತವಿಧಿಯಿಂ ಬಳಿಕಮಾ ಸುವಿ ।
ರಕ್ತ ಮೂರ್ತಿಯು ನಿಜಮಠದ ಸದ್ಗುರುಪರಂಪರೆಯಾ ॥
ಭಕ್ತರಕ್ಷಣಕಾಯಕವನಾ ।
ಸಕ್ತಿಯಿಂ ಕೈಕೊಂಡು ನಾಡಿನ ।
ಭಕ್ತರಿಗೆ ಬಸವಂಣನಂತಿರೆ ನುತ್ಯನೆನಿಸಿದನು ॥ ೩೯ ॥

ಕಾಲದೇಶಸ್ಥಿತಿಗೆ ತಕ್ಕವಿ ।
ಶಾಲವಿದ್ಯಾಬುದ್ಧಿಭಕ್ತಿಸು ।
ಶೀಲಗಳು ಭಕ್ತರಿಗೆ ಬರಲನುಕೂಲಕಾರ್ಯಗಳಾ ॥
ಜಾಲದೊಳು ತೊಡಗುವುದೆ ಜಂಗಮ ।
ಲೀಲೆಯೆಂದರಿದಾ ಮಹಾಕರು ।
ಣಾಳುಮೂರ್ತಿಯು ಮಾಡುತಿರ್ದನು ತನ್ನ ಕಾಯಕವ ॥ ೩೦ ॥

ಬಿಡದೆ ತಾಂ ಪ್ರತಿವರ್ಷದೊಳು ಸಲೆ ।
ನಡೆಸುವಾ ಮಠದಾದಿಗುರುವಿನ ।
ಸಡಗರದ ಮಂಗಳರಥೋತ್ಸವಕಾಲದೊಳು ನೆರೆದ ॥
ಬಡಜನರಿಗನ್ನಾದಿಗಳನುರೆ ।
ಕೊಡುತೆ ವಿದ್ವಜ್ಜನರ ಸಭೆಗಳ ।
ನಡೆಸಿ ಧಾರ್ಮಿಕಬೋಧೆಗಳ ಮಾಡಿಸುವನಾಸ್ವಾಮಿ ॥ ೩೧ ॥

ಇಂತುಮಲ್ಲದೆ ತನ್ನ ಮಠದೆ ನಿ ।
ರಂತರದೆ ದಾಸೋಹಮೆಂಬ ಸು ।
ಶಾಂತಿಭಾವದೊಳೀಯುವನ್ನೋದಕವೆ ಮೊದಲಾದ ॥
ಸಂತರೊಪ್ಪುವ ಕಾರ್ಯಗಳ ನಲ ।
ವಾಂತು ನಡೆಸುತ್ತಖಿಳಭಕ್ತಜ ।
ನಾಂತರಂಗಧ್ಯೇಯಮೂರ್ತಿಯೆ ಆಗಿ ಬೆಳಗುವನು ॥ ೩೨ ॥

ಈ ಪರಿಯು ಧಾರ್ಮಿಕಕೃತಿಯ ಗೌ ।
ರೀಪತಿಯೆ ಮಾಡಿಸುವನವನ ।
ಶ್ರೀಪದದ ದಾಸೋಹಮೆಂಬ ಸುಭಾವದಿಂದಿರ್ದು ॥
ಕೋಪತಾಪಾದಿಗಳಿಗೆಡೆಗೊಡ ।
ದಾಪವಿತ್ರಸ್ವಾಮಿ ಭಕ್ತಿಕ ।
ಲಾಪನಾಗಿಯೆ ಪೂಜ್ಯತಮನೆನಿಸುತ್ತೆ ಮೆರೆಯುವನು ॥ ೩೩ ॥

ವಿಳಸಿತದ ಬಳ್ಳಾರಿಪುರಮಂ ।
ಡಲದೆ ಲಿಂಗಾಂಗಿಗಳ ಸೌಖ್ಯದ ।
ನೆಲೆಯೆನಿಸಿ ಮೆರೆವೇಳುಬೆಂಚೆಯೆನಿಪ್ಪ ಗ್ರಾಮದೊಳು ॥
ತೊಳಪ ಗುರುಮಠದೊಡೆಯರಾಗಿ ।
ಜ್ವಲಿತಗುಣದಿಂ ಕೀರ್ತಿವೆತ್ತ ವಿ ।
ಮಳಮನದ ನೀಲಾಂಬಿಕಾನಯನಾರ್ಯರಾತ್ಮಜನು ॥ ೩೪ ॥

ಮಿಸುಪ ಬಳ್ಳಾರಿಯೊಳು ಸಂಸ್ಥಾ ।
ಪಿಸಿದ ತದ್ವರವೀರಶೈವದ ।
ಪೆಸರಿನಿಂ ರಾಜಿಪಕಲಾಶಾಲೆಯೊಳು ಶಿಕ್ಷಕನು ॥
ಅಸಮ ಹರಗುರುಚರಕೃಪಾಗತ ।
ಲಸಿತ ಕವಿತಾನಂದದಿಂ ಶೋ ।
ಭಿಸುವ ನಾಗೇಶನು ವಿರಚಿಸಿದನೀ ಪುರಾಣವನು ॥ ೩೫ ॥

ಶಾಲಿವಾಹನ ಭೂವರನ ಶಕ ।
ಕಾಲದಾ ಹದಿನೆಂಟುನೂರರ ।
ಮೇಲಿನೆಪ್ಪತ್ತೆರಡನೆಯ ತದ್ವಿಕೃತಿವತ್ಸರದೇ ॥
ಕೀಲಿಸಿದ ಮಾರ್ಗಶಿರದಾ ಸುವಿ ।
ಶಾಲಬಹುಳದ್ವಾದಶೀತಿಥಿ ।
ಮೇಳಕದ ಭೃಗುದಿನದೆ ಮುಗಿದುದು ಕೃತಿಯ ರಚನೆಯಿದು ॥ ೩೬ ॥

ಮುಗಿಯದಿರ್ಕೆ ಸುಭಕ್ತಜನರಾ ।
ವಗವೊಳಸಿದುದನೀವ ಶಿವಯೋ ।
ಗಿಗಳೊಡೆಯನೀ ಸತ್ಕಥೆಯನಾಲಿಸುವ ಪುಣ್ಯವದು ॥
ಮುಗಿಯದಿರ್ಕೆ ಫಲಾಶನಸ್ವಾ ।
ಮಿಗಳ ಮಠದುನ್ನತದ ಮಹಿಮೆಯು ।
ಜಗದ ಸೃಷ್ಟಿಯದಿರುವವರೆಗಾ ಶಿವನ ಕರುಣದೊಳು ॥ ೩೭ ॥

ಮಂಗಳವು ಚರಪುಂಗವಗೆ ಸ ।
ನ್ಮಂಗಳವು ಗುರುಲಿಂಗ ರೂಪಗೆ ।
ಮಂಗಳವು ಶಿವಯೋಗಯುಕ್ತ ಫಲಾಶನ ಪ್ರಭುಗೇ ॥
ಮಂಗಳವು ತಚ್ಚರಿತವಿದಕೆ ಸು ।
ಮಂಗಳಮುದಕ್ಕೀ ಪುರಾಣದ ।
ಮಂಗಳಶ್ರವಣವನು ಗೈವ ಸಮಸ್ತಭಕ್ತರ್ಗೇ ॥ ೩೮ ॥

ಮಂಗಳವು ಮಠದಖಿಳಭಕ್ತಜ ।
ನಂಗಳಾತ್ಮವೆ ಆಗಿ ಶೋಭಿಪ ।
ಸಂಗಮೇಶ್ವರನಾಮಕಶ್ರೀಸ್ವಾಮಿಗಳ ಪದಕೇ ॥
ಮಂಗಳವು ನಿಜಗುರುಪದಾಂಬುಜ ।
ಭೃಂಗನೆನಿಸುತೆ ಶಾಂತಿಗುಣದಿಂ ।
ಕಂಗೊಳಿಪ ಶಿವಮೂರ್ತಿನಾಮಸ್ವಾಮಿಯಡಿಗಳಿಗೇ ॥ ೩೯ ॥

॥ ಮುಗಿದುದು ॥ ಒಟ್ಟು ಪದಗಳು ॥೧೧೨೧॥

॥ ಶ್ರೀ ಫಲಾಹಾರಶಿವಯೋಗೀಶ್ವರಪುರಾಣವು ಮುಗಿದುದು ॥

॥ ಶುಭಮಸ್ತು ॥



*

ಶ್ರೀ ಫಲಾಹಾರಶಿವಯೋಗೀಶ್ವರಪುರಾಣದ

# ಒಪ್ಪೋಲೆಯು

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೭ | ೧೪ | ಅದರೊಳೀಸಚ್ಚರಿತೆಯನು | ಆದರದೊಳೀಚರಿತೆಯನು |
| ೧೦ | ೩೦ | ಏರುತ | ಯೋರುತ |
| ೧೧ | ೧ | ಮಂಗಳಾಚರಣ ಸಂಧಿ | ಒಂದನೆಯ ಸಂಧಿ |
| ೧೧ | ೩೦ | ಶರಣಾಚಾರ್ಯರುಂ | ಶರಣರಾಚಾರ್ಯರುಂ |
| ೧೩ | ೧ | ಮಂಗಳಾಚರಣ ಸಂಧಿ | ಒಂದನೆಯ ಸಂಧಿ |
| ೪೪ | ೫ | ಯಾತ್ರಕ | ಯಾತ್ರಿಕ |
| ೪೪ | ೨೩ | ವೆಸರಂ | ವೆಸರಂ |
| ೪೫ | ೪ | ವಿಮಳ | ದಮಳ |
| ೫೨ | ೧೭ | ದುರಿವಾಯ್ತು | ದರಿವಾಯ್ತು |
| ೫೬ | ೨೬ | ೨೬೪ | ೨೬೫ |
| ೬೧ | ೧೦ | ನೋಡಿ | ಪಡೆದು |
| ೬೪ | ೩೧ | ಪುಸ್ತಕದೆ | ಮಸ್ತಕದೆ |
| ೭೦ | ೩ | ನಿಂಬುಗೊಂಡಿದೆ | ನಿಂಬುಗೊಂಡುದೆ |
| ೭೦ | ೮ | ಇಂತೆನಿತೊ | ಇನಿತೆನಿತೊ |
| ೭೪ | ೯ | ಯೊಗದೆ | ಯೋಗದೆ |
| ೭೪ | ೨೪ | ಸಿದ್ದರಸ | ಸಿದ್ಧರಸ |
| ೯೦ | ೫ | ನಾದ್ಭುತ | ನದ್ಭುತ |
| ೯೦ | ೨೦ | ಧ್ಯಾನ್ಯ | ಧ್ಯಾನ |
| ೯೦ | ೨೫ | ಧಾದದಿಂ | ಧಾನದಿಂ |
| ೯೨ | ೨೫ | ತಪ್ತಿ | ತೃಪ್ತಿ |
| ೯೭ | ೨೬ | ಮಾನಿನೀಯ | ಮಾನನೀಯ |
| ೯೮ | ೭ | ಬೇಡಿದೆನು | ಬೇಡಿದನು |
| ೯೮ | ೨೮ | ಸದ್ವೃತ್ತಳೆಸಿಸಿದ | ಸದ್ವೃತ್ತಳೆನಿಸಿದ |
| ೧೦೦ | ೨೩ | ತಮ್ಮೋ | ತಮ್ಮು |
| ೧೦೧ | ೪ | ಗುರುವೇ | ಗುರುವೆ ನಿನ್ನಾ॥ |
| ೧೦೨ | ೫ | ದಿಟ್ಟಗ | ದಿಟ್ಟಿಗ |
| ೧೧೫ | ೧೦ | ತಿರ್ಥ | ತೀರ್ಥ |
| ೧೧೬ | ೮ | ಸತ್ಕೃಯೆ | ಸತ್ಕ್ರಿಯೆ |
| ೧೨೪ | ೧೪ | ಪಡ್ಭೇ | ಷಡ್ಭೇ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೪೩ | ೪ | ಮನೆ | ವನೆ |
| ೧೪೬ | ೨೭ | ನನ್ನ ಘ | ನ್ನ ನಘ |
| ೧೫೦ | ೩೦ | ನೊಂದಿರಲುತ | ನೊಂದಿರಲ್ಕಾ |
| ೧೫೪ | ೧೨ | ಸಮುದಲ್ತೆ | ಸಮುರಲ್ತೆ |
| ೧೫೫ | ೬ | ನೀ | ನೀಂ |
| ೧೫೭ | ೧ | ಹದಿನೇಳನೆಯ ಸಂಧಿ | ಹದಿನೆಂಟನೆಯ ಸಂಧಿ |
| ೧೫೭ | ೨೬ | ಪರುಷ | ಪರುಸ |
| ೧೫೮ | ೩೦ | ತಜ್ಞಾ ಜ ಷ | ತಾಂ ಜ್ಞಾ |
| ೧೬೧ | ೧೦ | ಭೂಮಿೂ | ಭೂಮಿಯು |
| ೧೬೪ | ೨೬ | ಮುಗ್ದ | ಮುಗ್ಧ |
| ೧೭೦ | ೧೦ | ಗೆರೆಯುತೆ | ಗೊರೆಯುತೆ |
| ೧೭೧ | ೧೨ | ಮೇಲೆನಿಸಿತಂ | ಮೇಲೆನಿಸುತಂ |
| ೧೭೨ | ೩ | ತದ್ಗುರ | ತದ್ಗುರು |
| ೧೭೫ | ೩೦ | ಕೊಂಡಾ | ಕೊಂಡಾ |
| ೧೭೬ | ೧೩ | ನಲ್ಲಿರುವ | ನ್ನಲ್ಲಿರುವ |
| ೧೮೦ | ೧೭ | ಕಾಶ್ಚರ್ಯ | ಕಾಶ್ಚರ್ಯ |
| ೧೮೬ | ೩೦ | ಮೊಹಿ | ಮೋಹಿ |
| ೧೯೩ | ೨೦ | ದೋರೆ | ದೊರೆ |
| ೧೯೫ | ೧೭ | ಖಡ್ಗಗಳೆಂದ | ಖಡ್ಗಗಳೆಂದೆ |
| ೧೯೬ | ೨೨ | ಮೆಲಿಟ್ಟೆ | ಮೇಲಿಟ್ಟೆ |
| ೨೦೩ | ೨೦ | ಯೊಗಿ | ಯೋಗಿ |
| ೨೦೪ | ೨೪ | ವಿಸುಪ | ಮಿಸುಪ |
| ೨೧೨ | ೧೬ | ತ್ಫಲದ | ತ್ತಲಘು |
| ೨೧೩ | ೧೯ | ಸತ್ಕ್ರಿಯೆ | ಸತ್ಕ್ರಿಯೆ |
| ೨೧೪ | ೨೨ | ಶವ | ಶಿವ |
| ೨೧೬ | ೧೦ | ಯುರು | ಯುರೆ |
| ೨೨೬ | ೧೨ | ಸುಡವ | ಸುಡುವ |
| ೨೨೭ | ೨೮ | ಧಾರ್ವಿಕ | ಧಾರ್ಮಿಕ |

ಮುದ್ರಣ ನಡೆದಿರುವಾಗ, ನಡುವೆ ಅಕಸ್ಮಾತ್ ಕಣ್ಣಿಗೆ ಬಿದ್ದ ಕೆಲವು ತಪ್ಪುಗಳು ತಿದ್ದಲ್ಪಟ್ಟಿರುತ್ತವೆ. ಆ ತಪ್ಪುಗಳು ತಿದ್ದಲ್ಪಡುವುದಕ್ಕಿಂತಲೂ ಮೊದಲು ಮುದ್ರಿತವಾದ ಪುಟಗಳಲ್ಲಿ ಹಾಗೇ ಉಳಿದಿರುತ್ತವೆ. ಆ ತಪ್ಪುಗಳು ಯಾವ ಪುಸ್ತಕದಲ್ಲಿ ಬರುವವೊ ಅಲ್ಲಿ ನೋಡಿ ತಿದ್ದಿಕೊಳ್ಳಲೆಂದು, ಆ ತಪ್ಪು-ಒಪ್ಪುಗಳನ್ನು ಸಾಮಾನ್ಯವಾಗಿ ಈ ಒಪ್ಪೋಲೆಯಲ್ಲಿ ಹಾಕಿರುತ್ತದೆ.

---